


ಸಮಗ್ರ
ವಚನ
ಸಂಪುಟ

ಜನಪ್ರಿಯ ಆವೃತ್ತಿ

# ಸಿದ್ಧರಾಮೇಶ್ವರ ವಚನಸಂಪುಟ

ಸಂಪಾದಕ
ಡಾ. ಎಸ್. ವಿದ್ಯಾಶಂಕರ





ಕರ್ನಾಟಕ ಸರ್ಕಾರ
ಕನ್ನಡ ಪುಸ್ತಕ ಪ್ರಾಧಿಕಾರ
ಬೆಂಗಳೂರು

೧. ಬಸವಣ್ಣನವರ ವಚನಸಂಪುಟ - ಸಂ : ಡಾ. ಎಂ. ಎಂ. ಕಲಬುರ್ಗಿ
೨. ಅಲ್ಲಮಪ್ರಭುದೇವರ ವಚನಸಂಪುಟ - ಸಂ : ಡಾ. ಬಿ. ವ್ಹಿ. ಮಲ್ಲಾಪುರ
೩. ಚೆನ್ನಬಸವಣ್ಣನವರ ವಚನಸಂಪುಟ - ಸಂ : ಡಾ. ಬಿ. ವ್ಹಿ. ಮಲ್ಲಾಪುರ
೪. ಸಿದ್ಧರಾಮೇಶ್ವರ ವಚನಸಂಪುಟ - ಸಂ : ಡಾ. ಎಸ್. ವಿದ್ಯಾಶಂಕರ
೫. ಶಿವಶರಣೆಯರ ವಚನಸಂಪುಟ - ಸಂ : ಡಾ. ವೀರಣ್ಣ ರಾಜೂರ
೬. ಸಂಕೀರ್ಣ ವಚನಸಂಪುಟ : ಒಂದು - ಸಂ : ಡಾ. ಎಂ. ಎಂ. ಕಲಬುರ್ಗಿ
೭. ಸಂಕೀರ್ಣ ವಚನಸಂಪುಟ : ಎರಡು - ಸಂ : ಡಾ. ಎಸ್. ವಿದ್ಯಾಶಂಕರ
೮. ಸಂಕೀರ್ಣ ವಚನಸಂಪುಟ : ಮೂರು - ಸಂ : ಡಾ. ಬಿ. ಆರ್. ಹಿರೇಮಠ
೯. ಸಂಕೀರ್ಣ ವಚನಸಂಪುಟ : ನಾಲ್ಕು - ಸಂ : ಡಾ. ಬಿ. ಆರ್. ಹಿರೇಮಠ
೧೦. ಸಂಕೀರ್ಣ ವಚನಸಂಪುಟ : ಐದು - ಸಂ : ಡಾ. ವೀರಣ್ಣ ರಾಜೂರ
೧೧. ಸಂಕೀರ್ಣ ವಚನಸಂಪುಟ : ಆರು - ಸಂ : ಎಸ್. ಶಿವಣ್ಣ
೧೨. ಸಂಕೀರ್ಣ ವಚನಸಂಪುಟ : ಏಳು - ಸಂ : ಡಾ. ವೀರಣ್ಣ ರಾಜೂರ
೧೩. ಸಂಕೀರ್ಣ ವಚನಸಂಪುಟ : ಎಂಟು - ಸಂ : ಡಾ. ವೀರಣ್ಣ ರಾಜೂರ
೧೪. ಸಂಕೀರ್ಣ ವಚನಸಂಪುಟ : ಒಂಬತ್ತು - ಸಂ : ಡಾ. ವೀರಣ್ಣ ರಾಜೂರ
೧೫. ವಚನ ಪರಿಭಾಷಾಕೋಶ - ಸಂ : ಡಾ. ಎನ್. ಜಿ. ಮಹಾದೇವಪ್ಪ

# ಸಿದ್ಧರಾಮೇಶ್ವರ ವಚನಸಂಪುಟ

ಸಂಪಾದಕ

**ಡಾ. ಎಸ್. ವಿದ್ಯಾಶಂಕರ**

ವಿಶ್ರಾಂತ ಕನ್ನಡ ಪ್ರಾಧ್ಯಾಪಕರು, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು



ಕರ್ನಾಟಕ ಸರ್ಕಾರ

**ಕನ್ನಡ ಪುಸ್ತಕ ಪ್ರಾಧಿಕಾರ**

ಬೆಂಗಳೂರು

**SIDDARAMESHWARA VACHANASAMPUTA** : Complete Vachanas of Shree Siddarameshwara, Ed. by Dr. S. Vidyashankar Bangalore and Published by The Administrative Officer, Kannada Pusthaka Pradhikara (Kannada Book Authority), Pampa Mahakavi Road, Chamarajpet, Bangalore - 560 018

ISBN : 81-7713-098-6

Pp. lvi+606



ಪ್ರಥಮ ಮುದ್ರಣ : ೧೯೯೩
ದ್ವಿತೀಯ ಪರಿಷ್ಕೃತ ಮುದ್ರಣ : ೨೦೦೧

ಪ್ರತಿ : ಐದು ಸಾವಿರ

ಬೆಲೆ : **ರೂ. ೮೫೦/-**
(೧೫ ಸಂಪುಟಗಳ ಸೆಟ್)

**ಛಾಯಾಕ್ಷರ ಜೋಡಣೆ:**
ವರ್ಷಿಣಿ ಗ್ರಾಫಿಕ್ಸ್, ಬೆಂಗಳೂರು-೪೦ ✆ : 3402575

**ಮುದ್ರಕರು :**
ಸ್ನೇಹಾ ಪ್ರಿಂಟರ್ಸ್
ನಂ. ೧೧೪, ೪ನೇ ಅಡ್ಡರಸ್ತೆ, ಬಿ.ಸಿ.ಸಿ. ಬಡಾವಣೆ
ಅತ್ತಿಗುಪ್ಪೆ, ವಿಜಯನಗರ ೨ನೇ ಹಂತ
ಬೆಂಗಳೂರು - ೪೦ ✆ : 3302417, 3392814

ಸಮಗ್ರ ವಚನಸಾಹಿತ್ಯದ ಜನಪ್ರಿಯ ಆವೃತ್ತಿ ಪ್ರಕಟನ ಯೋಜನೆ

*

## ಸಂಪಾದಕ ಮಂಡಳಿ



# ಮುನ್ನುಡಿ

**ಎಸ್. ಎಂ. ಕೃಷ್ಣ**
ಮುಖ್ಯಮಂತ್ರಿಗಳು

ಕನ್ನಡನಾಡಿನ ಪ್ರಥಮ ಪ್ರಜಾಸಾಹಿತ್ಯವಾಗಿರುವ ವಚನವಾಙ್ಮಯ ನಮ್ಮ ಪರಂಪರೆಯ ಅಪೂರ್ವ ಸಾಂಸ್ಕೃತಿಕ ಆಸ್ತಿಯೆನಿಸಿದೆ. ಅನೇಕ ಜನ ವಿದ್ವಾಂಸರು, ಅನೇಕ ಸಂಸ್ಥೆಗಳು ಈ ಸಾಹಿತ್ಯವನ್ನು ಬೆಳಕಿಗೆ ತರಲು ಕಳೆದ ನೂರು ವರ್ಷಗಳಿಂದ ದುಡಿಯುತ್ತ ಬಂದುದು, ಇದರ ವ್ಯಾಪಕತೆಯ ದ್ಯೋತಕವಾಗಿದೆ. ಹೀಗೆ ಪ್ರಕಟವಾಗಿದ್ದ ಮತ್ತು ಅಪ್ರಕಟಿತ ಸ್ಥಿತಿಯಲ್ಲಿದ್ದ ಈ ಸಾಹಿತ್ಯದ ದ್ವಿತೀಯ ಆವೃತ್ತಿಯನ್ನು ವಚನ ಪರಿಭಾಷಾಕೋಶವೂ ಒಳಗೊಂಡಂತೆ ೧೫ ಸಂಪುಟಗಳ ಮೂಲಕ ಕರ್ನಾಟಕ ಸರ್ಕಾರ ಹೊರತರುತ್ತಿರುವುದು, ನಮ್ಮ ಸಾಹಿತ್ಯ ಪ್ರಕಟಣೆಯ ಇತಿಹಾಸದಲ್ಲಿ ಒಂದು ಗಣ್ಯ ಸಾಧನೆಯೆಂದೇ ಹೇಳಬೇಕು. ಈ ಪ್ರಜಾಸಾಹಿತ್ಯವನ್ನು ಪ್ರಜೆಗಳಿಗೆ ಮುಟ್ಟಿಸುವುದು ತನ್ನ ಕರ್ತವ್ಯವೆಂದು ಭಾವಿಸಿ, ಕರ್ನಾಟಕದ ಪ್ರಜಾಸರ್ಕಾರ ಈ ಕೆಲಸವನ್ನು ಪೂರೈಸಿದೆ.

ವಚನಸಾಹಿತ್ಯಕ್ಕೆ ನಮ್ಮ ನಾಡಿನಲ್ಲಿ ಸುಮಾರು ೮೦೦ ವರ್ಷಗಳ ಇತಿಹಾಸವಿದೆ. ಈವರೆಗೆ ಬಸವಯುಗದ ಬರವಣಿಗೆಯನ್ನು ಹೊರತರಲು ವಿದ್ವಾಂಸರು ಹೆಚ್ಚು ಗಮನ ಕೊಟ್ಟಿದ್ದರು. ಈ ಯೋಜನೆ ಅದನ್ನೂ ಒಳಗೊಂಡು, ಬಸವೋತ್ತರ ಯುಗದ ಮೇಲೆಯೂ ಒತ್ತುಕೊಟ್ಟುದು ವಿಶೇಷವೆನಿಸಿದೆ. ಇದರಿಂದಾಗಿ ಈ ಯೋಜನೆಗೆ "ಒಂದು ಸಾಹಿತ್ಯ ಪ್ರಕಾರದ ಪ್ರಕಟಣೆ" ಎಂಬ ಕೀರ್ತಿ ಸಲ್ಲುತ್ತದೆ.

ವಚನವೆಂಬುದು ಚಳುವಳಿ ಸಾಹಿತ್ಯಪ್ರಕಾರವಾಗಿದೆ. ಆತ್ಮಕಲ್ಯಾಣದೊಂದಿಗೆ ಸಮಾಜಕಲ್ಯಾಣವನ್ನೂ ಕಾರ್ಯಗತಗೊಳಿಸಲು ಹೋರಾಡಿ ಮಡಿದ ಹುತಾತ್ಮರ ಸಾಹಿತ್ಯವಿದು. ರಾಜಸತ್ತೆ, ಪುರೋಹಿತಸತ್ತೆ, ಪುರುಷಸತ್ತೆಗಳೆಂಬ ಪ್ರತಿಗಾಮಿ ಸತ್ತೆಗಳ ವಿರುದ್ಧ, ಕರ್ನಾಟಕದ ಎಲ್ಲ ಸಮಾಜದ ಜನರು ನಡೆಸಿದ ಹೋರಾಟದ ಉಪನಿಷ್ಪತ್ತಿಯಾದ ಈ ಸಾಹಿತ್ಯದಲ್ಲಿ ಜೀವಪರಧ್ವನಿಗಳು ದಟ್ಟವಾಗಿ ಕೇಳಿಸುತ್ತವೆ. ಪ್ರಾಚೀನ ಕರ್ನಾಟಕದ ಬೌದ್ಧಿಕ ಶ್ರಮದ ವಿದ್ವತ್ ಜನತಾಸಾಹಿತ್ಯಕ್ಕಿಂತ ದೈಹಿಕ ಶ್ರಮದ ಜನತಾಸಾಹಿತ್ಯ ಹೇಗೆ ಭಿನ್ನವಾಗಿದೆಯೆಂಬುದನ್ನು ಕಾಣಬೇಕಾದರೆ ನಾವು ಈ ಸಾಹಿತ್ಯಕ್ಕೇ ಮೊರೆಹೊಗಬೇಕು.

"ವಿಪ್ರ ಮೊದಲು ಅಂತ್ಯಜ ಕಡೆಯಾಗಿ" ಸಮಾಜದ ಎಲ್ಲ ವರ್ಗದ ಸ್ತ್ರೀ-ಪುರುಷರ ಸಂಕೀರ್ಣ ಧ್ವನಿಗಳು ಇದರಲ್ಲಿ ತುಂಬ ಕಲಾತ್ಮಕವಾಗಿ

ಎರಕಗೊಂಡಿವೆ. ಹೀಗಾಗಿ ಸಮಗ್ರ ಕರ್ನಾಟಕದ ಪ್ರಾತಿನಿಧಿಕ ಧ್ವನಿಯೆನಿಸಿದ ಈ ಸಾಹಿತ್ಯದ ಪ್ರಕಟನೆಯು ತನ್ನ ಕರ್ತವ್ಯದ ಭಾಗವೆಂದು ಭಾವಿಸಿರುವ ಕರ್ನಾಟಕ ಸರ್ಕಾರ, ಅದನ್ನು ಸುಲಭ ಬೆಲೆಯಲ್ಲಿ ಜನತೆಗೆ ನೀಡುತ್ತಿದೆ.

ಈ ಯೋಜನೆಯ ನೇತೃತ್ವ ವಹಿಸಿ ದುಡಿದ ಡಾ. ಎಂ. ಎಂ. ಕಲಬುರ್ಗಿ ಅವರ ಶ್ರದ್ಧೆಯನ್ನು, ಸಂಪಾದಕ ಮಂಡಳಿಯ ಮಾರ್ಗದರ್ಶನವನ್ನು, ಸಂಪಾದಕರ ಶ್ರಮವನ್ನು ಸ್ಮರಿಸುತ್ತ, ಈ ಐತಿಹಾಸಿಕ ಪ್ರಕಟನೆಯ ಪರಿಷ್ಕೃತ ದ್ವಿತೀಯ ಆವೃತ್ತಿ ಸಂಪುಟಗಳನ್ನು ಕನ್ನಡ ಜನತೆಗೆ ಅರ್ಪಿಸುತ್ತೇನೆ.





# ಬಿನ್ನಹ

**ರಾಣಿ ಸತೀಶ್**
ಕನ್ನಡ ಮತ್ತು ಸಂಸ್ಕೃತಿ ಸಚಿವರು

ಸಾಹಿತ್ಯಕ್ಕೆ ಸಾಹಿತ್ಯ, ಶಾಸ್ತ್ರಕ್ಕೆ ಶಾಸ್ತ್ರವಾಗಿರುವ ವಚನವಾಙ್ಮಯ ನಮ್ಮ ಪರಂಪರೆಯ ಅಪೂರ್ವ ಸೃಷ್ಟಿಯಾಗಿದೆ; ಅತ್ಯಪೂರ್ವ ಆಸ್ತಿಯೆನಿಸಿದೆ. ಪಂಡಿತರ ಮಾರ್ಗಸಾಹಿತ್ಯಕ್ಕೆ ಪ್ರತಿಯಾಗಿ ಸಾಮಾನ್ಯರ ಈ ದೇಶೀಸಾಹಿತ್ಯ ಹೊರಹೊಮ್ಮಿದ್ದು ೧೨ನೆಯ ಶತಮಾನದಲ್ಲಿ; ಕಲಚುರಿಗಳ ರಾಜಧಾನಿಯಾಗಿದ್ದ ಕಲ್ಯಾಣದಲ್ಲಿ; ಬಸವಾದಿ ಶರಣರ ಚಳುವಳಿಯಲ್ಲಿ.

ಮೂಲತಃ ಭಾರತೀಯರದು ಆತ್ಮ ಪರಮಾತ್ಮನಾಗಬೇಕೆಂಬ ವ್ಯಕ್ತಿಕೇಂದ್ರಿತ ಸಿದ್ಧಾಂತ. ಶರಣರು ಇದನ್ನು ಸಮಾಜಕೇಂದ್ರಿತ ಸಿದ್ಧಾಂತಕ್ಕೆ ವಿಸ್ತರಿಸಿದರು. ಹೀಗಾಗಿ ವ್ಯಕ್ತಿ ಕಲ್ಯಾಣದ ಜೊತೆ ಸಮಾಜಕಲ್ಯಾಣವೂ ಈ ಚಳುವಳಿಯ ಮುಖ್ಯ ಲಕ್ಷಣವೆನಿಸಿತು. ಸಾಹಿತ್ಯ ಸಾಹಿತ್ಯಕ್ಕಾಗಿ ಅಲ್ಲ, ವ್ಯಕ್ತಿ ಪರಿವರ್ತನೆಗಾಗಿ, ಸಮಾಜ ಪರಿವರ್ತನೆಗಾಗಿಯೆಂಬ ಸಿದ್ಧಾಂತ ಇಲ್ಲಿ ಅರ್ಥ ಪಡೆಯಿತು.

೧೨ನೆಯ ಶತಮಾನದ ಹೊತ್ತಿಗೆ, ಶೂದ್ರಜೀವ ದೇವನಾಗಲಾರನೆಂಬ ಸಿದ್ಧಾಂತ ಸ್ಥಾಪಿತವಾಗಿದ್ದಿತು. ಸಮಾಜದಲ್ಲಿ ಪುರುಷ-ಸ್ತ್ರೀ, ಪ್ರಭು-ಪ್ರಜೆ, ಬ್ರಾಹ್ಮಣ-ಶೂದ್ರರಲ್ಲಿ ಸಮಾನತೆ ಸಾಧ್ಯವಿಲ್ಲವೆಂಬ ಭೇದಸಂಸ್ಕೃತಿಯೂ ನಿರ್ಮಾಣವಾಗಿದ್ದಿತು. ಈಗ, ಶೂದ್ರನಿಗೂ ದೇವರಾಗುವ ಅರ್ಹತೆಯಿದೆ; ಸ್ತ್ರೀಗೆ ಪುರುಷನಷ್ಟು - ಪ್ರಜೆಗೆ ಪ್ರಭುವಿನಷ್ಟು - ಶೂದ್ರನಿಗೆ ಬ್ರಾಹ್ಮಣನಷ್ಟು ಅಧಿಕಾರವಿದೆಯೆಂದು ಶರಣರು ವಾದಿಸಿದರು. ಇದರ ಫಲವಾಗಿ, ಹೊಸ ಸಮಾಜವೊಂದು ಸೃಷ್ಟಿಯಾಯಿತು. ಇದರಿಂದಾಗಿ ಎಲ್ಲರೂ ಸ್ವತಂತ್ರರು, ಎಲ್ಲರೂ ಸಮಾನರು, ಎಲ್ಲರೂ ಸಹೋದರರೆಂಬ ತತ್ತ್ವ ಅನುಷ್ಠಾನಕ್ಕೆ ಬಂದಿತು. ಇದರ ಮುಂದುವರಿಕೆಯೆಂಬಂತೆ ಎಲ್ಲರೂ ದುಡಿಯಬೇಕು ಎಂಬ ಕಾಯಕತತ್ತ್ವ, ಎಲ್ಲರೂ ಹಂಚಿಕೊಂಡು ಉಣ್ಣಬೇಕು ಎಂಬ ದಾಸೋಹತತ್ತ್ವಗಳು ಆಕಾರ ಪಡೆದವು.

ಹೊಸ ಸಮಾಜದ ಈ ಎಲ್ಲ ನೆಲೆಗಳನ್ನು ಗುರಿಯಿಟ್ಟು ಆಡಿದ ಶರಣರ ಮಾತು ವಚನವೆಂಬ ಸಾಹಿತ್ಯಪ್ರಕಾರವಾಗಿ ಮೂಡಿತು. ವರ್ಗಭೇದ, ವರ್ಣಭೇದ, ಲಿಂಗಭೇದವೆನ್ನದೆ ಎಲ್ಲ ಜನವರ್ಗದವರ ಸಾವಿರ ಸಾವಿರ ವಚನಗಳು ಈ ಕಾಲದಲ್ಲಿ ಸೃಷ್ಟಿಯಾದವು. ಆದರೆ ಒಮ್ಮೆಲೇ ತಲೆದೋರಿದ ಕಲ್ಯಾಣ ಕ್ರಾಂತಿಯಿಂದಾಗಿ ಈ ಸಾಹಿತ್ಯ ನಾಡಿನ ತುಂಬ ಹರಿದು ಹಂಚಿಹೋಯಿತು.

ಹೀಗೆ ಹಂಚಿಹೋಗಿದ್ದ ಈ ಸಾಹಿತ್ಯವನ್ನು ೧೫-೧೬ನೆಯ ಶತಮಾನಗಳಲ್ಲಿ

ಶೋಧಿಸುವ, ಸಂಪಾದಿಸುವ ಪ್ರಯತ್ನ ನಡೆದು, ನೂರಾರು ಸಂಪಾದನ ಕೃತಿಗಳು ಹುಟ್ಟಿ ಬಂದು, ವಚನಸಾಹಿತ್ಯ ವೀರಶೈವ ಮಠಗಳಲ್ಲಿ ತಕ್ಕ ಮಟ್ಟಿಗೆ ರಕ್ಷಿಸಲ್ಪಟ್ಟಿತು. ದುರ್ದೈವದ ಸಂಗತಿಯೆಂದರೆ ಮಠಗಳಲ್ಲಿ ಪ್ರವೇಶ ಪಡೆದ ಸಂಸ್ಕೃತ ಭಾಷೆಯಿಂದಾಗಿ ಕನ್ನಡ ಭಾಷೆಯ ಈ ವಚನಗಳು ಅಲ್ಲಿ ಮೂಲೆ ಸೇರಿದವು.

ಹೀಗೆ ಮೂಲೆಗುಂಪಾಗಿದ್ದ ವಚನಸಾಹಿತ್ಯವು ೨೦ನೆಯ ಶತಮಾನದಲ್ಲಿ ಅನೇಕ ಜನ ವಿದ್ವಾಂಸರ, ಹತ್ತಾರು ಸಂಸ್ಥೆಗಳ ಪ್ರಯತ್ನದ ಫಲವಾಗಿ ಪ್ರಕಟಣೆಗೊಳ್ಳುತ್ತ ಬಂದಿತು. ಈಗ ೧೨ನೆಯ ಶತಮಾನದ ಶರಣಸಾಹಿತ್ಯ ಪ್ರಕಟನೆಗೆ ಒತ್ತುಬಿದ್ದರೂ ಅದು ಬಿಡಿಬಿಡಿಯಾಗಿ ಪ್ರಕಟಣೆಗೊಂಡಿತು. ಆ ತರುವಾಯದ ಶರಣ ಸಾಹಿತ್ಯವಂತೂ ಉಪೇಕ್ಷೆಗೆ ಗುರಿಯಾಯಿತು. ಈ ಎರಡೂ ಕೊರತೆಗಳನ್ನು ನೀಗಿಸುವ ಉದ್ದೇಶದಿಂದ ಎಲ್ಲ ಶರಣರ ಎಲ್ಲ ವಚನಗಳನ್ನು ಸಂಪುಟ ಶ್ರೇಣಿಯಲ್ಲಿ ಪ್ರಕಟಿಸಲು ಕರ್ನಾಟಕ ಸರಕಾರ "ಸಮಗ್ರ ವಚನಸಾಹಿತ್ಯದ ಜನಪ್ರಿಯ ಆವೃತ್ತಿ ಪ್ರಕಟನ ಯೋಜನೆ"ಯನ್ನು ಕೈಗೆತ್ತಿಕೊಂಡಿತು.

ಡಾ. ಎಂ. ಎಂ. ಕಲಬುರ್ಗಿಯವರ ಪ್ರಧಾನ ಸಂಪಾದಕತ್ವದಲ್ಲಿ ವ್ಯಾಪಕ ಕಾರ್ಯ ನಡೆದು, ೨೦ ಸಾವಿರ ವಚನ, ೧೦ ಸಾವಿರ ಪುಟಗಳನ್ನೊಳಗೊಂಡ ೧೫ ಸಂಪುಟಗಳು ೧೯೯೩ರಲ್ಲಿ ಬೆಳಕು ಕಂಡವು. ಆಶ್ಚರ್ಯದ ಸಂಗತಿಯೆಂದರೆ ಇದರ ೫ ಸಾವಿರ ಪ್ರತಿಗಳು ಒಂದೇ ವರ್ಷದಲ್ಲಿ ಮಾರಾಟವಾಗಿ, ಜನರಿಂದ ಬೇಡಿಕೆ ಹೆಚ್ಚುತ್ತ ನಡೆಯಿತು. ಇದನ್ನು ಪೂರೈಸುವ ದಿಕ್ಕಿನಲ್ಲಿ ಪರಿಷ್ಕೃತ ದ್ವಿತೀಯ ಆವೃತ್ತಿ ಈಗ ಹೊರಬರುತ್ತಲಿದೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವೆಯಾಗಿ ಕನ್ನಡದ ಈ ಅಪೂರ್ವ ಆಸ್ತಿಯನ್ನು ಕನ್ನಡ ಜನತೆಗೆ ಅರ್ಪಿಸುತ್ತೇನೆ.





# ನಿರ್ದೇಶಕರ ಮಾತು

**ಕೆ. ಸಿ. ರಾಮಮೂರ್ತಿ**

ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

ವಚನಸಾಹಿತ್ಯ, ಕರ್ನಾಟಕದ ಬಹುದೊಡ್ಡ ಸಾಂಸ್ಕೃತಿಕ ಸಂಪತ್ತು. ಪ್ರಾಚೀನ ಕರ್ನಾಟಕದ ಜನಸಾಮಾನ್ಯರ ಧ್ವನಿಯಾಗಿರುವ ಇದನ್ನು ಪ್ರಕಟಿಸುವುದು, ಪ್ರಸಾರ ಮಾಡುವುದು ಜನತಂತ್ರ ಸರಕಾರದ ಮುಖ್ಯ ಕರ್ತವ್ಯವಾಗಿದೆ.

ಭಾರತದಲ್ಲಿ ಆತ್ಮೋದ್ಧಾರದ ಬಗ್ಗೆ ಉದಾತ್ತ ತತ್ವಗಳನ್ನು ಪ್ರತಿಪಾದಿಸುತ್ತ ಬಂದಿದ್ದರೂ ಸಮಾಜೋದ್ಧಾರದ ಬಗ್ಗೆ ಉಪೇಕ್ಷೆ ಬೆಳೆದು, ಅಲ್ಲಿ ಶೋಷಣೆ ವರ್ಧಿಸುತ್ತ ಬಂದುದು ನಮ್ಮ ಇತಿಹಾಸದ ಒಂದು ವಿಪರ್ಯಾಸವೇ ಸರಿ. ೧೨ನೆಯ ಶತಮಾನದಲ್ಲಿ ಉಲ್ಬಣಗೊಂಡಿದ್ದ ಈ ವಿಷಮ ಪರಿಸ್ಥಿತಿಯನ್ನು ನಾಶಗೊಳಿಸಿ, ಸಮಸ್ಥಿತಿಯನ್ನು ಸಮಾಜದಲ್ಲಿ ತರಲು ಹೋರಾಡಿದವರು, ಕಲ್ಯಾಣದ ಶರಣರು. ಈ ಕಾರ್ಯಕ್ಕಾಗಿ ಅವರು ಕೈಕೊಂಡ ಜನಪರ ಆಂದೋಲನ ನಮ್ಮ ದೇಶದ ಇತಿಹಾಸದಲ್ಲಿಯೇ ಒಂದು ವಿಶಿಷ್ಟ ಘಟನೆಯಾಗಿದೆ.

ಭಾರತದಲ್ಲಿ ರಾಜಸತ್ತೆಯ ಸ್ಥಾಪನೆಗಾಗಿ ರಾಜರು, ಮತಸತ್ತೆಯ ಸ್ಥಾಪನೆಗಾಗಿ ಧರ್ಮಗಳು ಪರಸ್ಪರ ಸಂಘರ್ಷಕ್ಕಿಳಿದುದು ಸರ್ವಶ್ರುತ. ಆದರೆ ಸಾಮಾಜಿಕ ನ್ಯಾಯದ ಸ್ಥಾಪನೆಗಾಗಿ ಈ ರಾಜಸತ್ತೆ, ಮತಸತ್ತೆಗಳ ವಿರುದ್ಧ ಸಮಾಜದ ವಿವಿಧ ಸ್ತರಗಳ ಜನತೆ, ಅದರಲ್ಲಿಯೂ ದೀನರು-ದಲಿತರು-ಮಹಿಳೆಯರು ಬೀದಿಗಿಳಿದು ನಡೆಸಿದ ಈ ಆಂದೋಲನ, ಇಪ್ಪತ್ತನೆಯ ಶತಮಾನವೂ ಆಶ್ಚರ್ಯಪಡುವ ಸಂಗತಿಯಾಗಿದೆ.

ಅಂದಿನ ಸನ್ನಿವೇಶಕ್ಕೆ ಅನುಗುಣವಾಗಿ ಧಾರ್ಮಿಕ ಕ್ಷೇತ್ರದಲ್ಲಿ ಅಂಕುರಿಸಿದ ಈ ಆಂದೋಲನ, ಸಾಮಾಜಿಕ ಕ್ಷೇತ್ರವನ್ನೂ ಆವರಿಸಿದ ಕಾರಣ, ಇದನ್ನು 'ಸಮಾಜೋ ಧಾರ್ಮಿಕ' ಆಂದೋಲನವೆಂದು ಗುರುತಿಸಲಾಗುತ್ತದೆ. ಸಮಾಜವೆನ್ನುವುದು ಸಂಕೀರ್ಣ ವ್ಯವಸ್ಥೆ. ಅದರ ಎಲ್ಲ ಸ್ತರಗಳನ್ನೂ ಎಲ್ಲ ಮಗ್ಗಲುಗಳನ್ನೂ ಬದಲಿಸಲು ಮಾಡಿದ ಪ್ರಯತ್ನವಾಗಿರುವುದರಿಂದ ಇದು ಒಂದು "ಸಮಗ್ರ ಆಂದೋಲನ"ವಾಗಿದೆ. ಈ ಆಂದೋಲನದ ನೇರ ಧ್ವನಿ, ವಚನಸಾಹಿತ್ಯ.

ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನಿಂದಾಗಿ ವ್ಯಕ್ತಿ ಸ್ವಾತಂತ್ರ್ಯ ಪಡೆದ ಜನವರ್ಗವು ವ್ಯಕ್ತಪಡಿಸಿದ ಅಭಿಪ್ರಾಯ ಸ್ವಾತಂತ್ರ್ಯದ ಫಲ, ಈ ಸಾಹಿತ್ಯ. ಹೀಗಾಗಿ ಇಲ್ಲಿ ಆತ್ಮವಿಮರ್ಶೆಯಷ್ಟೇ ವಿಪುಲವಾಗಿ ಸಮಾಜವಿಮರ್ಶೆಯನ್ನೂ ಕಾಣಬಹುದಾಗಿದೆ. ಅದರಲ್ಲಿಯೂ ವರ್ಣಭೇದ ನಿರಾಕರಣೆ, ವರ್ಗಭೇದ

ನಿರಾಕರಣೆ, ಲಿಂಗಭೇದ ನಿರಾಕರಣೆಗಳಂಥ ವಿಚಾರಗಳು ಸ್ಫೋಟಗೊಂಡುದು ಲಕ್ಷಿಸತಕ್ಕ ಸಂಗತಿಯಾಗಿದೆ. ಇಲ್ಲಿ ಪುರುಷರಷ್ಟೇ ಪ್ರಧಾನವಾಗಿ ಮಹಿಳೆಯರೂ, ಕುಲಜರಷ್ಟೇ ಪ್ರಧಾನವಾಗಿ ಅಂತ್ಯಜರೂ, ಪ್ರಭುಗಳಷ್ಟೇ ಪ್ರಧಾನವಾಗಿ ಪ್ರಜೆಗಳೂ ಬಾಳಿದುದು, ಬರೆದುದು ಬಹುಶಃ ಜಗತ್ತಿನ ಇತಿಹಾಸದಲ್ಲಿಯೇ ಏಕೈಕ ಉದಾಹರಣೆಯಾಗಿದೆ. ಇಂಥ ವಿಚಾರಶೀಲರ ಅಂದರೆ ಇವರ ತತ್ವ-ಸಾಹಿತ್ಯಗಳ ಉತ್ತರಾಧಿಕಾರಿಗಳಾದುದು ನಮ್ಮ ಭಾಗ್ಯ; ಇವರ ಸಾಹಿತ್ಯಸಂಪತ್ತನ್ನು ರಕ್ಷಿಸುವುದು, ಪ್ರಸಾರಮಾಡುವುದು ನಮ್ಮ ಕರ್ತವ್ಯ. ಈ ಕರ್ತವ್ಯದ ಭಾಗವಾಗಿ "ಸಮಗ್ರ ವಚನಸಾಹಿತ್ಯದ ಜನಪ್ರಿಯ ಆವೃತ್ತಿ ಪ್ರಕಟನ ಯೋಜನೆ"ಯನ್ನು ಕರ್ನಾಟಕ ಸರಕಾರ ಕೈಗೆತ್ತಿಕೊಂಡಿತು.

ಈವರೆಗೆ ವಚನಸಾಹಿತ್ಯ ಬಿಡಿಬಿಡಿಯಾಗಿ ಭಾಗಶಃ ಪ್ರಕಟವಾಗಿದ್ದಿತು, ಕೆಲವು ಭಾಗ ಅಪ್ರಕಟಿತ ಸ್ಥಿತಿಯಲ್ಲಿ ಉಳಿದಿದ್ದಿತು. ಇದೆಲ್ಲವನ್ನು ಕ್ರೋಢೀಕರಿಸಿ, ಪರಿಷ್ಕರಿಸಿ ಪ್ರಕಟಿಸುವುದು ಶ್ರಮದ ಕೆಲಸ. ಡಾ. ಎಂ. ಎಂ. ಕಲಬುರ್ಗಿಯವರ ಪ್ರಧಾನ ಸಂಪಾದಕತ್ವದಲ್ಲಿ, ಅನೇಕ ಜನ ವಿದ್ವಾಂಸರ ಮತ್ತು ಸಂಪಾದಕ ಮಂಡಳಿ ಸದಸ್ಯರ ಸಂಯುಕ್ತ ಪರಿಶ್ರಮದಿಂದ ಈ ಬೃಹತ್ ಯೋಜನೆ ಪೂರ್ತಿಗೊಂಡುದು ಸಂತೋಷದ ಸಂಗತಿ. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಆಶ್ರಯದಲ್ಲಿ ಅಸ್ತಿತ್ವಕ್ಕೆ ಬಂದು, ನಿರ್ದಿಷ್ಟ ಅವಧಿಯಲ್ಲಿ ಪೂರ್ಣಗೊಂಡ ಈ ಐತಿಹಾಸಿಕ ಯೋಜನೆಗಾಗಿ ಸಂಬಂಧಪಟ್ಟ ಎಲ್ಲ ವಿದ್ವಾಂಸರನ್ನು ಅಭಿನಂದಿಸುತ್ತೇನೆ. ಕನ್ನಡ ಪುಸ್ತಕ ಪ್ರಾಧಿಕಾರದ ಮೂಲಕ ಪ್ರಕಟವಾಗುತ್ತಲಿರುವ ಈ ಪರಿಷ್ಕೃತ ದ್ವಿತೀಯ ಆವೃತ್ತಿ ಸಂಪುಟಗಳನ್ನು ಕನ್ನಡ ಜನತೆಗೆ ಅರ್ಪಿಸುತ್ತೇನೆ.





# ಪ್ರಕಾಶಕರ ಮಾತು

**ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ**
ಅಧ್ಯಕ್ಷರು, ಕನ್ನಡ ಪುಸ್ತಕ ಪ್ರಾಧಿಕಾರ

ಸಮಗ್ರ ವಚನ ಸಂಪುಟಗಳ ಪರಿಷ್ಕೃತ ಆವೃತ್ತಿ ಪ್ರಕಟಣೆ ಕರ್ನಾಟಕ ಸಾಂಸ್ಕೃತಿಕ ಇತಿಹಾಸದಲ್ಲಿ ನಡೆದಿರುವ ಒಂದು ದಿವ್ಯಘಟನೆ. ವಚನಸಾಹಿತ್ಯದ ಪ್ರಕಟಣೆಗೆ ಸುಮಾರು ಎಂಬತ್ತು ವರ್ಷಗಳ ಇತಿಹಾಸವಿದೆ. ವಚನಪಿತಾಮಹ ಶ್ರೀ ಫ. ಗು. ಹಳಕಟ್ಟಿ ಅವರಿಂದ ಪ್ರಕಟಣೆಯ ದಿವ್ಯಘಟನೆ ಆರಂಭಗೊಂಡಿತು. ಇದೀಗ ಡಾ. ಎಂ. ಎಂ. ಕಲಬುರ್ಗಿಯವರ ಪ್ರಧಾನ ಸಂಪಾದಕತ್ವದ ಮೂಲಕ ಸಹಸ್ರಮಾನದ ಸೂರ್ಯೋದಯದ ವೇಳೆಗೆ ಇದು ಒಂದು ಪೂರ್ಣ ಘಟ್ಟಕ್ಕೆ ಬಂದಿದೆ. ಶರಣ ಸಾಹಿತ್ಯದ ಪ್ರಕಟಣೆಯ ಇತಿಹಾಸದಲ್ಲಿ ಇದು ಚಾರಿತ್ರಿಕ ಘಟನೆಯೇ ಸರಿ. ಈ ನಡುವೆ ವಚನಸಾಹಿತ್ಯದ ಸಹಸ್ರಾರು ಬಿಡಿ ಪ್ರಕಟಣೆಗಳು ಹೊರಬಂದಿವೆ. ವಿಶ್ವವಿದ್ಯಾಲಯಗಳು, ಖಾಸಗಿ ಸಂಸ್ಥೆಗಳು, ಮಠಗಳು, ಶಿಕ್ಷಣ ಕೇಂದ್ರಗಳು, ಖಾಸಗಿ ಪ್ರಕಾಶಕರು, ಆಸಕ್ತ ಲೇಖಕರು ಬಿಡಿಬಿಡಿಯಾಗಿ ವಚನಸಾಹಿತ್ಯದ ಪ್ರಕಟಣೆಗಳನ್ನು ಹೊರತಂದಿದ್ದಾರೆ. ನಾವು ಪ್ರೀತಿಯಿಂದ ಇವರನ್ನೆಲ್ಲ ಈ ಹೊತ್ತಿನಲ್ಲಿ ನೆನೆಯುವುದು, ಆ ಪಾತ್ರಃಸ್ಮರಣೀಯರ ಹಾದಿಯಲ್ಲಿ ಮುನ್ನಡೆಯುವುದು ನಮ್ಮ ಸಾಂಸ್ಕೃತಿಕ ಕರ್ತವ್ಯ.

ಸಮಗ್ರ ವಚನ ಸಂಪುಟಗಳು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ೧೯೯೩ರಲ್ಲಿ ಪ್ರಕಟಗೊಂಡಿದ್ದವು. ಆ ಸಂಪುಟಗಳು ಪ್ರಕಟವಾದ ವರ್ಷವೇ ಕನ್ನಡಿಗರ ಮನೆಯನ್ನು ಸೇರಿಕೊಂಡವು. ಆದರೆ, ಸಂಪುಟಗಳ ಬೇಡಿಕೆ ಮಹಾಜನರಿಂದ ಇದ್ದೇ ಇತ್ತು. ಅನಂತರ ಕರ್ನಾಟಕ ಸರ್ಕಾರ ಪರಿಷ್ಕೃತ ಆವೃತ್ತಿಗೆ ತಾತ್ವಿಕ ಒಪ್ಪಿಗೆ ನೀಡಿತು. ಹೀಗೆ ಒಪ್ಪಿಗೆ ನೀಡಿದ ಸಂಸ್ಕೃತಿ ಸಂಪನ್ನರೂ ಮುಖ್ಯಮಂತ್ರಿಗಳೂ ಆದ ಸನ್ಮಾನ್ಯ ಶ್ರೀ ಎಸ್. ಎಂ. ಕೃಷ್ಣ ಅವರನ್ನು ತುಂಬು ಹೃದಯದಿಂದ ಈ ಪ್ರಕಟಣೆಯ ದಿವ್ಯಘಟನೆಯ ಹೊತ್ತಿನಲ್ಲಿ ಸ್ಮರಿಸಿಕೊಳ್ಳುತ್ತೇನೆ. ಅನಂತರ ನಾಡಿನ ಶ್ರೇಷ್ಠ ವಿದ್ವಾಂಸರಾದ ಡಾ. ಎಂ. ಎಂ. ಕಲಬುರ್ಗಿ ಅವರ ಪ್ರಧಾನ ಸಂಪಾದಕತ್ವದಲ್ಲಿ ವಚನ ಸಂಪುಟಗಳ ಪರಿಷ್ಕೃತ ಆವೃತ್ತಿ ಸಿದ್ಧಗೊಂಡವು. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಈ ಸಂಪುಟಗಳನ್ನು ಪ್ರಕಟಿಸಬೇಕಿತ್ತು. ಆದರೆ, ಆ ಕಾರ್ಯವನ್ನು ಕನ್ನಡ ಪುಸ್ತಕ ಪ್ರಾಧಿಕಾರಕ್ಕೆ ಒಪ್ಪಿಸಿದ್ದು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಔದಾರ್ಯ; ಅದನ್ನು ಪಡೆದು ಪ್ರಕಟಿಸುತ್ತಿರುವುದು ಪುಸ್ತಕ ಪ್ರಾಧಿಕಾರದ ಭಾಗ್ಯ. ಈ ಭಾಗ್ಯಕ್ಕೆ ಕಾರಣರಾದವರು ಕನ್ನಡ ಮತ್ತು ಸಂಸ್ಕೃತಿ

ಇಲಾಖೆಯ ಸಚಿವೆಯರಾದ ಮಾನ್ಯ ಶ್ರೀಮತಿ ರಾಣಿ ಸತೀಶ್ ಮತ್ತು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ನಿರ್ದೇಶಕರಾದ ಶ್ರೀ ಕೆ. ಸಿ. ರಾಮಮೂರ್ತಿ. ಇವರಿಬ್ಬರ ಆಸಕ್ತಿಯ ಫಲ ಈ ಕಾರ್ಯವನ್ನು ಆಗುಗೊಳಿಸಿತು. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಮಾನ್ಯ ಸಚಿವೆಯರ ಆಪ್ತ ಕಾರ್ಯದರ್ಶಿ ಡಾ. ಎ. ಆರ್. ಮಂಜುನಾಥ್, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕಾರ್ಯದರ್ಶಿ ಶ್ರೀ ಸಿ. ಎಸ್. ಕೇದಾರ್, ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಜಂಟಿ ನಿರ್ದೇಶಕ ಶ್ರೀ ಕಾ. ತ. ಚಿಕ್ಕಣ್ಣ ಪ್ರಕಟಣೆಯ ವಿವಿಧ ಹಂತಗಳಲ್ಲಿ ನನಗೆ ನೆರವಾಗಿದ್ದಾರೆ. ಈ ಮೇಲಿನ ಎಲ್ಲ ಮಹನೀಯರಿಗೂ ಕನ್ನಡ ಪುಸ್ತಕ ಪ್ರಾಧಿಕಾರವು ಅನನ್ಯವಾದ ಕೃತಜ್ಞತೆಯನ್ನು ಅರ್ಪಿಸುತ್ತದೆ.

ಸಮಗ್ರವಚನ ಸಂಪುಟಗಳ ಪರಿಷ್ಕೃತ ಆವೃತ್ತಿಯ ಸಂಪಾದಕ ಮಂಡಳಿಯ ವಿದ್ವಾಂಸರಾದ ಡಾ. ಎಂ. ಎಂ. ಕಲಬುರ್ಗಿ, ಡಾ. ಎಂ. ಚಿದಾನಂದಮೂರ್ತಿ, ಡಾ. ಸಿ. ಪಿ. ಕೃಷ್ಣಕುಮಾರ್, ಡಾ. ಎಸ್. ವಿದ್ಯಾಶಂಕರ್, ಎಸ್. ಶಿವಣ್ಣ ಇವರನ್ನು, ಕನ್ನಡ ಪುಸ್ತಕ ಪ್ರಾಧಿಕಾರದ ಮೂಲಕ ಹೊರತರಲು ಒಪ್ಪಿಗೆ ನೀಡಿದ ಪುಸ್ತಕ ಪ್ರಾಧಿಕಾರದ ಸ್ಥಾಯಿಸಮಿತಿ ಸದಸ್ಯರಾದ ಪ್ರೊ. ರಾಮೇಗೌಡ, ಶ್ರೀ ಆರ್. ಜಿ. ಹಳ್ಳಿ ನಾಗರಾಜ್, ಪ್ರೊ. ಸಿದ್ಧಪ್ಪ ಉತ್ನಾಳ್, ಶ್ರೀ ಛಾಯಾಪತಿ ಮತ್ತು ಶ್ರೀಮತಿ ಇಂದಿರಾ ಶಿವಣ್ಣ ಇವರನ್ನು ತುಂಬು ಮನಸ್ಸಿನಿಂದ ನೆನೆಯುತ್ತೇನೆ. ಹದಿನೈದು ಸಂಪುಟಗಳ ಅಕ್ಷರ ಜೋಡಣೆ ಮಾಡಿಕೊಟ್ಟವರನ್ನು, ಬಹು ಅಂದವಾಗಿ ಮುದ್ರಿಸಿದವರನ್ನು, ಸುಂದರವಾಗಿ ಮತ್ತು ಆಕರ್ಷಕವಾಗಿ ಸಂಪುಟಗಳನ್ನು ಬೈಂಡ್ ಮಾಡಿಕೊಟ್ಟವರನ್ನು, ಮುಖಪುಟ ವಿನ್ಯಾಸ ಮಾಡಿಕೊಟ್ಟವರನ್ನು, ತುಂಬು ಪ್ರೀತಿಯಿಂದ ನೆನೆಯುವುದು ನನ್ನ ಕರ್ತವ್ಯ. ಇವರ ಮುದ್ರಣ ಪರಿಣತಿಯ ಫಲ ಈ ಸಂಪುಟಗಳಿಗೆ ದೊರಕಿ ಅಂದವಾಗಲು ಕಾರಣವಾಗಿದೆ. ಪುಸ್ತಕ ಪ್ರಾಧಿಕಾರದ ಆಡಳಿತಗಾರರಾದ ಶ್ರೀ ಬಲವಂತರಾವ್ ಪಾಟೀಲ ನನ್ನೊಡನೆ ಉದ್ದಕ್ಕೂ ಸಹಕರಿಸಿದ್ದಾರೆ. ಈ ಮೇಲೆ ಹೆಸರಿಸಿದ ಎಲ್ಲ ಮಹನೀಯರನ್ನು ಕೃತಜ್ಞತಾಪೂರ್ವಕವಾಗಿ ನೆನೆಯುತ್ತೇನೆ.

ಕನ್ನಡ ಪುಸ್ತಕ ಪ್ರಾಧಿಕಾರವು ಪ್ರಕಟಿಸುತ್ತಿರುವ ಸಮಗ್ರ ವಚನ ಸಂಪುಟಗಳನ್ನು ಕನ್ನಡದ ಮಹಾಜನತೆ ಪ್ರೀತಿಯಿಂದ ಸ್ವೀಕರಿಸಬೇಕೆಂದು ಬೇಡುತ್ತೇನೆ.

■■



# ಸಂಪಾದಕೀಯ

**ಡಾ. ಎಂ. ಎಂ. ಕಲಬುರ್ಗಿ**
ಪ್ರಧಾನ ಸಂಪಾದಕರು

ಕರ್ನಾಟಕದ ಇತಿಹಾಸದಲ್ಲಿ ಶಿವಶರಣರ ಚಳುವಳಿ ಒಂದು ಅಪೂರ್ವ ಘಟನೆ, ವಚನಗಳ ಸೃಷ್ಟಿ ಒಂದು ಅನನ್ಯ ಪ್ರಯೋಗ. ಸಮಾಜದ ಎಲ್ಲ ವರ್ಗ, ಎಲ್ಲ ವರ್ಣಗಳ ಜನಸಮುದಾಯ ಬಸವಣ್ಣನವರ ನೇತೃತ್ವದಲ್ಲಿ ಕೈಕೊಂಡಿದ್ದ ವ್ಯಕ್ತಿಕಲ್ಯಾಣ ಮತ್ತು ಸಮಾಜಕಲ್ಯಾಣ ಚಳುವಳಿಯ ಸೃಷ್ಟಿಯೆನಿಸಿದ ಈ ವಚನಗಳು, ಜಾಗತಿಕ ಸಾಹಿತ್ಯದ ಮಹತ್ವಪೂರ್ಣ ಭಾಗವೆನಿಸಿವೆ.

'ವಚನ' ಶಬ್ದಕ್ಕೆ ಇಲ್ಲಿ ಗದ್ಯ ಸಾಹಿತ್ಯಪ್ರಕಾರವೆಂದು ಅರ್ಥವಲ್ಲ; ಪ್ರತಿಜ್ಞೆ, ಆತ್ಮಸಾಕ್ಷಿಯ ಮಾತು ಎಂದು ಅರ್ಥ. ನಡೆ ಹೇಗೇ ಇರಲಿ, ನುಡಿ ಮಾತ್ರ ಕಲಾತ್ಮಕವಾಗಿದ್ದುದು 'ರಚನೆ'ಯಾದರೆ, ನಡೆದಂತೆ ನುಡಿದ ಆತ್ಮಸಾಕ್ಷಿಯ ವಾಣಿ 'ವಚನ'ವೆನಿಸುತ್ತದೆ.

ವಚನಗಳು ಆಚಾರ್ಯರ ಸಾಹಿತ್ಯವಲ್ಲ, ಅನುಭಾವಿಗಳ ಸಾಹಿತ್ಯ. ಆಚಾರ್ಯರು ಜೀವಿಸಿರುವಾಗಲೇ ತಮ್ಮ ವಿಚಾರಗಳನ್ನು ಬರೆದು, ಅವುಗಳಿಗೆ ಸಂವಿಧಾನಾತ್ಮಕ ಮುದ್ರೆ ಒತ್ತುತ್ತಾರೆ. ಅನುಭಾವಿಗಳು ಮಾತ್ರ ತಮ್ಮ ಚಿಂತನೆಯನ್ನು ಹೃದಯದಿಂದ ಹೃದಯಕ್ಕೆ ಮುಟ್ಟುವಂತೆ ಬಿಡಿಮಾತುಗಳ ಮೂಲಕ ಹೇಳುತ್ತಾರೆ. ಬಿಡಿಮುತ್ತುಗಳಂತೆ ಸೂರೆಯಾದ ಅವುಗಳನ್ನು ಸಂಗ್ರಹಿಸುವ, ಸಂಕಲಿಸುವ, ಸಂಪಾದಿಸುವ ಕೆಲಸವನ್ನು ಉತ್ತರಕಾಲೀನ ಅನುಯಾಯಿಗಳು ಮಾಡುತ್ತಾರೆ. ಏಸುವಿನ ವಾಣಿಯಾದ ಬೈಬಲ್, ಮಹಮ್ಮದನ ಉಪದೇಶವಾದ ಕುರಾನ್, ಬುದ್ಧನ ಬೋಧೆಯಾದ ತ್ರಿಪಿಟಕ, ಶರಣರ ಸಂದೇಶವಾದ ವಚನಕೃತಿಗಳು ಈ ಬಗೆಯ ಉತ್ತರಕಾಲೀನ ಸಂಕಲನಗಳಾಗಿವೆ.

ಮೂಲತಃ ವಚನನಿಧಿ ಜನರಿಂದ, ಜನರಿಗಾಗಿ ಹುಟ್ಟಿ, ಜನರ ಮಧ್ಯದಲ್ಲಿ ಬಾಳಿದ ಸಾಹಿತ್ಯವಾಗಿದೆ. ಹೀಗಾಗಿ ಹನ್ನೆರಡರಿಂದ ಹದಿನೈದನೆಯ ಶತಮಾನಕ್ಕೆ ಬರುವಷ್ಟರಲ್ಲಿ ಅದಕ್ಕೆ ವಿಪುಲ ಭಿನ್ನಪಾಠಗಳು ಹುಟ್ಟಿಕೊಂಡವು. ಆಮೇಲೆ ಸಂಕಲನ-ಸಂಪಾದನ ಕಾರ್ಯದಿಂದಾಗಿ ಕೆಲವೊಮ್ಮೆ ಪ್ರಕ್ಷಿಪ್ತ ವಚನಗಳೂ ತಲೆಯೆತ್ತಿದವು. ಈ ಗೊಂದಲ ಕಾರಣವಾಗಿ ಕವಿಸಾಹಿತ್ಯಕ್ಕಿಂತ ವಚನಸಾಹಿತ್ಯದ ಸಂಪಾದನಕಾರ್ಯ ತುಂಬ ಜಟಿಲಸ್ವರೂಪ ದ್ದಾಗಿದೆ.

ಪ್ರಾಚೀನ ಕನ್ನಡ ಸಾಹಿತ್ಯದ ಪ್ರಕಟನಕಾರ್ಯವನ್ನು ಮೊದಲು ಕೈಗೆತ್ತಿಕೊಂಡವರು, ಕ್ರೈಸ್ತ ಪಾದ್ರಿಗಳು. ಜೈನ ಪುರಾಣ-ಕಾವ್ಯಗಳನ್ನು, ವೈದಿಕ ಪುರಾಣ-ಕೀರ್ತನೆಗಳನ್ನು, ವೀರಶೈವ ಶಾಸ್ತ್ರ-ಪುರಾಣಗಳನ್ನು ಪ್ರಕಟಿಸಿದ ಇವರು, ವಚನಸಾಹಿತ್ಯವನ್ನು ಮಾತ್ರ ತಪ್ಪಿಯೂ ಪ್ರಕಟಿಸಲಿಲ್ಲ. ದೇಶೀ ವಿದ್ವಾಂಸರೇ ಈ ಕೆಲಸವನ್ನು ಪ್ರಾರಂಭ ಮಾಡಬೇಕಾಯಿತು. ಈ

ದಿಸೆಯಲ್ಲಿ ಮೊದಲು ಪ್ರಕಟವಾದ ವಚನಕೃತಿ (೧೮೮೩) 'ಅಪ್ರಮಾಣ ಕೂಡಲ ಸಂಗಮದೇವಾ' ಮುದ್ರಿಕೆಯ ವಚನಗಳನ್ನೊಳಗೊಂಡ "ಶಿಖಾರತ್ನಪ್ರಕಾಶ"[1]. ಆಮೇಲೆ ಒಂದು ಮೈಲಿಗಲ್ಲಿನಂತೆ ಪ್ರಕಟವಾದ ವಚನಕೃತಿ, ಬಸವಣ್ಣನವರ ಷಟ್‌ಸ್ಥಲವಚನ ಸಂಪುಟ. ಅದು ಮೊದಲು ಬೆಳಕು ಕಂಡುದು ೧೮೮೯ರಲ್ಲಿ[2]. ಅಲ್ಲಿಂದ ಸರಿಯಾಗಿ ಒಂದು ಶತಮಾನ ಕಳೆಯುವಷ್ಟರಲ್ಲಿ ಅಂದರೆ ೧೯೮೮ರಲ್ಲಿ ಈ 'ಸಮಗ್ರ ವಚನಸಾಹಿತ್ಯದ ಜನಪ್ರಿಯ ಆವೃತ್ತಿ ಪ್ರಕಟನ ಯೋಜನೆ' ಅಸ್ತಿತ್ವಕ್ಕೆ ಬಂದುದು ಒಂದು ಯೋಗಾಯೋಗವಾಗಿದೆ; ವಚನಸಾಹಿತ್ಯದ ಪ್ರಕಟನಚರಿತ್ರೆಯ ಶತಮಾನಸ್ಮರಣೆಯಾಗಿದೆ.

ಈ ನೂರು ವರ್ಷಗಳ ಕಾಲವ್ಯಾಪ್ತಿಯಲ್ಲಿ ವಚನಸಾಹಿತ್ಯ ಪ್ರಕಟಣೆಗಾಗಿ ಅನೇಕರು ದುಡಿದಿರುವರಾದರೂ ಯೋಜನಾಬದ್ಧ ವ್ಯಾಪಕ ಪ್ರಯತ್ನಗಳು, ವಿಜಾಪುರ, ಧಾರವಾಡ, ಗದಗಗಳಲ್ಲಿ ಹೀಗೆ ಜರುಗಿವೆ :

೧. ಶಿವಾನುಭವ ಗ್ರಂಥಮಾಲೆ, ವಿಜಾಪುರ - ಡಾ. ಫ. ಗು. ಹಳಕಟ್ಟಿ

೨. ಕನ್ನಡ ಅಧ್ಯಯನ ಪೀಠ, ಕ. ವಿ. ಧಾರವಾಡ - ಡಾ. ಆರ್. ಸಿ. ಹಿರೇಮಠ

೩. ತೋಂಟದಾರ್ಯಮಠ, ಗದಗ - ಡಾ. ಎಂ. ಎಂ. ಕಲಬುರ್ಗಿ

ವಚನಸಾಹಿತ್ಯದ ಪ್ರಕಟನ ಕಾರ್ಯ ಹೀಗೆ ವಿಜಾಪುರದಲ್ಲಿ ಪ್ರಾರಂಭವಾಗಿ, ಧಾರವಾಡದಲ್ಲಿ ಬೆಳೆದು, ಗದುಗಿನಲ್ಲಿ ಒಂದು ನಿಲುಗಡೆಗೆ ಬರುತ್ತಿದ್ದಂತೆಯೇ, ಈಗ ನಾಲ್ಕನೆಯ ಘಟ್ಟದಲ್ಲಿ 'ಸಮಗ್ರ ವಚನಸಾಹಿತ್ಯದ ಜನಪ್ರಿಯ ಆವೃತ್ತಿ ಪ್ರಕಟನ ಯೋಜನೆ'ಯ ಅಂಗವಾಗಿ, ೧೫ ಸಂಪುಟಗಳು ಕರ್ನಾಟಕ ಸರಕಾರದ ಮೂಲಕ ಪ್ರಕಟವಾಗುತ್ತಲಿವೆ. ಸುಮಾರು ೧೧೦ ಜನ ಪ್ರಕ್ಷಿಪ್ತ ವಚನಕಾರರನ್ನೂ ಪ್ರಕ್ಷಿಪ್ತವಾಗಿರಬಹುದಾದ ಅನೇಕ ವಚನಗಳನ್ನೂ ಕೈಬಿಟ್ಟು ಸಂಯೋಜಿಸಲಾದ ಈ ಹದಿನೈದು ಸಂಪುಟಗಳ ಒಟ್ಟು ಪುಟ ಸುಮಾರು ಹತ್ತು ಸಾವಿರ; ಒಟ್ಟು ವಚನ ಸಂಖ್ಯೆ ಸುಮಾರು ಇಪ್ಪತ್ತು ಸಾವಿರ. ವಚನಸಾಹಿತ್ಯವನ್ನು ಒಮ್ಮೆ ಸಮಗ್ರವಾಗಿ ಹೊರತಂದ ಪ್ರಥಮ ಮಹತ್ವಾಕಾಂಕ್ಷೆಯ ಯೋಜನೆಯಿದು. ಈ ಸಾಹಿತ್ಯದ ಗಡಿಗೆರೆಗಳನ್ನು, ಸಂಖ್ಯಾಬಾಹುಳ್ಯವನ್ನು ವ್ಯವಸ್ಥೆಗೊಳಿಸಿ ಕೊಟ್ಟು, ವಿದ್ವಾಂಸರ ಅಧ್ಯಯನದ ಮುಂದುವರಿಕೆಗೆ ಒಂದು ನಿರ್ದಿಷ್ಟ ಚೌಕಟ್ಟನ್ನು ಒದಗಿಸಿದ ಹಿರಿಮೆ ಈ ಯೋಜನೆಗೆ ಸಲ್ಲುತ್ತದೆ.

ಈ ಯೋಜನೆಯ ಅಂಗವಾಗಿ ಬಸವಣ್ಣನವರ ವಚನ, ಪ್ರಭುದೇವರ ವಚನ, ಚೆನ್ನಬಸವಣ್ಣನವರ ವಚನ, ಸಿದ್ಧರಾಮೇಶ್ವರ ವಚನ, ಶಿವಶರಣೆಯರ ವಚನ - ಹೀಗೆ ಐದು ಸಂಪುಟಗಳು, ಬಸವ ಸಮಕಾಲೀನ ಮಿಕ್ಕ ಶರಣರ ವಚನಗಳ ನಾಲ್ಕು ಸಂಪುಟಗಳು.

---

೧. ಮೊದಲು ಪ್ರಕಟವಾದ ವಚನಕೃತಿ ಅಖಂಡೇಶ್ವರ ವಚನ (೧೮೮೨)ವೆಂದು ಡಾ. ಬಿ. ನಂಜುಂಡ ಸ್ವಾಮಿ ಅವರ ಅಭಿಪ್ರಾಯ. (ಬಸವಪಥ ೧೬.೬)

೨. ಬಸವಣ್ಣನವರ ಷಟ್‌ಸ್ಥಲದ ವಚನಗಳು ಪ್ರಥಮ ಸಲ ಬೆಳಕುಕಂಡುದು ೧೮೮೬ರಲ್ಲಿಯೆಂದು ಡಾ. ಬಿ. ನಂಜುಂಡಸ್ವಾಮಿ ಹೇಳುತ್ತಾರೆ. (ಬಸವಪಥ ೧೫-೫ ಪು. ೪೫)

ಬಸವೋತ್ತರ ಕಾಲೀನ ಶರಣರ ವಚನಗಳ ಐದು ಸಂಪುಟಗಳು ಮತ್ತು ಒಂದು ವಚನ ಪರಿಭಾಷಾಕೋಶ - ಹೀಗೆ ಹದಿನೈದು ಸಂಪುಟಗಳು ಬೆಳಕುಕಾಣುತ್ತಲಿವೆ. ಇವುಗಳಲ್ಲಿ ಮೊದಲಿನ ಐದು ಸಂಪುಟಗಳು (ಬಸವಣ್ಣ, ಅಲ್ಲಮಪ್ರಭು, ಚೆನ್ನಬಸವಣ್ಣ, ಸಿದ್ಧರಾಮ, ಶಿವಶರಣೆಯರು) ಈಗಾಗಲೇ ಕರ್ನಾಟಕ ವಿಶ್ವವಿದ್ಯಾಲಯದ ಮೂಲಕ ಪ್ರಕಟವಾಗಿದ್ದವು. ಆ ಬಳಿಕ ಲಭ್ಯವಾದ ನೂರಾರು ಹೊಸ ವಚನಗಳನ್ನು ಸೇರಿಸಿ, ಈ ಐದೂ ಸಂಪುಟಗಳಿಗೆ ಸಮಗ್ರರೂಪ ಕೊಟ್ಟಿದ್ದೇವೆ ಮತ್ತು ಪರಿಷ್ಕರಿಸಿದ್ದೇವೆ.

ಬಸವ ಸಮಕಾಲೀನ ಮಿಕ್ಕ ಶರಣರ ನಾಲ್ಕು ಸಂಪುಟಗಳ ಕೆಲಸ ಈವರೆಗೆ ಸಮರ್ಪಕವಾಗಿ ನಡೆದಿರಲಿಲ್ಲ. ಈ ಶರಣರ ಸಂಖ್ಯೆ, ಇವರ ವಚನಸಂಖ್ಯೆ ಅಸ್ಪಷ್ಟವಾಗಿಯೇ ಉಳಿದಿದ್ದಿತು. ವಚನಗಳೂ ಅಲ್ಲಿಷ್ಟು, ಇಲ್ಲಿಷ್ಟು ಪ್ರಕಟವಾಗಿದ್ದವು. ಒಂದಿಷ್ಟು ಅಪ್ರಕಟಿತ ಸ್ಥಿತಿಯಲ್ಲಿಯೇ ಉಳಿದುಬಿಟ್ಟಿದ್ದವು. ಇವೆಲ್ಲವುಗಳನ್ನು ಸಂಗ್ರಹಿಸಿ, ಪರಿಷ್ಕರಿಸಿ ಈ ನಾಲ್ಕೂ ಸಂಪುಟಗಳಿಗೆ ಸಮಗ್ರ ರೂಪ ಕೊಟ್ಟಿದ್ದೇವೆ. ಒಟ್ಟಿನಲ್ಲಿ ಬಸವಯುಗದ ಈ ಎಲ್ಲ ಒಂಬತ್ತು ಸಂಪುಟಗಳಿಗೆ ಸುಮಾರು ಸಾವಿರದಷ್ಟು ಹೊಸ ವಚನಗಳನ್ನು ಸೇರಿಸಿದ್ದೇವೆ.

ಬಸವೋತ್ತರ ಕಾಲೀನ ಶರಣರ ಸಂಪುಟಗಳ ಕೆಲಸ ಇನ್ನೂ ಅಲಕ್ಷಿತವಾಗಿದ್ದಿತು. ಈವರೆಗೆ ತಿಳಿದುಬಂದಿದ್ದ ವಚನಕಾರರ ಹೊಸ ವಚನಗಳನ್ನು ಶೋಧಿಸುವುದರೊಂದಿಗೆ, ಅನೇಕ ಹೊಸ ವಚನಕಾರರನ್ನೂ ಬೆಳಕಿಗೆ ತಂದಿದ್ದೇವೆ. ಇದರಿಂದಾಗಿ ಬಸವೋತ್ತರಯುಗದ ಶರಣರನ್ನೂ ಅವರ ವಚನಗಳ ವ್ಯಾಪ್ತಿಯನ್ನೂ ಜನತೆಯ ಮುಂದಿಟ್ಟ ಪ್ರಥಮ ಕೀರ್ತಿ ಈ ಐದು ಸಂಪುಟಗಳಿಗೆ ಸಲ್ಲುತ್ತದೆ. ಹೀಗೆ ಬಸವಯುಗ, ಬಸವೋತ್ತರಯುಗಗಳ ವಚನಸಾಹಿತ್ಯಕ್ಕೆ ಸಂಬಂಧಪಟ್ಟ ಎಲ್ಲ ಕೊರತೆಗಳನ್ನು ತುಂಬಿಕೊಡುವ ಒಂದು ಪರಿಪೂರ್ಣ ಯೋಜನೆ ಇದಾಗಿದೆ. ಮೊದಲ ಬಾರಿಗೆ ೧೯ನೆಯ ಶತಮಾನದವರೆಗಿನ ಎಲ್ಲ ಶರಣರ ಎಲ್ಲ ವಚನಗಳನ್ನು ಒಂದೆಡೆ ಸಂಗ್ರಹಿಸಿ, ಒಂದು ಕ್ರಮಕ್ಕೆ ಅಳವಡಿಸಿ, ಸಂಪುಟ ಶ್ರೇಣಿಯಲ್ಲಿ ಹೊರತಂದ ದೊಡ್ಡಪ್ರಯತ್ನ ಇಲ್ಲಿದೆ.

ವಚನಸಾಹಿತ್ಯದ ಪರಿಷ್ಕರಣಕಾರ್ಯ ತುಂಬ ಜಟಿಲವಾದುದು. ೧. ಎಲ್ಲ ಶರಣರ ಎಲ್ಲ ವಚನಗಳನ್ನು ಎಲ್ಲ ಪ್ರಾಚೀನ ಆಕರಗಳಿಂದ ಸಂಗ್ರಹಿಸುವುದು, ೨. ಪ್ರಕ್ಷಿಪ್ತವಾಗಿರ ಬಹುದಾದ ವಚನಕಾರರನ್ನು, ವಚನಗಳನ್ನು ಕೈಬಿಡುವುದು, ೩. ನಿಜವಚನಗಳ ಪಾಠವನ್ನು ಪರಿಷ್ಕರಿಸುವುದು - ಇದು ಈ ಯೋಜನೆಯ ಉದ್ದೇಶವಾಗಿದೆ. ಈ ಉದ್ದೇಶ ಸಾಧನೆಗಾಗಿ ಎಲ್ಲ ಪ್ರಾಚೀನ ಆಕರಗಳಿಂದ ಅಂದರೆ ಸುಮಾರು ೧೦೮ ಆಕರಗಳಿಂದ ಎಲ್ಲ ವಚನಗಳನ್ನು ಸಂಗ್ರಹಿಸಿ, ಪ್ರತಿಯೊಂದು ವಚನದ ಕೆಳಗೆ ಅದರ ಎಲ್ಲ ಆಕರಗಳನ್ನು ನಮೂದಿಸಿದ 'ವಚನ ಬ್ಯಾಂಕ'ನ್ನು ಅಸ್ತಿತ್ವಕ್ಕೆ ತರಲಾಯಿತು. ಒಂದು ವಚನಕ್ಕೆ ಇರುವ ವಿವಿಧ ಪಾಠಾಂತರ, ರೂಪಾಂತರಗಳ ಸ್ವರೂಪವನ್ನು ಅರ್ಥಮಾಡಿಕೊಳ್ಳಲು, ಮುದ್ರಿಕೆಯ ವ್ಯತ್ಯಾಸವನ್ನು ಗಮನಿಸಲು, ಒಬ್ಬ ವಚನಕಾರನ ಒಟ್ಟು ವಚನಗಳ ಸಂಖ್ಯೆಯನ್ನು ನಿರ್ಧರಿಸಲು, ಕೊನೆಯದಾಗಿ ವಚನದ ನಿಜಪಾಠವನ್ನು ನಿರ್ಣಯಿಸಲು ಈ ಬ್ಯಾಂಕ್ ತುಂಬ ನೆರವಾಯಿತು.

ಇವು ಜನಪ್ರಿಯ ಆವೃತ್ತಿಗಳಾಗಿರುವುದರಿಂದ ಲಭ್ಯವಿರುವ ಪಾಠಾಂತರಗಳಲ್ಲಿ ಯೋಗ್ಯವಾದುದನ್ನು ಸ್ವೀಕರಿಸಿ, ಅನ್ಯಪಾಠಗಳನ್ನು ಅಡಿಯಲ್ಲಿ ನಮೂದಿಸದೆ ಕೈಬಿಟ್ಟಿದ್ದೇವೆ. ಜನಸಾಮಾನ್ಯರ ಅನುಕೂಲತೆಗಾಗಿ ಶಕಟರೇಫೆಗೆ ಬದಲು ರೇಫೆ ಇಟ್ಟುಕೊಂಡಿದ್ದೇವೆ. ಅಭ್ಯಾಸಿಗಳ ಉಪಯೋಗ ದೃಷ್ಟಿಯಿಂದ ಕಠಿಣ ಪದಕೋಶ, ಅಕಾರಾದಿ, ಆಕರಸೂಚಿಗಳನ್ನು ಅನುಬಂಧದಲ್ಲಿ ಕೊಟ್ಟಿದ್ದೇವೆ. ಹೆಚ್ಚಿನದಾಗಿ ಪಾರಿಭಾಷಿಕ ಪದಗಳ ಒಂದು ಸ್ವತಂತ್ರ ಕೋಶವನ್ನೇ ಪ್ರಕಟಿಸಿದ್ದೇವೆ. ಒಟ್ಟಿನಲ್ಲಿ, ಇವು ಜನಪ್ರಿಯ ಆವೃತ್ತಿಗಳಾದರೂ ವಿದ್ವಜ್ಜನಪ್ರಿಯ ಆವೃತ್ತಿಗಳೂ ಆಗಬೇಕೆಂಬ ಆದರ್ಶದಲ್ಲಿ ಈ ಸಂಪುಟಗಳನ್ನು ರೂಪಿಸಲು ಪ್ರಯತ್ನಿಸಿದ್ದೇವೆ.

## ಕೃತಜ್ಞತೆ

ವಿಶ್ವವಿದ್ಯಾಲಯದಂಥ ಶಿಕ್ಷಣ ಸಂಸ್ಥೆಗಳು, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯಂಥ ಸಾರ್ವಜನಿಕ ಸಂಸ್ಥೆಗಳು, ವೀರಶೈವ ಮಠಗಳಂಥ ಧಾರ್ಮಿಕ ಸಂಸ್ಥೆಗಳು, ಡಾ. ಫ. ಗು. ಹಳಕಟ್ಟಿಯವರಂಥ ವಿದ್ವಾಂಸ ವ್ಯಕ್ತಿಗಳು ನಿರಂತರ ದುಡಿದರೂ ವಚನಸಾಹಿತ್ಯ ಪೂರ್ಣಪ್ರಮಾಣದಲ್ಲಿ ಪ್ರಕಟವಾಗಲು ಒಂದುನೂರು ವರ್ಷ ಹಿಡಿದುದು ಅದರ ಗಾತ್ರಬಾಹುಳ್ಯಕ್ಕೆ ಸಾಕ್ಷಿಯಾಗಿದೆ. ನೂರುವರ್ಷ ದುಡಿದು, ಸಾಮಗ್ರಿಯನ್ನು ಪ್ರಕಟಿಸಿದ ಈ ಎಲ್ಲ ವ್ಯಕ್ತಿ-ಸಂಸ್ಥೆಗಳಿಗೆ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು ಸಲ್ಲುತ್ತವೆ.

ಈ ಯೋಜನೆಯ ಕಾರ್ಯಾಲಯ ಅಸ್ತಿತ್ವಕ್ಕೆ ಬಂದು ಕೆಲಸ ಪ್ರಾರಂಭವಾದದ್ದು ಅಕ್ಟೋಬರ್ ೧೫, ೧೯೮೮ರಂದು. ಹಸ್ತಪ್ರತಿಗಳು ಅಚ್ಚಿಗೆ ಹೋದದ್ದು ೧೬ ಮಾರ್ಚ್ ೧೯೯೦ರಂದು. ಹೀಗೆ ಮೊದಲೇ ಯೋಜಿಸಿದಂತೆ ಎರಡು ವರ್ಷಗಳ ನಿರ್ದಿಷ್ಟ ಅವಧಿಯಲ್ಲಿ ಈ ಕೆಲಸವನ್ನು ಪೂರ್ಣಗೊಳಿಸಿದ್ದೇವೆ. ಪ್ರತಿಯೊಂದು ಹಂತದಲ್ಲಿಯೂ ಈ ಯೋಜನೆ ಸಕ್ರಮವಾಗಿ ಮುನ್ನಡೆಯುವುದಕ್ಕಾಗಿ 'ಸಂಪಾದಕ ಮಂಡಳಿ'ಯ ಸದಸ್ಯರಾದ ಡಾ. ಎಂ. ಚಿದಾನಂದಮೂರ್ತಿ, ಡಾ. ಸಿ. ಪಿ. ಕೃಷ್ಣಕುಮಾರ, ಡಾ. ಎಸ್. ವಿದ್ಯಾಶಂಕರ, ಶ್ರೀ ಎಸ್. ಶಿವಣ್ಣ ಅವರು ಉದ್ದಕ್ಕೂ ಬೆಲೆಯುಳ್ಳ ಸಲಹೆ-ಮಾರ್ಗದರ್ಶನ ನೀಡಿದ್ದಾರೆ. ಡಾ. ಎಚ್. ತಿಪ್ಪೇರುದ್ರಸ್ವಾಮಿ ಅವರು ಆರಂಭದ ಕೆಲವು ತಿಂಗಳು ಸಂಪಾದಕ ಮಂಡಳಿಯ ಸದಸ್ಯರಾಗಿ, ವಿಶ್ವಾಸದಿಂದ ನೆರವಾಗಿದ್ದಾರೆ. ಸಂಪಾದಕ ಮಿತ್ರರಾದ ಡಾ. ಬಿ. ವ್ಹಿ. ಮಲ್ಲಾಪುರ, ಡಾ. ಎಸ್. ವಿದ್ಯಾಶಂಕರ, ಡಾ. ವ್ಹಿ. ಬಿ. ರಾಜೂರ, ಡಾ. ಬಿ. ಆರ್. ಹಿರೇಮಠ, ಶ್ರೀ ಎಸ್. ಶಿವಣ್ಣ ತುಂಬ ಶ್ರಮ-ಶ್ರದ್ಧೆಗಳಿಂದ ಸಂಪಾದನ ಕೆಲಸ ಪೂರೈಸಿದ್ದಾರೆ. ಸಹಾಯಕ ಸಂಶೋಧಕರಾದ ಶ್ರೀಮತಿ ವಿಜಯಶ್ರೀ ಹಿರೇಮಠ, ಶ್ರೀ ವಾಯ್. ಎಂ. ಯಾಕೊಳ್ಳಿ, ಶ್ರೀ ಬಿ. ವ್ಹಿ. ಕೋರಿ ಅವರು ದಣಿವನ್ನು ಲೆಕ್ಕಿಸದೆ ದುಡಿದಿದ್ದಾರೆ. ಇವರೆಲ್ಲರಿಗೆ ನಾವು ಕೃತಜ್ಞರಾಗಿದ್ದೇವೆ.

ಈ ಯೋಜನೆಯನ್ನು ಅನುದಾನ ಮಾಡಿದ ಕರ್ನಾಟಕ ಸರಕಾರದ ಔದಾರ್ಯಕ್ಕೆ ನಮ್ಮ ಅಭಿನಂದನೆಗಳು ಸಲ್ಲುತ್ತವೆ. ಈ ಅವಧಿಯಲ್ಲಿ ಮುಖ್ಯಮಂತ್ರಿಗಳಾಗಿದ್ದ ಮಾನ್ಯ ಶ್ರೀ ರಾಮಕೃಷ್ಣ ಹೆಗಡೆ, ಶ್ರೀ ಎಸ್. ಆರ್. ಬೊಮ್ಮಾಯಿ, ಶ್ರೀ ವೀರೇಂದ್ರ ಪಾಟೀಲ, ಶ್ರೀ ಎಸ್. ಬಂಗಾರಪ್ಪ ಅವರಿಗೂ, ಸಾಹಿತಿಗಳೂ ಸಾಹಿತ್ಯ-ಸಂಸ್ಕೃತಿಗಳ ಗಾಢ ಆಸಕ್ತರೂ

ಆಗಿರುವ ಮುಖ್ಯಮಂತ್ರಿಗಳಾದ ಮಾನ್ಯ ಶ್ರೀ ಎಂ. ವೀರಪ್ಪ ಮೊಯಿಲಿ ಅವರಿಗೂ ಋಣಿಯಾಗಿದ್ದೇವೆ.

ಈ ಯೋಜನೆ ಅಸ್ತಿತ್ವಕ್ಕೆ ಬರುವಲ್ಲಿ ವಿಶೇಷ ಆಸಕ್ತಿ ವಹಿಸಿದವರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಅಂದಿನ ಸಚಿವರಾಗಿದ್ದ ಶ್ರೀ ಎಂ. ಪಿ. ಪ್ರಕಾಶ ಅವರು. ಸಾಹಿತ್ಯ-ಸಂಸ್ಕೃತಿಗಳ ಬಗ್ಗೆ ಅನನ್ಯ ಪ್ರೀತಿ-ಗೌರವ ಬೆಳೆಸಿಕೊಂಡಿರುವ ಶ್ರೀಯುತರಿಗೆ ನಾವು ಕೃತಜ್ಞರಾಗಿದ್ದೇವೆ. ಆಮೇಲೆ ಈ ಇಲಾಖೆಗೆ ಸಚಿವರಾಗಿ ಬಂದ ಶ್ರೀ ಎಂ. ವೀರಪ್ಪ ಮೊಯಿಲಿ, ಶ್ರೀ ಕೆ. ಎಚ್. ರಂಗನಾಥ, ಶ್ರೀ ಎಸ್. ರಮೇಶ್, ಇಂದಿನ ಸಚಿವರಾದ ಮಾನ್ಯ ಶ್ರೀ ಎಚ್. ವಿಶ್ವನಾಥ್ ಅವರಿಗೆ ನಮ್ಮ ಗೌರವಗಳು ಸಲ್ಲುತ್ತವೆ.

ಈ ಪ್ರಸಂಗದಲ್ಲಿ ಆತ್ಮೀಯ ಆಡಳಿತ ನಿರ್ದೇಶನ ಮಾಡಿದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಅಂದಿನ ನಿರ್ದೇಶಕರಾಗಿದ್ದ ಶ್ರೀ ಐ. ಎಂ. ವಿಠ್ಠಲಮೂರ್ತಿ, ಶ್ರೀ ಬಿ. ಪಾರ್ಥಸಾರಥಿ, ಕಮಿಷನರ್ ಡಾ. ಪಿ. ಎಸ್. ರಾಮಾನುಜಂ, ಇಂದಿನ ಕಮಿಷನರ್‌ರಾದ ಶ್ರೀ ಪಿ. ಎಸ್. ವಿ. ರಾವ್ ಅವರನ್ನೂ ಅಧಿಕ ನಿರ್ದೇಶಕರಾದ ಶ್ರೀ ಕೆ. ದೇವರಸಯ್ಯ, ಉಪನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ ಅವರನ್ನೂ ನೆನೆಯುವುದು ಪ್ರೀತಿಯ ವಿಷಯವಾಗಿದೆ.

ಇಂಥ ಒಂದು ಬೃಹತ್ ಯೋಜನೆಗೆ ಕಾರ್ಯಾಲಯವೊಂದು ಅತ್ಯವಶ್ಯ. ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದಲ್ಲಿ ಈ ಅವಕಾಶ ಕಲ್ಪಿಸಿಕೊಟ್ಟ ಕರ್ನಾಟಕ ವಿಶ್ವವಿದ್ಯಾಲಯದ ಅಂದಿನ ಕುಲಪತಿ ಡಾ. ಜಿ. ಕೆ. ನಾರಾಯಣರೆಡ್ಡಿ, ಇಂದಿನ ಕುಲಪತಿ ಡಾ. ಎಸ್. ರಾಮೇಗೌಡ ಅವರ ಔದಾರ್ಯವನ್ನು, ಪೀಠದ ಮುಖ್ಯಸ್ಥರ ಸಹಕಾರವನ್ನು ಕೃತಜ್ಞತೆಯಿಂದ ನೆನೆಯುತ್ತೇವೆ.

ಇದು ಒಂದು ದೊಡ್ಡ ಯೋಜನೆ. ಇದರ ಸಂಪಾದನೆಯ ಸಮಸ್ಯೆಗಳೂ ದೊಡ್ಡವು. ಪಾಠಾಂತರ, ರೂಪಾಂತರ, ಪ್ರಕ್ಷಿಪ್ತತೆ ಇತ್ಯಾದಿಗಳ ದಾಳಿಗೆ ಗುರಿಯಾಗುತ್ತ ಬಂದ ವ್ಯಾಪಕ ಪ್ರಮಾಣದ ಈ ಸಾಹಿತ್ಯವನ್ನು ಒಂದೆಡೆ ಸಂಗ್ರಹಿಸುವುದು, ಪುನರುಕ್ತಿಗಳನ್ನು ಗುರುತಿಸುವುದು, ಮುದ್ರಿಕೆ ಪಲ್ಲಟಗಳನ್ನು ಸರಿಪಡಿಸುವುದು, ಪ್ರಕ್ಷಿಪ್ತಗಳನ್ನು ದೂರೀಕರಿಸುವುದು, ಕೊನೆಯದಾಗಿ ವಚನಗಳನ್ನು ಶುದ್ಧೀಕರಿಸುವುದು - ಎಂಥವರನ್ನೂ ಧೈರ್ಯಗೆಡಿಸುವ ಕೆಲಸ. ಹೀಗಿದ್ದೂ ವಚನಸಾಹಿತ್ಯದ ಮೇಲಿನ ಗೌರವ, ಕೆಲಸದ ಮೇಲಿನ ಪ್ರೀತಿಗಳು ನಮ್ಮಿಂದ ಈ ಕಾರ್ಯ ಮಾಡಿಸಿವೆ. ನಮ್ಮ ಶಕ್ತಿಗೆ ಮೀರಿ ಉಳಿದಿರಬಹುದಾದ ದೋಷಗಳನ್ನು ಮನ್ನಿಸಬೇಕೆಂದು ಕೋರುತ್ತ, ಎರಡು ವರ್ಷ ರಾತ್ರಿಯನ್ನೂ ಹಗಲುಮಾಡಿ ದುಡಿದು ರೂಪಿಸಿದ ಈ ಹದಿನೈದು ಸಂಪುಟಗಳನ್ನು ಸಹೃದಯಲೋಕಕ್ಕೆ ಅರ್ಪಿಸುತ್ತೇವೆ. 'ಶಿವಶರಣರ ಸಮಗ್ರ ವಚನಸಾಹಿತ್ಯ' ಸುಲಭ ಬೆಲೆಯಲ್ಲಿ ಕನ್ನಡಿಗರ ಮನೆ-ಮನಗಳನ್ನು ಬೆಳಗಲೆಂದು ಹಾರೈಸುತ್ತೇವೆ.

# ದ್ವಿತೀಯ ಆವೃತ್ತಿ

ಸಮಗ್ರ ವಚನಸಾಹಿತ್ಯದ ಜನಪ್ರಿಯ ಆವೃತ್ತಿ ಸಂಪುಟಗಳು ೧೯೯೩ರಲ್ಲಿ ಪ್ರಕಟವಾಗಿ, ಒಂದು ವರ್ಷ ಕಳೆಯುವಷ್ಟರಲ್ಲಿ ಮಾರಾಟವಾದವು. ಕರ್ನಾಟಕ ಸರಕಾರದ ಗ್ರಂಥಪ್ರಕಟನೆಯ ಇತಿಹಾಸದಲ್ಲಿಯೇ ಈ ಬಗೆಯ ಮಾರಾಟ ಒಂದು ದಾಖಲೆ. ಜನತೆಯ ಅಪಾರ ಬೇಡಿಕೆಯನ್ನು ಗಮನಿಸಿ, ಈಗ ಪರಿಷ್ಕೃತ ದ್ವಿತೀಯ ಆವೃತ್ತಿಯನ್ನು ಪ್ರಕಟಿಸುತ್ತಿದ್ದೇವೆ. ಇತ್ತೀಚೆಗೆ ಲಭ್ಯವಾದ ಸುಮಾರು ಒಂದು ಸಾವಿರ ಹೊಸವಚನಗಳನ್ನು ಸೇರಿಸುವ, ಮೊದಲ ಆವೃತ್ತಿಯ ವಚನಪಾಠವನ್ನು ಮತ್ತೆ ಪರಿಷ್ಕರಿಸುವ ಮೂಲಕ ಮೊದಲಿನ ೧೪ ಸಂಪುಟಗಳನ್ನು ಸಮಗ್ರವಾಗಿ ಮತ್ತೆ ರೂಪಿಸಿದ್ದೇವೆ. ೧೫ನೆಯ ಸಂಪುಟ (ಪರಿಭಾಷಾಕೋಶ) ವನ್ನು ಹೊಸದಾಗಿ ಸಿದ್ಧಪಡಿಸಿದ್ದೇವೆ. ಹೊಸ ವಿಚಾರ, ಶೋಧಗಳ ಬೆಳಕಿನಲ್ಲಿ ಸಂಪಾದಕೀಯ, ಪ್ರಸ್ತಾವನೆಗಳನ್ನು ಸೂಕ್ತ ರೀತಿಯಲ್ಲಿ ಪರಿಷ್ಕರಿಸಿದ್ದೇವೆ.

ಈ ಆವೃತ್ತಿ ಬೆಳಕು ಕಾಣಲು ವಿಶೇಷ ಆಸಕ್ತಿ ವಹಿಸಿದ ನಮ್ಮ ರಾಜ್ಯದ ಮುಖ್ಯಮಂತ್ರಿಗಳಾದ ಮಾನ್ಯ ಶ್ರೀ ಎಸ್. ಎಂ. ಕೃಷ್ಣ ಅವರಿಗೂ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವರಾದ ಮಾನ್ಯ ಶ್ರೀಮತಿ ರಾಣಿ ಸತೀಶ್ ಅವರಿಗೂ ನಾವು ಋಣಿಯಾಗಿದ್ದೇವೆ. ಈ ಕೆಲಸ ನಿರ್ದಿಷ್ಟ ಕಾಲಾವಧಿಯಲ್ಲಿ ಪೂರ್ಣಗೊಳ್ಳುವಂತೆ ನೋಡಿಕೊಂಡ ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ನಿರ್ದೇಶಕರಾದ ಶ್ರೀ ಕೆ. ಸಿ. ರಾಮಮೂರ್ತಿ ಅವರಿಗೂ ಅವರ ಸಿಬ್ಬಂದಿ ವರ್ಗಕ್ಕೂ, ಮಾರ್ಗದರ್ಶನ ಮಾಡಿ ಸಂಪುಟಗಳ ಉತ್ತಮಿಕೆ ಕಾರಣರಾದ ಸಂಪಾದಕ ಮಂಡಲದ ಸದಸ್ಯರಿಗೂ, ಸಂಸ್ಕೃತ ಶ್ಲೋಕಗಳನ್ನು ಪರಿಷ್ಕರಿಸಿಕೊಟ್ಟ ಮೈಸೂರಿನ ಪೂಜ್ಯ ಶ್ರೀ ಇಮ್ಮಡಿ ಶಿವಬಸವಸ್ವಾಮಿಗಳು ಕುಂದೂರುಮಠ ಅವರಿಗೂ, ೧೫ನೆಯ ಪರಿಭಾಷಾ ಸಂಪುಟವನ್ನು ಹೊಸದಾಗಿ ರೂಪಿಸಿಕೊಟ್ಟ ಡಾ. ಎನ್. ಜಿ. ಮಹಾದೇವಪ್ಪ ಅವರಿಗೂ ನಮ್ಮ ವಂದನೆಗಳು ಸಲ್ಲುತ್ತವೆ. ಹತ್ತು ಸಾವಿರ ಪುಟಗಳ, ಹದಿನೈದು ಸಂಪುಟಗಳ ಪ್ರಕಟನೆ ಸುಲಭದ ಕೆಲಸವೇನಲ್ಲ. ಸಾಹಿತ್ಯದ ಮೇಲಿನ, ಅದರಲ್ಲಿಯೂ ವಚನಸಾಹಿತ್ಯದ ಮೇಲಿನ ಪ್ರೀತಿ ಕಾರಣವಾಗಿ ಪುಸ್ತಕ ಪ್ರಾಧಿಕಾರದ ಮೂಲಕ ಪ್ರಕಟಿಸಿದ ಅಧ್ಯಕ್ಷರಾದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ ಅವರಿಗೆ ನಾವು ಋಣಿಯಾಗಿದ್ದೇವೆ.

ಮೊದಲ ಆವೃತ್ತಿಯಲ್ಲಿ ಉಳಿದುಕೊಂಡಿದ್ದ ಕೊರತೆ, ದೋಷಗಳನ್ನು ಕಷ್ಟಪಟ್ಟು ಹುಡುಕಿ, ನಮಗೆ ಪೂರೈಸಿದ ತುಮಕೂರಿನ ಶ್ರೀ ಎಂ. ಚಂದ್ರಪ್ಪ ಅವರಿಗೂ, ಬೆಂಗಳೂರಿನ ಶ್ರೀ ಎಸ್. ಶಿವಣ್ಣ ಅವರಿಗೂ ನಾವು ಕೃತಜ್ಞರಾಗಿದ್ದೇವೆ.



# ಪ್ರಸ್ತಾವನೆ

'ಯೋಗಿಗಳ ಯೋಗಿ ಶಿವಯೋಗಿ ಸೊಡ್ಡಳ ಸಿದ್ಧರಾಮನೊಬ್ಬನೆ ಯೋಗಿ' ಸೊಡ್ಡಳ ಬಾಚರಸನು ಶಿವಯೋಗಿ ಸಿದ್ಧರಾಮನನ್ನು ಹೀಗೆ ಹೊಗಳಿರುವನು. ಒಂದು ಕುಗ್ರಾಮವಾಗಿದ್ದ ಸೊನ್ನಲಿಗೆಯನ್ನು ಪ್ರಸಿದ್ಧ ಪಟ್ಟಣವಾಗಿ 'ಭೂಕೈಲಾಸ'ವಾಗಿ ಕಟ್ಟಿ ಬೆಳೆಸಿದ ಮಹಾನ್ ಕನಸುಗಾರ 'ಶಿಲ್ಪಿ' ಸಿದ್ಧರಾಮ. ಅವನು ಬರಿಯ ಕನಸುಗಾರನಾಗಿರದೆ ಕರ್ತವ್ಯಶಾಲಿಯಾಗಿ ತನ್ನ ಆದರ್ಶಗಳನ್ನು ವಾಸ್ತವವಾಗಿಸಿದನು. 'ಶಿವಯೋಗಿಯ ಶರೀರಂ ವೃಥಾ ಸವೆಯಲಾಗದು ಅನುಗೊಂಬನಿತು ಕಾಯಕಂ ನಡೆಯುತಿರಬೇಕು' ಎಂಬುದು ಸಿದ್ಧರಾಮನ ಬದುಕಿನ ನಿತ್ಯಮಂತ್ರ. ಇದು ಸಂಕಲ್ಪವಾಗಿ ಅನೇಕ ಸಮಾಜೋಧಾರ್ಮಿಕ ಚಟುವಟಿಕೆಗಳಿಗೆ ಹಾದಿಮಾಡಿಕೊಟ್ಟಿರ ಬಹುದು. ಇದರಿಂದಾಗಿ ಜನಪ್ರಿಯತೆಯ ಉತ್ತುಂಗ ಶಿಖರಕ್ಕೆ ಏರಿದ ಅವನು ಸಹಜವಾಗಿ ರಾಜಪೂಜಿತರಾದನು. ಸೊನ್ನಲಿಗೆಯಲ್ಲಿ ಕಪಿಲಸಿದ್ಧ ಮಲ್ಲಿಕಾರ್ಜುನನ ಲಿಂಗವನ್ನು ಸ್ಥಾಪಿಸಿ ದೇವಾಲಯ ನಿರ್ಮಾಣಮಾಡಿ ಅಲ್ಲಿ ಸಾಂಗವಾಗಿ ಲಿಂಗಾಭಿಷೇಕ, ಯೋಗಮಜ್ಜನ, ಅಭಿಷೇಕ, ನೈವೇದ್ಯ ಸಮರ್ಪಣೆ, ದಾನ ವಿನಿಯೋಗ, ಉತ್ಸವ, ಹೋಮ ಹವನಗಳು ನೆರವೇರಿಸುತ್ತಿರುವಾಗ ಈ ಎಲ್ಲ ಕಾರ್ಯಗಳಿಂದ ಪ್ರಭಾವಿತರಾದ, ಸಿದ್ಧರಾಮನ ಅಲೌಕಿಕ ಶಕ್ತಿಗೆ ಬೆರಗಾದ ನಾಡಿನ ಬೇರೆ ಬೇರೆ ಭಾಗದ ಜನತೆ ಈ ದೇವರಿಗೆ ದಾನ ದತ್ತಿಗಳನ್ನು ಬಿಟ್ಟ ಬಗೆಗೆ ಅನೇಕ ಶಾಸನಗಳು ದೊರೆಯುತ್ತವೆ. ಈ ವೇಳೆಗಾಗಲೇ ಸಿದ್ಧರಾಮನು ಪ್ರಸಿದ್ಧನಾಗಿದ್ದನೆಂಬುದನ್ನು ಶಾಸನಗಳು ತಿಳಿಸುತ್ತವೆ. ಸಿದ್ಧರಾಮನ ಪ್ರಸಿದ್ಧಿಯ ಪ್ರಯೋಜನ ಪಡೆದುಕೊಳ್ಳುವ ಪ್ರಯತ್ನ ಕರ್ಣದೇವನಿಂದಾಯಿತೆಂಬುದನ್ನು ರಾಘವಾಂಕ ತನ್ನ 'ಸಿದ್ಧರಾಮ ಚಾರಿತ್ರ'ದಲ್ಲಿ ಹೇಳಿರುವನು. ಚಕ್ರವರ್ತಿಯಾಗುವ ಹಾಗೂ ಅದರಿಂದ ಬರುವ ರಾಜಕೀಯ ಲಾಭಕ್ಕಾಗಿ ಸಿದ್ಧರಾಮನ ಪ್ರಸಿದ್ಧಿಯನ್ನು ಬಳಸಿಕೊಳ್ಳ ಹೊರಟ ತಂತ್ರವೇ ಸಿದ್ಧರಾಮನು ಜನಮನದಲ್ಲಿ ಆರಾಧ್ಯಮೂರ್ತಿಯಾಗಿದ್ದನೆಂಬುದನ್ನು ಸ್ಪಷ್ಟಪಡಿಸುತ್ತದೆ.

'ಅರುವತ್ತೆಂಟು ಸಾವಿರ ವಚನಂಗಳ ಹಾಡಿ ಹಾಡಿ ಸೋತಿತ್ತೆನ್ನ ಮನ...' ಎಂದು ಸಿದ್ಧರಾಮನೇ ತನ್ನ ವಚನವೊಂದರಲ್ಲಿ ಹೇಳಿಕೊಂಡಿರುವನು. ಇಷ್ಟು ದೊಡ್ಡ ಪ್ರಮಾಣದಲ್ಲಿ ವಚನಗಳನ್ನು ಬರೆದಿರುವ ಬಗೆಗೆ ಸಂದೇಹವಿದೆ. ಅವನ ವಚನಗಳಲ್ಲಿ

ಸುಪರಿಚಿತವಾದ ಅಂಕಿತ 'ಕಪಿಲಸಿದ್ಧಮಲ್ಲಿಕಾರ್ಜುನಾ' 'ಅಥವಾ 'ಕಪಿಲಸಿದ್ಧಮಲ್ಲಿನಾಥಾ'. ಇವಲ್ಲದೆ 'ಕಪಿಲಸಿದ್ಧ ಮಲ್ಲೇಶ್ವರಾ', 'ಕಪಿಲಸಿದ್ಧಮಲ್ಲೇಶ್ವರ ದೇವರು'; 'ಕಪಿಲಸಿದ್ಧಮಲ್ಲೇಶ'; 'ಕಪಿಲಸಿದ್ಧಮಲ್ಲಿಕಾರ್ಜುನಲಿಂಗ'; 'ಕಪಿಲಸಿದ್ಧಮಲ್ಲ' -ಈ ಅಂಕಿತಗಳೂ ಕಾಣಬರುತ್ತವೆ. ಒಂದೆರಡು ಕಡೆ 'ವಿಚಿತ್ರಮೂಲ ಕಪಿಲಸಿದ್ಧ ಮಲ್ಲಿಕಾರ್ಜುನ' ಎಂಬ ಅಂಕಿತವೂ ದೊರೆಯುತ್ತದೆ. ಇತ್ತೀಚೆಗೆ ಚಿತ್ರದುರ್ಗದ ಬೃಹನ್ಮಠದಲ್ಲಿ ದೊರೆತ ಓಲೆ ಪ್ರತಿಯೊಂದರಲ್ಲಿ 'ಕವಿಲಸಿದ್ಧ ಮಲ್ಲಿಕಾರ್ಜುನ' 'ಕವಿಲಸಿದ್ಧಮಲ್ಲಿಕಾರ್ಜುನಲಿಂಗ' 'ಕಪಿಲಸಿದ್ಧ ಮಲ್ಲೇಶ್ವರ' 'ಕಪಿಲಸಿದ್ಧಮಲ್ಲಿನಾಥಯ್ಯಾ' ಎಂಬ ಅಂಕಿತಗಳೂ ಬಳಕೆಯಾಗಿರುವುದು ಕಂಡುಬಂದಿದೆ. ತುಮಕೂರು ಜಿಲ್ಲೆ ತಿಪಟೂರು ತಾಲ್ಲೂಕು ಹೊನ್ನವಳ್ಳಿ ಗ್ರಾಮದ ಶ್ರೀ ಕರಿಸಿದ್ಧೇವರ ಮಠದಲ್ಲಿ ಡಾ. ಎಂ.ಎಂ. ಕಲಬುರ್ಗಿ ಹಾಗೂ ಡಾ. ಸಾ.ಶಿ. ಮರುಳಯ್ಯನವರಿಗೆ ದೊರೆತ ಅಪರೂಪದ ಆರುಸಾವಿರ ವಚನಗಳ ಕಟ್ಟಿನಲ್ಲಿ 'ಯೋಗಿನಾಥ' ಅಂಕಿತದ ಅನೇಕ ವಚನಗಳು ಕಾಣಬರುತ್ತವೆ. ಶ್ರೀ ಎಸ್. ಶಿವಣ್ಣನವರು ಸಂಪಾದಿಸಿದ ಮುತ್ತಿನಪೆಂಡೆಯ ಓದುವ ಅನ್ನದಾನಿದೇವರು ಸಂಕಲಿಸಿದ 'ಸಿದ್ಧರಾಮಯ್ಯನ ಶಿವಯೋಗ ಷಟ್‌ಸ್ಥಲಾನುಭಾವದ ವಚನ' ಕೃತಿಯಲ್ಲಿ ಯೋಗಿನಾಥ ಅಂಕಿತದ ಅನೇಕ ವಚನಗಳು ಸಿಗುತ್ತವೆ. ಎರಡು ವಿಭಿನ್ನ ಅಂಕಿತಗಳನ್ನು ಸಿದ್ಧರಾಮ ತನ್ನ ವಚನಗಳಲ್ಲಿ ಬಳಸಿರುವ ಬಗೆಗೆ ಬಹುಶಃ ಹೀಗೆ ವಿಚಾರಮಾಡಬಹುದೊ ಏನೋ : ಸಿದ್ಧರಾಮನೇ ತನ್ನ ವಚನವೊಂದರಲ್ಲಿ 'ಭಕ್ತನಾದೊಡೆ ಬಸವಣ್ಣನಂತಾಗಬೇಕು; ಜಂಗಮವಾದಡೆ ಪ್ರಭುವಿನಂತಾಗಬೇಕು ಭೋಗಿಯಾಡದೆ ನಮ್ಮ ಗುರು ಚನ್ನಬಸವಣ್ಣನಂತಾಗಬೇಕು; ಯೋಗಿಯಾದಡೆ ನನ್ನಂತಾಗಬೇಕು ನೋಡಯ್ಯಾ......' ಎಂದಿರುವನು. ಸಿದ್ಧರಾಮ ಆಧ್ಯಾತ್ಮಿಕವಾಗಿ ಬೆಳೆದಂತೆ, ಕಲ್ಯಾಣದಲ್ಲಿ ಪ್ರಭು ಬಸವ ಚನ್ನಬಸವ ಮೊದಲಾದ ಶರಣರ ಸಂಪರ್ಕಕ್ಕೆ ಬಂದ ಮೇಲೆ 'ಯೋಗಿನಾಥಾ' ಎಂಬ ಅಂಕಿತವನ್ನು ಬಳಸಿರಬಹುದು. ಅವನ ಸಂಕೀರ್ಣ ತ್ರಿವಿಧಿ, ಬಸವ ಸ್ತೋತ್ರದ ತ್ರಿವಿಧಿ, ಅಷ್ಟಾವರಣ ಸ್ತೋತ್ರದ ತ್ರಿವಿಧಿಗಳಲ್ಲಿ ಯೋಗಿನಾಥಾಂಕಿತವನ್ನು ಕಾಣುತ್ತೇವೆ.

ಧೂಳಿಮಾಕಾಳನೆನ್ನುವ ದನಕಾಯುವ ಮುಗ್ಧ ಹುಡುಗನೋರ್ವ ಆದರ್ಶ ಶಿವಯೋಗಿಯಾದುದು; ಒಂದು ಕುಗ್ರಾಮವಾಗಿದ್ದ ಸೊನ್ನಲಿಗೆ ಪ್ರಸಿದ್ಧ ಪಟ್ಟಣವಾಗಿ 'ಭೂಕೈಲಾಸ'ವಾಗಿ ಮಾರ್ಪಟ್ಟುದು ನಂಬಲಸಾಧ್ಯವಾದ ಪವಾಡ! ಸಿದ್ಧರಾಮನ ಜನ್ಮಸ್ಥಳ ಸೊನ್ನಲಿಗೆ-ಈಗಿನ ಸೊಲ್ಲಾಪುರವೆಂದು ಭಾವಿಸಲಾಗಿತ್ತು. ಈಚೆಗೆ ಬೀದರ್‌ನ ಬೆಲ್ದಾಳ ಸಿದ್ಧರಾಮ ಶರಣರು ಇದನ್ನು ಅಲ್ಲಗಳೆದು ಈಗಿನ ಮಹಾರಾಷ್ಟ್ರದ ಸಾಂಗ್ಲಿ ಜಿಲ್ಲೆಯ ಜತ್ ತಾಲೂಕಿನ ಸೊನ್ನಲಿಗೆ ಅಥವಾ ಸೊನಗಿ ಎಂದು ಹೇಳುವರು.* ಅವರ ಹೊಸ ಶೋಧದ ಪ್ರಕಾರ ಜತ್ ತಾಲೂಕಿನ ಸೊನ್ನಲಿಗೆಯಲ್ಲಿ ಸಿದ್ಧರಾಮೇಶ್ವರರ ಜನಾಂಗದ

---

* 'ಕನ್ನಡ ಪ್ರಭ' ಬೆಂಗಳೂರು ೪.೯.೯೮ ಶುಕ್ರವಾರ

ಕುಡು ಒಕ್ಕಲಿಗರ ೩೦ ಮನೆಗಳಿದ್ದು ಅವರೆಲ್ಲರೂ ಹಾಗೂ ಗ್ರಾಮದ ಬಹುತೇಕ ಜನತೆ ಸಿದ್ಧರಾಮೇಶ್ವರನನ್ನು ಆರಾಧಿಸುತ್ತಾರೆ. ಗ್ರಾಮದಲ್ಲಿ ಸಿದ್ಧರಾಮೇಶ್ವರ ದೇವಾಲಯ, ಸಿದ್ಧರಾಮೇಶ್ವರ ಕೆರೆ ಇವೆ.

ಸಿದ್ಧರಾಮನು ಚಿಕ್ಕವನಾಗಿದ್ದಾಗ ಹಸಿದು ಬಂದಿದ್ದ ಮಲ್ಲಯ್ಯನೆಂಬ ಜಂಗಮನಿಗೆ ನವಣೆಯ ಹೊಲದಲ್ಲಿ ರಸವತ್ತಾದ ಬೆಳಸಿ (ಸೀತನಿ) ಮಾಡಿಕೊಟ್ಟ. ಶ್ರೀಶೈಲ ಮಲ್ಲಿಕಾರ್ಜುನನೇ ಮಲ್ಲಯ್ಯನ ವೇಷದಲ್ಲಿ ಬಂದಿದ್ದ. ಆತ ಬೆಳಸಿಯ ಜೊತೆಯಲ್ಲಿ ಮೊಸರು ಇದ್ದರೆ ಚೆನ್ನಾಗಿರುತ್ತದೆ ಎಂದಾಗ ಬಾಲಕ ಸಿದ್ಧರಾಮನು ಮೊಸರು ತರಲು ಮನೆಗೆ ಓಡಿದ. ಮಾತು ಬಾರದ ಬಾಲಕ ಬಾಯಿಬಿಟ್ಟು ಅಮ್ಮಾ ಮೊಸರು ಕೊಡು ಎಂದು ಕೇಳಿದ ಎಂಬ ಪ್ರತೀತಿಯಿದೆ. ಈ 'ನವಣೆಯ ಹೊಲ' ಸೊನ್ನಲಿಗೆಯಲ್ಲಿ ಈಗಲೂ ಇದೆ. ಈ ೬೦ ಎಕರೆ ನವಣೆ ಹೊಲವನ್ನು ಈಗ ನೀರಾವರಿಗೆ ಅಳವಡಿಸಲಾಗಿದ್ದು, ಅದು ಮಲ್ಲಪ್ಪ ಭೂಪನೂರ ಎಂಬುವರ ಅಧೀನದಲ್ಲಿದೆ ಎಂದು ಬೆಲ್ದಾಳ ಶರಣರು ಹೇಳುವರು.

ಸಿದ್ಧರಾಮನು ತಂದೆ ಮೊರಡಿಯ ಮುದ್ದುಗೌಡ ತಾಯಿ ಸುಗ್ಗವ್ವೆ ಎಂದು ಘಟ್ಟಿವಾಳಯ್ಯ ತನ್ನ ವಚನವೊಂದರಲ್ಲಿ ಹೇಳುವನು. ಈ ಹೆಸರುಗಳನ್ನು ಈಗಲೂ ಸೊನ್ನಲಿಗೆ ಗ್ರಾಮದ ಜನತೆ ತಮ್ಮ ಮಕ್ಕಳಿಗೆ ಇಡುತ್ತಿರುವರು.

ಸಿದ್ಧರಾಮನು ಸುಗ್ಗವ್ವೆಯ ಗರ್ಭದಲ್ಲಿರುವಾಗ ರೇವಣಸಿದ್ಧೇಶ್ವರರು ಸೊನ್ನಲಿಗೆಗೆ ಭೇಟಿ ನೀಡಿ ಆ ಗ್ರಾಮದ ಹೊರಗೆ ಪಲ್ಲಕ್ಕಿಯಿಂದಿಳಿದು ಕಾಲುನಡುಗೆಯಲ್ಲಿ ಮುದ್ದುಗೌಡ-ಸುಗ್ಗವ್ವೆಯರ ಮನೆಗೆ ಹೊರಟರು. ಶಿಷ್ಯರು ಗುರುಗಳ ಈ ವಿಚಿತ್ರ ವರ್ತನೆಗೆ ಕಾರಣ ಕೇಳುವರು. ಈ ಗ್ರಾಮದಲ್ಲಿ ಯೋಗಿಯೊಬ್ಬನ ಜನನವಾಗುತ್ತಿದೆಯೆಂದು ರೇವಣಸಿದ್ಧೇಶ್ವರರು ಹೇಳುವರು. ಮುದ್ದು ಗೌಡ ಊರ ಹೊರಗೆ ರೇವಣಸಿದ್ಧೇಶ್ವರರನ್ನು ಸ್ವಾಗತಿಸಿದನು. ಊರ ಹೊರಗಿನ ಆ ಸ್ಥಳವನ್ನು 'ಗುರುಭೇಟ್' ಎಂದು ಈಗಲೂ ಕರೆಯಲಾಗುತ್ತಿದೆಯೆಂದೂ, ಈ ಪ್ರದೇಶದ ಹೊಲವನ್ನು 'ಮೊರ್ಡಿ ಮುದ್ದುಗೌಡನ ಹೊಲ' ಎಂದು ಕರೆಯಲಾಗುತ್ತಿದೆಯೆಂದೂ ಬೆಲ್ದಾಳ ಶರಣರು ಅಭಿಪ್ರಾಯಪಡುವರು. ಸಿದ್ಧರಾಮೇಶ್ವರರ ಬಾಲ್ಯದ ಗೆಳೆಯ ಶರಣ ಹಾವಿನಹಾಳ ಕಲ್ಲಯ್ಯನ ಪ್ರಸ್ತಾಪ ಅವರ ವಚನಗಳಲ್ಲಿ ಬಂದಿದೆ. ಸೊನ್ನಲಿಗೆಯ ನೆರೆಯ ಊರೇ ಹಾವಿನಹಾಳ ಎಂದು ಅವರು ಹೇಳುವರು. ಶ್ರೀ ಬೆಲ್ದಾಳ ಶರಣರ ಈ ಹೊಸ ಶೋಧವನ್ನು ಡಾ. ಎಂ. ಚಿದಾನಂದ ಮೂರ್ತಿಯವರು ಕ್ಷೇತ್ರಕಾರ್ಯ ಮಾಡಿ ಅದು ಸತ್ಯಕ್ಕೆ ದೂರವಾದುದೆಂದು ನಿರಾಕರಿಸಿರುವರು.* ಅವರು ಅಭಿಪ್ರಾಯಪಡುವಂತೆ "....ಸಿದ್ಧರಾಮನು ಸೊನ್ನಲಿಗೆಯಲ್ಲಿ

---

* ವಿವರಗಳಿಗೆ ನೋಡಿ : ಸೂರ್ಯಕೀರ್ತಿ (ಡಾ. ಸೂರ್ಯನಾಥ ಕಾಮತ್ ಅಭಿನಂದನ ಗ್ರಂಥ) ಸಂ. ಪಿ.ವಿ. ಕೃಷ್ಣಮೂರ್ತಿ ಮತ್ತು ಡಾ. ಕೆ. ವಸಂತಲಕ್ಷ್ಮಿ (೨೦೦) ಪು.೩೭೪-೩೮೦.

ಐಕ್ಯನಾದ ಮೇಲೆ ಅವನ ಬಗ್ಗೆ ಅಪಾರ ಭಕ್ತಿ ಹೊಂದಿದ್ದ ಸೊನಗಿ ಊರಿನ ಭಕ್ತರು ಸೊನ್ನಲಿಗೆಗೆ ಹೋಗಿ, ಅಲ್ಲಿ ತಯಾರಾಗಿದ್ದ ಶಿವಲಿಂಗವನ್ನು ತಂದು ತಮ್ಮ ಊರಲ್ಲಿ ಸ್ಥಾಪಿಸಿ ಸಿದ್ಧರಾಮೇಶ್ವರ ಗುಡಿಯನ್ನು ಕಟ್ಟಿರಬೇಕು. (ಅಥವಾ ತಾವೇ ತಮ್ಮ ಊರಲ್ಲಿ ಆ ಶಿವಲಿಂಗವನ್ನು ಮಾಡಿಸಿದ್ದರೂ ಆಶ್ಚರ್ಯವಿಲ್ಲ). ತಮ್ಮ ಊರಿಗೂ ಸಿದ್ಧರಾಮನ ಹೆಸರನ್ನೇ ನಾಮಕರಣ ಮಾಡಿದರು. ಅಥವಾ ಆ ಊರಿಗೂ ಆ ಮೊದಲೇ ಸೊನ್ನಲಿಗೆ ಎಂಬ ಹೆಸರೇ ಇದ್ದು, ಆ ಹೆಸರು ತಮ್ಮ ಊರಲ್ಲಿ ಸಿದ್ಧರಾಮೇಶ್ವರದೇವರ ಪ್ರತಿಷ್ಠೆಗೆ ಸೂಚನೆ ನೀಡಿದ್ದರೂ ಆಶ್ಚರ್ಯವಿಲ್ಲ. ಆದರೆ ಒಂದಂತೂ ತೀರಾ ಸ್ಪಷ್ಟ. ಸಿದ್ಧರಾಮನ ಸೊನ್ನಲಿಗೆಯಲ್ಲಿ ಅವನ ಬದುಕಿಗೆ, ಸಾಧನೆಗೆ ಸಂಬಂಧಿಸಿದಂತೆ ಯಾವಾವ ಕುರುಹುಗಳಿವೆ ಅವೆಲ್ಲವನ್ನೂ ತಮ್ಮ ಊರಲ್ಲೇ ಸೃಷ್ಟಿಮಾಡಿಕೊಳ್ಳುವುದರ ಅಥವಾ ಗುರುತಿಸಿಕೊಳ್ಳುವುದರ ಮೂಲಕ ತಮ್ಮ ಊರನ್ನು (ಸೊನಿಗೆ ಊರನ್ನು) ಒಂದು ರೀತಿಯಲ್ಲಿ ಅಭಿನವ ಸೊನ್ನಲಿಗೆ ಮಾಡಿಕೊಳ್ಳುವ ಪ್ರಯತ್ನ ನಡೆದಿದೆ. ಸಿದ್ಧರಾಮನ ಗುಡಿ ಅವನು ಕಟ್ಟಿಸಿದ ಕೆರೆ, ಅವನ ತಂದೆಯ ನವಣೆಯ ಹೊಲ, ರೇವಣಸಿದ್ಧನ ಭೇಟಿಯ ಜಾಗ ಇವೆಲ್ಲವೂ ಆ ಊರಲ್ಲಿ ಇಲ್ಲವೇ ನಿರ್ಮಾಣವಾದುವು ಅಥವಾ ಹೆಸರುಗೊಂಡುವು. ಸೊನಗಿ ಊರಲ್ಲಿ ಕೆಲವು ಪ್ರಾಚೀನ ಭಗ್ನ ದೇವಾಲಯಗಳ ಕುರುಹುಗಳಿವೆ. ಅವುಗಳಲ್ಲಿ ಮಲ್ಲಿಕಾರ್ಜುನ ದೇವಾಲಯದಂತಹ ದೇವಾಲಯವೂ ಒಂದಾಗಿದ್ದರೆ ಆಶ್ಚರ್ಯವಿಲ್ಲ. ತರೀಕೆರೆ ತಾಲೂಕಿನಲ್ಲಿರುವ ಸೊಲ್ಲಾಪುರ ಗ್ರಾಮದಲ್ಲಿ ಸಿದ್ಧರಾಮೇಶ್ವರ ಗದ್ದುಗೆ ದೇವಾಲಯ ಮತ್ತು ಕೆರೆ (ಹೊಂಡ) ಇದ್ದು, ಅಲ್ಲಿ ದೊಡ್ಡ ಜಾತ್ರೆಯೇ ನಡೆಯುತ್ತದೆ. ಹಿಂದೊಮ್ಮೆ ಯಾರೋ ಭಕ್ತರು ಸಿದ್ಧರಾಮನ ಗದ್ದುಗೆ ಕಟ್ಟಿಸಿ, ಅದರ ಸುತ್ತ ಬೆಳೆದ ಊರಿಗೆ "ಸೊಲ್ಲಾಪುರ" ಎಂದು ನಾಮಕರಣ ಮಾಡಿರುವ ಸಾಧ್ಯತೆ ಇದೆ."

ಸಿದ್ಧರಾಮನ ಬದುಕು-ವ್ಯಕ್ತಿತ್ವವನ್ನು ತಿಳಿಯಲು ಅವನು ಬರೆದಿರುವ ವಚನಗಳೇ ಮೂಲ ಆಕರ. ಆದರೂ, ಅವನ ಬದುಕಿನ ಎಲ್ಲ ಸಂಗತಿಗಳನ್ನೂ ವಚನಗಳು ತಿಳಿಯ ಹೇಳಲು ಸಾಧ್ಯವಿಲ್ಲ. ಏಕೆಂದರೆ, ವಚನಗಳು ಅಂದಂದಿನ ಅನುಭವ-ಅನುಭಾವಗಳಿಗೆ ವಚನಕಾರನ ಮನಸ್ಸು ಹೇಗೆ ಸ್ಪಂದಿಸಿತೆಂಬುದನ್ನು ಅಕ್ಷರ ಮಾಧ್ಯಮದ ಮೂಲಕ ತಿಳಿಯಪಡಿಸುತ್ತವೆ. ಈ ಇತಿಮಿತಿಯಿಂದಾಗಿ ಯಾವುದೇ ಶರಣನ ಸಮಗ್ರ ಬದುಕಿನ ವಿವರಗಳನ್ನು ಅವನು ಬರೆದಿರಬಹುದಾದ ವಚನಗಳು ಹೇಳಲಾರವು. ಆದ್ದರಿಂದ ನಾವು ಅನಿವಾರ್ಯವಾಗಿ ಕಾಲಕಾಲಕ್ಕೆ ಶರಣನನ್ನು ಕುರಿತು ಕೃತಿರಚನೆ ಮಾಡಿದ ಕವಿಗಳ ಕೃತಿಗಳನ್ನು ಆಧರಿಸಬೇಕಾಗುತ್ತದೆ. ಸಿದ್ಧರಾಮನ ಬದುಕನ್ನು ಕುರಿತು ಹರಿಹರ ರಗಳೆಯೊಂದನ್ನು ಬರೆದಿರುವ ಸಾಧ್ಯತೆಯಿದೆ. ವಿದ್ವಾಂಸರು ಅಭಿಪ್ರಾಯಪಡುವಂತೆ ರಗಳೆಯನ್ನು ಆಧರಿಸಿ ಬಹುಶಃ ರಾಘವಾಂಕನು 'ಸಿದ್ಧರಾಮ ಚಾರಿತ್ರ'ವನ್ನು ಬರೆದಿರಬಹುದು. ಹರಿಹರನು ಸಿದ್ಧರಾಮನ ಬಗೆಗೆ ಬರೆದಿರಬಹುದಾದ ರಗಳೆಯ ಕೃತಿ, ಜನತೆಯಲ್ಲಿ ಸಿದ್ಧರಾಮನ ಬಗೆಗೆ ಪ್ರಚಲಿತವಿದ್ದ ಅನೇಕ ಕಥೆಗಳು ಮತ್ತು ಸ್ವತಃ

ಸಿದ್ಧರಾಮನು ಬರೆದಿರುವ ವಚನಗಳು -ಈ ಮೂಲಸಾಮಗ್ರಿಗಳನ್ನು ಉಪಯೋಗಿಸಿಕೊಂಡು ರಾಘವಾಂಕನು 'ಸಿದ್ಧರಾಮ ಚಾರಿತ್ರ' ಗ್ರಂಥರಚನೆ ಮಾಡಿರುವ ಸಾಧ್ಯತೆಯಿದೆ.

ರಾಘವಾಂಕನ ದೃಷ್ಟಿಯಲ್ಲಿ ಕಥಾನಾಯಕ ಸಿದ್ಧರಾಮನು ಅಯೋನಿಜನು; ಭೂವಳಯದೊಳಗುಳ್ಳ ಸರ್ವ ಜೀವಾಳಿಗಳ ಪಾವನಂ ಮಾಡಲೆಂದು ಬಂದವನು; ಕಾರಣರುದ್ರನು. 'ಧರೆಗೆ ಸೊನ್ನಲಿಗೆಪುರ ಕೈಲಾಸ. ಆ ಜಗದಗುರು ಸಿದ್ಧರಾಮನು ಈಶ್ವರನು. ಅಲ್ಲಿ ಮೆರೆವ ಗುಡ್ಡರು ಗಣೇಶ್ವರರು. ಅಖಿಳ ಜನವು ಅಮರರು. ಅವರ ಸತಿಯರು ರುದ್ರಕನ್ಯೆಯರು. ನೆರೆದ ಶಿವಭವನಂಗಳು ಅಷ್ಟಾಷಷ್ಟಿಕ್ಷೇತ್ರ. ಇದನ್ನು ಅಲ್ಲಗಳೆಯುವ ಪರವಾದಿ ಯಾರೋ ಅವನ ಶಿರದ ಮೇಲೆ ನನ್ನ ಎಡಪಾದದ ಪಾದರಕ್ಷೆಯನ್ನು ಇಳುಹುವೆನು' -ಎನ್ನುವ ಉಗ್ರನಿಷ್ಠೆ ರಾಘವಾಂಕನದು. ರಾಘವಾಂಕ ತನ್ನ ಕಥಾನಾಯಕನ ಜೀವನಾದರ್ಶವನ್ನು 'ಸಾಕಾರನಿಷ್ಠೆ ಭೂತಂಗಳೊಳಗನುಕಂಪೆ ತಾನೆ ಪರಬೊಮ್ಮ' ಎಂದು ಹೇಳಿಸಿರುವನು. ಪ್ರೊ. ಡಿ.ಎಲ್. ನರಸಿಂಹಾಚಾರ್‌ರವರು ಅಭಿಪ್ರಾಯಪಡುವಂತೆ "ಈ ಸೂತ್ರ ಸಿದ್ಧನ ಬದುಕಿನ ಸಾರ, ಅವನ ಕಥೆ ಇದಕ್ಕೆ ವ್ಯಾಖ್ಯಾನ. ಅಲ್ಲಿ ಬರುವ ಎಲ್ಲ ಸಂದರ್ಭಗಳನ್ನೂ ಅಖ್ಯಾನಗಳನ್ನೂ ಇದು ಪೋಣಿಸಿ ಕಥೆಯನ್ನು ಮೂಲಾಕಾರವಾಗಿ ಮಾಡಿದೆ."[೧] ಸಾಕಾರನಿಷ್ಠೆ ಸಿದ್ಧರಾಮನಿಗೆ ಅಗತ್ಯವಿಲ್ಲವಾದರೂ ಅದು ಲೋಕದ ಜನರಿಗಾಗಿ ಬೇಕಾಗಿದೆ. ಜನರ ನಂಬಿಕೆಯನ್ನು ಸಿದ್ಧರಾಮ ಪ್ರಶ್ನಿಸುವವನಲ್ಲ. ಏಕೆಂದರೆ ಸಾಕಾರನಿಷ್ಠೆ ಭಾರತೀಯರ ನರನಾಡಿಗಳಲ್ಲಿ ಹಂಚಿಹೋಗಿರುವ ಭಾವನೆ. ಜನರ ಭಾವನೆಯನ್ನು ಗೌರವಿಸಲು ಅವನು ದೇವಾಲಯ ನಿರ್ಮಾಣ ಲಿಂಗಪ್ರತಿಷ್ಠೆ ಇತ್ಯಾದಿಗಳನ್ನೆಲ್ಲ ಮಾಡುವನು. ಅವನು 'ದಯಾ ಸಮುದ್ರ' ನಾಗಿರುವುದರಿಂದ ಸರ್ವಜೀವಾಳಿಗಳ ಕ್ಷೇಮಚಿಂತನೆ ಮಾಡುವನು. 'ಹೆಂದದಣು ಮೊದಲಿರುಹೆ ಪಶುಪಕ್ಷಿಮೃಗವಾನೆ'ಗಳ ಹಿತವನ್ನು ಬಯಸುವನು; ಭೂದಾನ, ಗೋದಾನ, ಕನ್ಯಾದಾನ, ವಸ್ತ್ರದಾನ, ಮಹಿಷದಾನ, ಅನ್ನದಾನಗಳನ್ನು ಮಾಡುವನು. "ಸಾಕಾರ ನಿಷ್ಠೆಯಿಂದ ಬರುವ ಆತ್ಮಕಲ್ಯಾಣವೂ ಭೂತಾನುಕಂಪೆಯಿಂದ ದೊರೆಯುವ ಲೋಕಕಲ್ಯಾಣವೂ ಅಹಮಹಮಿಕೆಯಿಂದ ವೃದ್ಧಿಗೊಂಡಾಗ ಅವು ಸಮಸ್ತ ಸನ್ಮಂಗಳ ಸ್ವರೂಪಿಯಾದ ಪರಬ್ರಹ್ಮವಲ್ಲದೆ ಮತ್ತೇನು? ಈ ತತ್ವದ ತಳಹದಿಯ ಮೇಲೆ ಸಿದ್ಧನ ಚರಿತ್ರೆ ಕವಿಯಿಂದ ನಿರ್ಮಿತವಾಗಿದೆ....."[೨]

ಸಿದ್ಧರಾಮನಿಗೆ 'ವಚನ'ವು ಕೇವಲ ಅಭಿವ್ಯಕ್ತಿ ಮಾಧ್ಯಮವಾಗಿಲ್ಲ. ಅದು 'ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ತಿಳಿಯಲಿಕ್ಕೆ' ನೆರವಾಗುವ ಸಾಧನ. ವಚನವು ಅವನ ಪಾಲಿಗೆ

---

೧. ಸಿದ್ಧರಾಮ ಚಾರಿತ್ರ, ಪೀಠಿಕೆ, ಪು. xivii (೧೯೭೪)
೨. ಅದೇ, ಪು. xivii.

‘ಆದ್ಯರ ಆಜ್ಞೆ’, ‘ಈಶ್ವರನಿಗೆ ಬೆಳಗುವ ಜ್ಯೋತಿ’. ಮಾತಿಗಿಂತ ನಡೆಗೆ, ಅನುಭವಕ್ಕೆ ಹೆಚ್ಚಿನ ಪ್ರಾಧಾನ್ಯ ನೀಡುವ ಅವನು ‘ಅನುಭವವೆಂಬುದು ಅನುಭಾವಿಕಗಲ್ಲದೆ ಹೊತ್ತಗೆಯಲ್ಲಿಲ್ಲ ನೋಡಾ, ಎಂದಿರುವನು. ಪುಸ್ತಕ ವಿದ್ಯೆಯೆ ವಿದ್ಯೆ ಎನ್ನುವ ಪರಂಪರೆಯ ಹುಸಿ ನಂಬಿಕೆಯನ್ನು ‘ವಿದ್ಯೆ ಎಂದಡೆ ಭಾರತ- ರಾಮಾಯಣವಲ್ಲ.....’ ಎನ್ನುವ ಮೂಲಕ ಖಂಡಿಸುವನು. ಇದೇ ಧೋರಣೆ ಕೆಳಗಿನ ಈ ವಚನದಲ್ಲೂ ನಾವು ಕಾಣಬಹುದು:

ವಚಿಸಿ ವಚಿಸಿ ಅನುಭಾವಿಯಾಗದವ ಪಿಶಾಚಿಯಯ್ಯಾ;  
ವಚಿಸಿ ಅನುಭವಿಯಾದವ ಪಂಡಿತನಯ್ಯಾ.  
ವಿದ್ಯೆ ಎಂಬುದು ಅಭ್ಯಾಸಿಕನ ಕೈವಶ,  
ಅವಿದ್ಯೆಯೆಂಬುದು ಸರ್ವರಲ್ಲಿ ವಶ.  
ವಿದ್ಯಾವಿದ್ಯೆಯನರಿತು ಜಗದ್ವೇದ್ಯನಾಗಬಲ್ಲಡೆ,  
ಮಹಾಪಂಡಿತ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.

ಪಾಂಡಿತ್ಯಕ್ಕಿಂತ ಅನುಭಾವಕ್ಕೆ, ಹೃದಯಶುದ್ಧಿಗೆ, ಸರ್ವಜೀವಾನುಕಂಪೆಗೆ ಹೆಚ್ಚಿನ ಮಹತ್ವ ನೀಡಬೇಕೆಂಬುದು ಸಿದ್ಧರಾಮನ (ಮೇಲಾಗಿ ಎಲ್ಲ ವಚನಕಾರರ) ಆಶಯ. ಹೀಗಾಗಿ, ವಚನ ರಚನೆಯ ಬಿಟ್ಟು ಕುತ್ಸಿತ ಕಾವ್ಯಾಲಂಕಾರ ನೋಡುವರ ನೋಡಿ ಮಹಾದೇವ ಕಪಿಲಸಿದ್ಧಮಲ್ಲಿಕಾರ್ಜುನನು ‘ಹುಡಿಮಣ್ಣ ಹೊಯ್ಯದೆ ಮಾಬನೆ’ ಎನ್ನುವನು. ಅಷ್ಟೇ ಅಲ್ಲ,

ಶಾಸ್ತ್ರವೆಂಬುದು ಮನ್ಮಥಶಸ್ತ್ರವಯ್ಯಾ.  
ವೇದಾಂತವೆಂಬುದು ಮೂಲ ಮನೋವ್ಯಾಧಿಯಯ್ಯಾ.  
ಪುರಾಣರೆಂಬುದು ಮೃತವಾದವರ ಗಿರಾಣವಯ್ಯ.  
ತರ್ಕವೆಂಬುದು ಮರ್ಕಟಾಟವಯ್ಯಾ.  
ಆಗಮವೆಂಬುದು ಯೋಗದ ಘೋರವಯ್ಯಾ.  
ಇತಿಹಾಸವೆಂಬುದು ರಾಜರ ಕಥಾಭಾಗವಯ್ಯಾ.  
ಸ್ಮೃತಿಯೆಂಬುದು ಪಾಪ ಪುಣ್ಯ ವಿಚಾರವಯ್ಯಾ.  
ಆದ್ಯರ ವಚನವೆಂಬುದು ಬಹುವೇದ್ಯವಯ್ಯಾ,  
ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನ ತಿಳಿಯಲಿಕ್ಕೆ.

ಎಂಬ ಈ ವಚನದ ಧೋರಣೆಯನ್ನು ಗಮನಿಸಿದಾಗ ಪರಂಪರೆಯಿಂದ ಬಂದ ಕಾವ್ಯ, ಶಾಸ್ತ್ರ, ವೇದಾಂತ, ಪುರಾಣ, ತರ್ಕ, ಆಗಮ, ಇತಿಹಾಸ, ಸ್ಮೃತಿ -ಇವಾವೂ ಜನಸಾಮಾನ್ಯನನ್ನು ಸ್ಪಂದಿಸದೆ, ಅವನ ಅಂತರಂಗದ ವಿಕಾಸಕ್ಕೆ ಕಾರಣವಾಗದೆ ಹೋದುದರ ಬಗೆಗೆ ನಿರಾಶೆ ಟೀಕೆಯ ರೂಪದಾಳಿರುವಂತೆ ತೋರುತ್ತದೆ.

ಶಿವಶರಣರ ವಚನಗಳು ನಮ್ಮ ನಡಾವಳಿಗಳನ್ನು ತಿದ್ದಿಕೊಳ್ಳುವ ಒರೆಗಲ್ಲು. ‘ನಮ್ಮ ನಡಾವಳಿಗೆ ನಮ್ಮ ಪುರಾತರ ನುಡಿಯೆ ಇಷ್ಟವಯ್ಯಾ’ ಎಂಬ ಮಾತಿನಿಂದ

ಇದು ಸ್ಪಷ್ಟವಾಗುತ್ತದೆ. ನಮ್ಮ ಶಿವಶರಣರ ವಚನಗಳನ್ನು ಮೇಲಿಂದ ಮೇಲೆ ಆಸ್ವಾದಿಸುವುದರಿಂದ ಅವುಗಳಲ್ಲಿ ಅಂತರ್ಗತವಾಗಿರುವ ದಿವ್ಯ ಜೀವನಾನುಭವ ವೇದ್ಯವಾಗುತ್ತದೆ ಎಂಬುದು 'ಅಗಿದಗಿದು ನೋಡುವುದು' ಎಂಬ ಮಾತಿನಿಂದ ವಿದಿತವಾಗುತ್ತದೆ. ಕನ್ನಡದ ವಿಶಿಷ್ಟ ಕಾಣಿಕೆಯಾದ ವಚನಸಾಹಿತ್ಯವು ಬರಿಯ ವಾಗ್ರಚನೆಯಲ್ಲ ಎಂಬುದನ್ನು 'ವಚನಾನುಭವೊ ವಚನೋ ನ' ಎಂಬ ವಾಕ್ಯದ ಮೂಲಕ ಅವನು ವಿಷದಪಡಿಸುವನು. ಅವನಿಗೆ ವಚನಗಳ ಮೇಲಿನ ಅಭಿಮಾನ ಅತಿಶಯವಾದುದೆಂಬುದನ್ನು ಈ ಕೆಳಗಿನ ವಚನ ಶ್ರುತಪಡಿಸುತ್ತದೆ:

ಎಮ್ಮ ವಚನದೊಂದು ಪಾರಾಯಣಕ್ಕೆ
ವ್ಯಾಸನದೊಂದು ಪುರಾಣ ಸಮ ಬಾರದಯ್ಯಾ.
ಎಮ್ಮ ವಚನದ ನೂರೆಂಟಧ್ಯಯನಕ್ಕೆ
ಶತರುದ್ರೀಯಯಾಗ ಸಮಬಾರದಯ್ಯಾ.
ಎಮ್ಮ ವಚನದ ಸಾಸಿರ ಪಾರಾಯಣಕ್ಕೆ
ಗಾಯತ್ರೀ ಲಕ್ಷ ಜಪ ಸಮ ಬಾರದಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ.

ಸಿದ್ಧರಾಮನ ವಚನಗಳಲ್ಲಿ ಅವನ ಅನೇಕ ವೈಯಕ್ತಿಕ ಸಂಗತಿಗಳು ದಾಖಲುಗೊಂಡಿವೆ. ಮಲ್ಲಿಕಾರ್ಜುನನು ಲಿಂಗಪ್ರತಿಷ್ಠೆ ಮಾಡೆಂದು ನಿರೂಪಿಸಿದುದು, 'ತನಗೆ ಬೇರೆ ಸ್ವಾತಂತ್ರ್ಯವಿಲ್ಲದ ಕಾರಣ ಲಿಂಗಪ್ರತಿಷ್ಠೆ ಮಾಡಿದುದು; ಯೋಗಿಯ ಶರೀರ ವೃಥಾಯ ಹೋಗಲಾಗದು ಪುಣ್ಯವ ಪುಣ್ಯವ ಮಾಡುವುದು ಲೋಕಕ್ಕೆ' ಎಂಬ ಆದರ್ಶವನ್ನು ಮುಂದಿಟ್ಟುಕೊಂಡು ಪುಣ್ಯಕಾರ್ಯಗಳನ್ನು ನೆರವೇರಿಸಿದ್ದು; ಮಲ್ಲಿಕಾರ್ಜುನನ ಪ್ರೇರಣೆಯಂತೆ ಕೆರೆ, ಬಾವಿ, ಹೂದೋಟ, ಚೌಕ ಛತ್ರಗಳನ್ನು ಮಾಡಿಸಿದುದು; ತಾನು ಕಟ್ಟಿಸಿದ ಕೆರೆಯ ನೀರು ತನ್ನ ಮನದ ಸರ್ವಜೀವದಯಾಪರತ್ವಗಳು ಎಂದಿಗೂ ಬತ್ತಿಹೋಗುದಿಲ್ಲವೆಂದು ಪ್ರತಿಜ್ಞೆ ಮಾಡಿದುದು; ತಾನು ಮರೆತದ್ದು ; ತನಗೆ ಮೂರು ಕಣ್ಣಿರುವುದನ್ನು ಲೋಕವೆಲ್ಲ ತಿಳಿದಿರುವುದು; ಚೆನ್ನಬಸವಣ್ಣನು ತನಗೆ ದೀಕ್ಷೆಯನ್ನಿತ್ತುದು; ಇಷ್ಟಲಿಂಗವನ್ನು ಧರಿಸಿದ ಮೇಲೆ ಸ್ಥಾವರ ಲಿಂಗಪೂಜೆಯನ್ನು ನಿಲ್ಲಿಸಿದುದು; ಕಪಿಲ ಸಿದ್ಧಮಲ್ಲಿಕಾರ್ಜುನನು ತನ್ನಿಂದ ತುಪ್ಪದ ಅಭಿಷೇಕ, ಅಮೃತದ ಅಭಿಷೇಕ, ಸರ್ವಾಭಿಷೇಕ ಸ್ವೀಕರಿಸಿದುದು -ಹೀಗೆ ಸಿದ್ಧರಾಮನ ಬದುಕಿನ ಅನೇಕ ವಿವರಗಳು ವಚನಗಳಲ್ಲಿ ಅಂತರ್ಗತವಾಗಿರುವುದು ಕಂಡುಬರುತ್ತದೆ.

ಸಿದ್ಧರಾಮನ ಜೀವನದಲ್ಲಿ ಎರಡು ಹಂತಗಳಿವೆ : ೧. ಕಲ್ಯಾಣಕ್ಕೆ ಬರುವ ಮುನ್ನ ಸೊನ್ನಲಿಗೆಯಲ್ಲಿ ಸಾಮಾಜಿಕ ಚಟುವಟಿಕೆಗಳಲ್ಲಿ ತೊಡಗಿದ್ದುದು. ೨. ಕಲ್ಯಾಣಕ್ಕೆ ಬಂದು ಬಸವಾದಿ ಶಿವಶರಣರ ಜೊತೆ ಸೇರಿಕೊಂಡು ತಾನು ಹಿಂದೆ ಕೈಕೊಂಡ ಲೌಕಿಕ ಸಾಮಾಜಿಕ ಕಾರ್ಯಗಳ ಬಗೆಗೆ ಒಂದು ರೀತಿಯ ಅತೃಪ್ತಿಯನ್ನೂ ಪಶ್ಚಾತ್ತಾಪವನ್ನೂ

ಹೊಂದಿದ್ದುದು (ನೋಡಿ: "ಹಸುಳೆಯಾಗಿಯು ನಾನು ಕೆರೆ ಬಾವಿ ದೇವಾಲ್ಯ। ವಿರಚಿಸಿ ಭವಕ್ಕೆ ಬಂದು ಫಲವನುಂಡು। ನರಕಕೆ ಬೀಳುವನ ಕರುಣ ಕರದಿಂದೆತ್ತಿ। ನಿನ್ನ ಹೊರೆಯೊಳಗಿರಿಸಿದೆ ಯೋಗಿನಾಥ॥" -ಬಸವ ಸ್ತೋತ್ರದ ತ್ರಿವಿಧಿ). ಮೊದಲನೆಯ ಹಂತದ್ದು ಲೋಕೋಪಕಾರಿಯಾಗಿದ್ದದ್ದು, ಸರ್ವಜೀವ ದಯಾಪಾರಿಯಾದದ್ದು. ಎರಡನೆಯ ಹಂತದ್ದು ಲೋಕವನ್ನು ನಿರಾಕರಿಸಿದ 'ಅನುಭಾವವನ್ನು ಸಂಪಾದಿಸುವ' ಕಡೆಗೆ ಲಕ್ಷ್ಯವಿರುವಂತಹದ್ದು.

ವಚನಕಾರರಲ್ಲಿ ಹೆಚ್ಚಿನ ಸಾಮಾಜಿಕ ಹೊಣೆಗಾರಿಕೆಯನ್ನು (Social Commitment) ಹೊತ್ತವರಲ್ಲಿ ಮುಖ್ಯರು ಬಸವಣ್ಣ ಹಾಗೂ ಸಿದ್ಧರಾಮ. ಒಂದು ರಾಜ್ಯದ ಪ್ರಧಾನಿಯಾದ ಬಸವಣ್ಣನಿಗೆ ರಾಜಕೀಯದ ಜೊತೆಗೆ ಸಾಮಾಜಿಕ ಹೊಣೆಗಾರಿಕೆಯು ಬಹಳವಿದ್ದಿತು. ಅದನ್ನು ಚೆನ್ನಾಗಿ ನಿರ್ವಹಿಸಿದವನು ಬಸವಣ್ಣ. ಬಸವಣ್ಣ ನಿರ್ವಹಿಸಿದ ಸಾಮಾಜಿಕ ಹೊಣೆಗಾರಿಕೆಯ ಬಗೆಗೆ ನಾವು ಅವನ ವಚನಗಳ ಮೂಲಕ ಅರಿಯಬಹುದು. ಸಿದ್ಧರಾಮನಿಗೂ ಪ್ರಮುಖವಾದುದು ಸಾಮಾಜಿಕ ಹೊಣೆಗಾರಿಕೆ. 'ಮರ್ತ್ಯಲೋಕವು ಕರ್ತಾರನ ಕಮ್ಮಟ'ವೆಂದು ಭಾವಿಸಿ 'ಇಹ'ವನ್ನು ಪ್ರೀತಿಸುವುದು, ಬದುಕನ್ನು ಪ್ರೀತಿಸುವುದು ಸಾಮಾಜಿಕ ಹೊಣೆಗಾರಿಕೆಯಲ್ಲಿ ಪ್ರಧಾನವಾದುದು. ಸಾಮಾಜಿಕ ಹೊಣೆಗಾರಿಕೆಯ ಅರಿವು ಬರಬೇಕಾದರೆ ಜನಸಾಮಾನ್ಯರ ನಡುವೆ ಬೆರೆಯುವ, ಅವರ ಬದುಕು ಹಸನಾಗಬೇಕಾದರೆ ಏನು ಮಾಡಬೇಕೆಂಬುದನ್ನು ಚಿಂತಿಸುವ ಮನೋಭಾವ ಬೇಕು; ಹೊಗಳಿಕೆ ತೆಗಳಿಕೆಗಳನ್ನು ಸಮಾನವಾಗಿ ಸ್ವೀಕರಿಸುವ ಗಟ್ಟಿ ಮನಸ್ಸು ಬೇಕು; ಎಷ್ಟೇ ಕಷ್ಟ ಬಂದರೂ ತನ್ನ ಗುರಿ ಮುಟ್ಟಿಯೇ ಮುಟ್ಟುತ್ತೇನೆನ್ನುವ ಛಲ ಬೇಕು; ಮೇಲಾಗಿ, ಮಾನವೀಯತೆ ಸದಾ ಹೃದಯದಲ್ಲಿ ಮಿಡಿಯುತ್ತಿರಬೇಕು. ಸಿದ್ಧರಾಮನು ಕೈಗೊಂಡ ಕೆರೆ, ಬಾವಿ, ಹೂದೋಟ, ಚೌಕ, ಛತ್ರ, ಸಾವಿರ ಮದುವೆಗಳು, ಬಡವರ ನಿರ್ಗತಿಕರ ಋಣಪರಿಹಾರ -ಇವೇ ಮೊದಲಾದ ಕಾರ್ಯಗಳಲ್ಲಿ ಸಾಮಾಜಿಕ ಹೊಣೆಗಾರಿಕೆಯನ್ನು ಗುರುತಿಸಬಹುದು. ಬಿಲ್ಲೇಶ ಬೊಮ್ಮಯ್ಯನ ಪ್ರಸಂಗ, ಏಲೇಶನಿಗೆ ಪ್ರಾಣವಿತ್ತ ಪ್ರಸಂಗಗಳಲ್ಲಿ ('ಸಿದ್ಧರಾಮ ಚಾರಿತ್ರ') ಮಾನವೀಯತೆಯ ಪರಾಕಾಷ್ಠೆಯನ್ನು ನಾವು ಕಾಣಬಹುದು.

ಸಿದ್ಧರಾಮ ತನ್ನ ನಿರಂತರವಾದ ಸಾಧನೆಯ ಮೂಲಕ ತನ್ನ ಆದರ್ಶಗಳಿಗೆ, ಕನಸುಗಳಿಗೆ ಒಂದು ರೂಪ ಕೊಟ್ಟವನು. ಈ ಸಾಧನೆಯಲ್ಲಿ ನಿಷ್ಠೆ ಎದ್ದು ಕಾಣುವ ಅಂಶ. ಈ ನಿಷ್ಠೆ ಸಾಕಾರದ ಬಗೆಗೆ ಆತ ಬೆಳೆಸಿಕೊಂಡ ತೀವ್ರತರವಾದ ಸಂಬಂಧದಿಂದ ಬಂದುದು. ಆ ಭಾವ ಅಚಲವಾದ ಶ್ರದ್ಧೆಯನ್ನು ಇಂಬುಗೊಂಡುದು. ಭಾವವು ಸಂಕೀರ್ಣದ ಸಂಕೇತ. ಭಾವಕ್ಕೆ ಗಟ್ಟಿತನ ಹಾಗೂ ಟೊಳ್ಳುತನ ಎರಡೂ ಸಾಧ್ಯ. ಸಿದ್ಧರಾಮನ ಮಾತಿನಲ್ಲೇ ಹೇಳುವುದಾದರೆ

'ಯಥಾ ಭಾವಸ್ತಥಾ ದೇವಃ' ಎಂದ ಬಳಿಕ
ದೇವರ ಬಯಲ ಭಾವ ತನ್ನಲ್ಲಿ ಇಂಬುಗೊಂಡಡೆ ಮುಕ್ತಿ
ದೇವ ರೀತಿಯೊಂದು, ತನ್ನ ರೀತಿಯೊಂದಾದ ಬಳಿಕ
ಘಟಿಸದು ಕಪಿಲಸಿದ್ಧಮಲ್ಲಿಕಾರ್ಜುನನ ಐಕ್ಯವು.

ಜ್ಞಾನಿಯಾದ ಮಾತ್ರಕ್ಕೇ ಅವನ ಭಾವಕ್ಕೆ ಗಟ್ಟಿತನ ಸೇರುವೆಯಾಗುವುದಿಲ್ಲ. ಅವನ ಭಾವ ಚಂಚಲವಿರಬಹುದು- ದೇಹಾವಸಾನದಲ್ಲಿಯ ಭಾವದಂತೆ. ಸಿದ್ಧರಾಮ ನಂಬಿರುವಂತೆ ಇಂತಹ ಭಾವ ಜನ್ಮಕ್ಕೆ ಈಡು; ನಿರ್ಭಾವವೆಂಬುದು ಜನ್ಮಕ್ಕೆ ಕಾಡುಗಿಚ್ಚು. ಸಿದ್ಧರಾಮನಿಗೆ ಸಾಧನೆಯ ಮೊದಲ ಘಟ್ಟದಲ್ಲಿ ಸಾಕಾರದ ಅಗತ್ಯವಿದ್ದಿತು. ಸಾಧನೆಯ ನಿರಂತರಾವಸ್ಥೆಯಲ್ಲಿ ಆಕಾರ ನಷ್ಟವಾಗಿ ನಿರಾಕಾರವೇ ಸ್ಥಿರವಾಗುತ್ತದೆ. ಇದನ್ನೇ ಕೆಳಗಿನ ವಚನದಲ್ಲಿ ಅವನು ಹೇಳುತ್ತಿರುವನು.

ಆಕಾರವಿಲ್ಲದ ಮೂರ್ತಿಯ ಆಕಾರಕ್ಕೆ ತಂದು
ಪೂಜಿಸಿದೆ ನೋಡಾ, ಮನವೆ.
ಆಕಾರದ ಮೂರ್ತಿಯ ನಿರಾಕಾರಕ್ಕೆ ತಂದು
ಪೂಜಿಸಲರಿಯೆ ನೋಡಾ, ಮನವೆ.
'ಯದ್ದೃಷ್ಟ ತನ್ನಷ್ಟಂ' ಎಂದ ಬಳಿಕ,
ನಿರಾಕಾರ ನಿಜನಿರ್ವಯಲವೆ ಸ್ಥಿರವೆಂದು ನಂಬು ಮನವೆ,
ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ.

ನಿರಾಕಾರ ಸಾಕಾರಗಳ ಬಗೆಗೆ ಸಿದ್ಧರಾಮ ಸ್ಪಷ್ಟವಾದ ಉದಾಹರಣೆಗಳ ಮೂಲಕ ವಿವರಿಸುವನು-ಕುಂಬಾರ ಹಾಗೂ ಕಂಬಾರರ ಸೃಷ್ಟಿಕ್ರಿಯೆಯ ಮೂಲಕ. ಕುಂಬಾರನ ಆವಿಗೆಯ ಮಣ್ಣಿನಲ್ಲಿ ಕುಂಬಾರನಿಲ್ಲ. ಆದರೆ ಕುಂಬಾರ ತನ್ನ ವೃತ್ತಿಧರ್ಮದಲ್ಲಿ ನಿರಾಕಾರಕ್ಕೆ ಒಂದು ಆಕಾರ ಕೊಡುತ್ತಾನೆ. ಕಂಬಾರನದೂ (= ಲೋಹದ ಮೂರ್ತಿ ನಿರ್ಮಿಸುವವ) ಅದೇ ಬಗೆಯ ವರ್ತನೆ. ಒಬ್ಬ ಮಣ್ಣಿಗೆ ಆಕಾರ ಕೊಡುತ್ತಾನೆ. ಇನ್ನೊಬ್ಬ ಲೋಹಕ್ಕೆ ಆಕಾರ ಕೊಡುತ್ತಾನೆ. ಇವರ ಕ್ರಿಯೆಯ ಮೂಲಕ ನಿರಾಕಾರಕ್ಕೆ ಸಾಕಾರತ್ವ ಪ್ರಾಪ್ತಿಯಾಗುವುದು ಈ ಭೋಗ್ಯವಸ್ತುಗಳಲ್ಲಿ ಕುಂಬಾರ ಕಂಬಾರರಿರುವುದಿಲ್ಲ. ಆದರೂ ಇವರು ಆ ವಸ್ತುಗಳ ನಿರ್ಮಿತಿಯಲ್ಲಿ ಅವ್ಯಕ್ತರಾಗಿರುವರು. ಈ ಪ್ರಪಂಚದಲ್ಲಿ ಪರಮಾತ್ಮನೂ ಕುಂಬಾರ, ಕಂಬಾರನಂತಿರುವನು.

ಸಿದ್ಧರಾಮನಲ್ಲಿ ಸಾಕಾರನಿಷ್ಠೆಗೆ ಪ್ರೇರಣೆ ಒತ್ತಾಸೆ ಬಂದುದು ಶ್ರೀಶೈಲದ ಮಲ್ಲಿಕಾರ್ಜುನನಿಂದ. ಈ ಮಾತಿಗೆ 'ಎನ್ನ ಭಕ್ತಿಗೆ ಸೊನ್ನಲಿಗೆಯಲ್ಲಿ ಕಪಿಲಸಿದ್ಧಮಲ್ಲಿಕಾರ್ಜುನನಾಗಿ ಬಂದಿರಿ' ಎಂಬ ಅವನ ವಚನದಲ್ಲಿನ ಉಲ್ಲೇಖವೇ ಸಾಕ್ಷಿ. ಸಿದ್ಧರಾಮನಿಗೂ ಶ್ರೀಶೈಲಕ್ಕೂ ಅವಿನಾಭಾವ ಸಂಬಂಧವಿದೆ ಇದಕ್ಕೆ ಪೂರಕವಾಗಿ

ಸಿದ್ಧರಾಮನ 'ಶ್ರೀಶೈಲದ ಮಹಿಮೆಯದು ಕರ್ಣಾಭರಣ.........' 'ಎಲ್ಲರು ತಪವ ಮಾಡಿದರು ನಮ್ಮ ಶ್ರೀಶೈಲನ ತಪದಂತೆ ತಪದ ಒರ್ವರನು ಕಾಣೆ...' 'ಜನ್ಮವನೊಮ್ಮೆ ಧರಿಸಿದ ಬಳಿಕ ಜನನವಿನಾಶ ವಿಗ್ರಹಮೂರ್ತಿಯ ಪೂಜಿಸಲೆ ಬೇಕು.....' ಎಂದು ಪ್ರಾರಂಭವಾಗುವ ವಚನಗಳನ್ನು ಪರಿಭಾವಿಸಬೇಕು. ಸಿದ್ಧರಾಮನ ವಚನಗಳಲ್ಲಿ ಅವನ ವೈಯಕ್ತಿಕಸಂಗತಿಗಳ ಉಲ್ಲೇಖಗಳು ಕಂಡುಬರುತ್ತವೆ. ಅವುಗಳಲ್ಲಿ ಒಂದು ನವಣೆಯ ಹೊಲದಲ್ಲಿ ಬಾಲಕ ಸಿದ್ಧರಾಮನಿಗೆ ದರ್ಶನವಿತ್ತು ಮನೆಗೆ ಹೋಗಿ ಮೊಸರವಲಕ್ಕಿ ತರಲು ಹೇಳಿ ಮಾಯವಾದ ಘಟನೆ 'ದೇವನಿಂತವನೆಂದು ನಂಬಲಾಗದಯ್ಯಾ: ಬಾ ಎಂದು ಹೇಳಿ ಬಯಲಾದ ದೇವನೊಳ್ಳಿದನೆ?....?' ಎಂದು ಪ್ರಾರಂಭವಾಗುವ ವಚನದಲ್ಲಿ ನೋಡಬಹುದು. ಶ್ರೀಶೈಲದ ರುದ್ರಗಮ್ಮರಿಯಲ್ಲಿ ತನ್ನ ಶರೀರವನ್ನು ಈಡಾಡಹೊರಟಾಗ ಬಾಲಕ ಸಿದ್ಧರಾಮನಿಗೆ ದರ್ಶನವಿತ್ತು ಲೋಕಹಿತಕ್ಕಾಗಿ ಅವನನ್ನು ಉಳಿಸಿ ಸೊನ್ನಲಿಗೆಗೆ ಹಿಂತಿರುಗುವಂತೆ ಹೇಳಿ, ಅವನಿಗೆ ಸಾಕಾರನಿಷ್ಠೆಯುಂಟಾಗುವಂತೆ ತಾನೇ ಲಿಂಗಾಕಾರವಾಗಿ ಬಂದು, ಪೂಜೆಯನ್ನು ಅವನಿಂದ ಸ್ವೀಕರಿಸಿದವನು ಶ್ರೀಗಿರಿಯ ಮಲ್ಲಯ್ಯನೇ. ಸಿದ್ಧರಾಮನೇ ತನ್ನ ವಚನವೊಂದರಲ್ಲಿ ಹೀಗೆ ಹೇಳಿರುವನು:

> ನಟ್ಟವಿಯೊಳಗೆ ಇರುಳು-ಹಗಲೆನ್ನದೆ
> 'ಅಪ್ಪಾ! ಅಯ್ಯಾ!' ಎಂದು ನಾನರಸುತ್ತ ಹೋದಡೆ,
> 'ನಾನಿದ್ದೇನೆ, ಬಾ ಮಗನೆ' ಎಂದು ಕರೆದು, ಎನ್ನ ಕಂಬನಿದೊಡೆದು,
> ತನ್ನ ನಿಜವ ತೋರಿದ ಪಾದವಿಂದೆನ್ನಲ್ಲಿಗೆ ನಡೆದುಬಂದಡೆ
> ನಾನರಿಯದೆ ಮರುಳುಗೊಂಡೆಹೆನೆಂದು ಎನ್ನ ಮನದೊಳಗೆಚ್ಚರ ಮಾಡಿದ.
> ಆತನನರಸಿಕೊಂಡು ಬಂದೆನ್ನ ಹೃದಯಲಿಂಬಿಟ್ಟುಕೊಂಬೆ,
> ಎನ್ನ ಕಪಿಲಸಿದ್ಧಮಲ್ಲಿಕಾರ್ಜುನ.

> ಸಕಲಲಿಂಗವ ಹಿಡಿದು ಅಗಲದೆ ನಡೆ
> ಎಂದಿರಾಗಿ ನಡೆವುತ್ತಿದ್ದೆನು.
> ಲಿಂಗಪ್ರತಿಷ್ಠೆಯ ಮಾಡೆಂದು ಎನಗೆ ನಿರೂಪಿಸುತ್ತಿರ್ದ ಕಾರಣ
> ಮಾಡುತ್ತಿರ್ದೆನಲ್ಲದೆ ಎನಗೆ ಬೇರೆ ಸ್ವತಂತ್ರವುಂಟೆ?
> ನೀವು ಕೊಟ್ಟ ನಿರೂಪು ಹುಸಿಯಾದಡೆ ಇನ್ನು ಮುಂದೆ ಸ್ವಯವಪ್ಪಂತೆ ನಡಿಸಾ,
> ಕಪಿಲಸಿದ್ಧಮಲ್ಲಿಕಾರ್ಜುನಾ.

ತಾನು ಕೆರೆ ನಿರ್ಮಿಸಿದ್ದು, ಅಗ್ರಹಾರವನ್ನು ಮಾಡಿದ್ದು, ಶಿವಾಲಯ ನಿರ್ಮಿಸಿದ್ದು, ದೇವರ ಆರೋಗಣೆಗಾಗಿ ಕೊಟ್ಟಣ ಕುಟ್ಟಿಸಿದ್ದು, ಹೋಮ ಮಾಡಿದ್ದು, ಬಾವಿ ಹೂದೋಟ, ಚೌಕ ಛತ್ರಗಳನ್ನು ಹೊಲ ತೋಟಗಳನ್ನು ಮಾಡಿಸಿದ್ದು, ಏಲೇಶನನ್ನು ಬದುಕಿಸಿದ್ದು ಸಹಸ್ರಖಂಡುಗ ಕಪಿಲೆಯಮೃತ ಅರ್ಪಿಸಿದ ಪವಾಡ -ಇವೆಲ್ಲ ವೈಯಕ್ತಿಕ ಸಂಗತಿಗಳು ಸಿದ್ಧರಾಮನ ವಚನಗಳಲ್ಲಿ ಬಂದಿದೆ:

ಅ. ಕೆಱೆಯ ಗಂಗೆಯೆಂದು ಅಱೆಯದೆ ಸ್ಥಾಪಿಸಿದೆನಲಾ!

ಆ. ನಾ ಮಾಡಿದ ಕೆಱೆಯೆತ್ತ, ಕರಿಕಾಲ ಚೋಳ ಮಾಡಿದ ಕೆಱೆಯೆತ್ತ?
ನಾ ಮಾಡಿದ ಬತ್ತವೆತ್ತ, ದೇವಬತ್ತಗಳೆತ್ತ?

ಇ. ಮುನ್ನ ಮಾಡಿದ್ದೇ ಮಾಡಿದೆ ಹೋಮವನಿನ್ನು ಮಾಡಿದಡೆ ತಲೆದಂಡ.

ಈ. ಕೆಱೆಯನಗುಳಿಯಗುಳಿ ಗುಡ್ಡರು ತಮ್ಮೆಲುವ ಸಣ್ಣಿಸಿಕೊಂಡರಲ್ಲದೆ,
ತಮ್ಮ ಮನದ ಮಱವೆಯನಗಿದಗಿದು ಸಣ್ಣಿಸಲಿಲ್ಲ.
ಕಲ್ಲು ಮಣ್ಣು ಹೊತ್ತುಕೊಂಡು ಗೋಣು ನೋಯಿಸಿಕೊಂಡರಲ್ಲದೆ,
ಜ್ಞಾನವ ಹೊತ್ತುಕೊಂಡು ಮನವೊಲಿಯಿಸಿಕೊಳ್ಳಲಿಲ್ಲ ನೋಡಾ
ಹೊಲದೋಟವ ಮಾಡಿ ಬಳಲಿದರಲ್ಲದೆ,
ಕಪಿಲಸಿದ್ಧಮಲ್ಲಿಕಾರ್ಜುನನ ಪೂಜಿಸಿ ಬಳಲಲಿಲ್ಲ ನೋಡಾ, ಕೇದಾರಯ್ಯ.

ಉ. ಕೆರೆಯ ಕಟ್ಟಿಸುವವನೆ ಕರ್ಮಿ ಅಗ್ರವನೆತ್ತಿಸುವವನೆ ಪಾತಕಿ,
ಶಿವಾಲಯವ ಕಟ್ಟಿಸುವವನೆ ದ್ರೋಹಿ.
ಮಾಡದುದ ಮಾಡಲು ದೈವಬಲವೆಂಬುದೀ ಲೋಕ......
ಏಲೇಶಂಗೆ ಪ್ರಾಣ ಕೊಟ್ಟುದಾವ ಬಲ ಹೇಳಾ, ಸೆಱಗೊಡ್ಡಿ ಬೇಡುವೆ.

(ಈ ಪವಾಡ ರಾಘವಾಂಕನ 'ಸಿದ್ಧರಾಮನ ಚಾರಿತ್ರ'ದಲ್ಲೂ ಬಂದಿದೆ. ನೋಡಿ ಸಂಧಿ ೯ ಪದ್ಯ ೨೭-೩೬)

ಊ. ಬಿಲ್ಲೇಶನಿಂದ ಸಹಸ್ರ ಖಂಡುಗ ಕಪಿಲೆಯ ಕಪಿಲೆಯಮೃತದ ಪವಾಡ (ಇದೂ 'ಸಿದ್ಧರಾಮ ಚಾರಿತ್ರ'ದಲ್ಲಿ ಬಂದಿದೆ.)

ಸಿದ್ಧರಾಮನಲ್ಲಿ ಎಷ್ಟು ಶರಣ್ಯಭಾವವಿದೆಯೆಂದರೆ 'ಇವನಾಡಿಸುವ ಯಂತ್ರವಾಹಕ ಕಪಿಲಸಿದ್ಧ ಮಲ್ಲಿಕಾರ್ಜುನನುಗುಳೆಂಡಡೆ ಉಗುಳುವೆನವ್ವಾ'ಎಂದು ಒಂದೆಡೆ ಅವನು ಹೇಳಿಕೊಂಡಿರುವನು. ಪತಿ ಪಶು ಭಾವದಲ್ಲಿ -ಇಷ್ಟದೈವ ಮಲ್ಲಿಕಾರ್ಜುನನನ್ನು 'ಪತಿ'ಯಾಗಿ ತಾನು 'ಪಶು'ವಾಗಿ ಈ ಭಾವದ ನೆಲೆಯಲ್ಲಿ -ಭಕ್ತಿಯ ಅನುಸಂಧಾನ ನಡೆಯುತ್ತದೆ. 'ದೆಸೆಗೆಟ್ಟ ಪಶುವಾನಿದ್ದೆ ಪಶುಪಾಶಮೋಚನನು ನೀನಾದೆ' ಎಂದು ಒಂದೆಡೆ ಸಿದ್ಧರಾಮನೇ ಹೇಳಿಕೊಂಡಿರುವನು. 'ಕವಿಲೆಯ (ಕಪಿಲೆ = ಕಂದು ಬಣ್ಣದ ಹಸು) ಕಂದನಂತೆ ನಾನಿದ್ದೇನೆ' 'ಕವಿಲೆಯ ಕಂದನಂತಾದೆ' 'ಅಯ್ಯಾ ದೆಸೆಗೆಟ್ಟ ಪಶುವಾನು ಪಶುಪಾಶ ಮೋಚನ ಹಸುಳೆಯ ನಿನ್ನ ವಶಕ್ಕೆ ತೆಗೆದೆತ್ತ ಬಾ ಎನ್ನ ಕರುಣೆ' -ಹೀಗೆ ಮೇಲಿಂದ ಮೇಲೆ ಹಸುಳೆಯ (=ಎಳೆಗರುವಿನ) ಚಿತ್ರವನ್ನು ಏನೂ ಅರಿಯದ. ಮುಗ್ಧತೆಗೆ ಸಂಕೇತವಾಗಿ ಕೊಡುವನು. ಹಸುಳೆಯಾಗಿಯು ನಾನು ಕೆರೆ ಬಾವಿ ದೇವಾಲ್ಯ। ವಿರಚಿಸಿ ಭವಕ್ಕೆ ಬಂದು ಫಲವನುಂಡು ನರಕಕೆ ಬೀಳುವನ ಕರುಣಕರದಿಂದೆತ್ತಿ। ನಿನ್ನ

ಹೊರೆಯೊಳಗಿರಿಸಿದೆ ಯೋಗಿನಾಥ॥' ಎಂಬ ಅವನ ಬಸವಸ್ತೋತ್ರದ ತ್ರಿವಿಧಿಯ ಒಂದು ಪದ್ಯವೂ ಅವನ ಸಾಧಕಾವಸ್ಥೆಯ ಮೊದಲ ಘಟ್ಟದಲ್ಲಿ, ಕಲ್ಯಾಣಕ್ಕೆ ಬರುವ ಮುನ್ನ ಸೊನ್ನಲಿಗೆಯಲ್ಲಿ ಸಾಮಾಜಿಕ ಚಟುವಟಿಕೆಯಲ್ಲಿ ತೊಡಗಿದ್ದುದನ್ನು ಹೇಳುತ್ತದೆ. ಈ ಘಟ್ಟದಲ್ಲಿ ಅವನಿಗೆ 'ಸಾಕಾರ'ದ ಅಗತ್ಯವಿದೆ. ಮೊದಲಿಗೆ ಲೋಕಶಕ್ತಿಯ ಬಗೆಗೆ ನಂಬುಗೆ, ವಿಶ್ವಾಸ, ಶ್ರದ್ಧೆ, ನಿಷ್ಠೆ. ನೀ ಒಲಿವ ಮುಖ ತಿಳಿಯದು ನೋಡಯ್ಯ ಆರಿಂಗೆ....' ಎಂದು ಹೇಳಿ ಬೇಡರ ಕಣ್ಣಪ್ಪ, ಚೋಳಿಯಕ್ಕ, ಮಾದಾರ ಚೆನ್ನಯ್ಯ ಇವರ ಬದುಕಿನ ನಿದರ್ಶನಗಳನ್ನು ನೀಡಿ ಭಕ್ತಿಪ್ರಿಯನಾದ ಪರಮಾತ್ಮನು ಅಂತಃಕರಣ ಶುದ್ಧವಾದ ಭಕ್ತಿಗೆ ಒಲಿಯುವನೆನ್ನುವನು. 'ಉದಕದಿಂದ ಅಭಿಷೇಕಂಗೈವಡೆ....' ಎಂದು ಪ್ರಾರಂಭವಾಗುವ ವಚನದಲ್ಲಿ ಅಷ್ಟವಿಧಾರ್ಚನೆಯ ಪೂಜೆಗೆ ಅತೀತನಾಗಿ ನಿಲ್ಲುವ ಪರಮಾತ್ಮನ ವಿಗ್ರಹವನ್ನು ಪೂಜಿಸುವುದು ನನ್ನಿಂದ ಶಕ್ಯವೆ? ಎಂಬ ಸಂದೇಹ ಸಿದ್ಧರಾಮನದು. ಸಿದ್ಧರಾಮನ ಬದುಕಿನ ಮೊದಲ ಘಟ್ಟದಲ್ಲಿ ಸಾಕಾರನಿಷ್ಠೆಯು ಬಲಿಯುತ್ತಾ ಹೋದಂತೆ ಅದರ ಆನುಷಂಗಿಕ ಫಲವಾಗಿ ದೇವಾಲಯ ನಿರ್ಮಾಣ, ಲಿಂಗ ಪ್ರತಿಷ್ಠಾಪನೆ, ಕ್ಷೇತ್ರಪರಿಕಲ್ಪನೆ, ಲಿಂಗಾಭಿಷೇಕ, ಯೋಗಮಜ್ಜನ, ತುಪ್ಪದಭಿಷೇಕ, ನೈವೇದ್ಯ ಸಮರ್ಪಣೆ, ದಾನ ವಿನಿಯೋಗ, ಉತ್ಸವ, ಹೋಮಗಳು ನಿತ್ಯವೂ ಸಾಂಗವಾಗಿ ನಡೆಯತೊಡಗಿದವು. ಸಿದ್ಧರಾಮನಿಗೆ ಇವುಗಳಲ್ಲಿ ಎಲ್ಲಿಲ್ಲದ ಉತ್ಸಾಹ, ಸಂಭ್ರಮ. 'ನಿಮ್ಮ ಪೂಜಿಸಿದವರಿಗೆ ಸಂಪದಾದಿ ಮಹದೈಶ್ವರ್ಯ ತಪ್ಪದು ನೋಡಾ' ಎಂಬ ಅವನ ನಂಬುಗೆಯೇ ಅವನನ್ನು ಕೈಹಿಡಿದು ನಡೆಸಿದೆ. ಲಿಂಗಪೂಜೆಗೆ ಬೇಕಾದ ಬಗೆಬಗೆಯ ಪರಿಮಳಭರಿತ ಪುಷ್ಪಗಳಿಗಾಗಿ ಹೂದೋಟಗಳ ನಿರ್ಮಾಣ ಮಾಡಿದನು. ಸಿದ್ಧರಾಮ ತನ್ನ ವಚನವೊಂದರಲ್ಲಿ ಹೀಗೆ ಹೇಳಿರುವನು:

> ಮಾಡುವೆನಯ್ಯಾ ಪೂಜೆಗೆಂದು ದ್ರವ್ಯನಾಶವನು
> ನೋಡುವೆನಯ್ಯಾ ಲಿಂಗಸಂಭ್ರಮಕೆಂದು ಪೂದೋಟಗಳ
> ಹಾಡುವೆನಯ್ಯಾ ನಾಟ್ಯ ರಚನೆಗೆಂದು ಗಾನವ....

'ಶಿವಯೋಗಿಯ ಶರೀರಂ ವೃಥಾ ಸವೆಯಲಾಗದು' ಇದು ಸಿದ್ಧರಾಮನ ಬದುಕಿನ ಆದರ್ಶ. ಷಟ್‌ಸ್ಥಲದ ಶರಣ ಸ್ಥಲದಲ್ಲಿ ನಿಂತವನಿಗೆ 'ಸಾಕಾರ'ದ ಅಗತ್ಯವಿರುವುದಿಲ್ಲ. ಆದರೆ ಲೋಕದ ಸಾಮಾನ್ಯ ಜನರಿಗೆ 'ಸಾಕಾರ'ದ ಅಗತ್ಯವಿದೆ. ಲೋಕದ ಜನ ಬದುಕಬೇಕು, ಅವರು ಸತ್ಪಥದಲ್ಲಿ ನಡೆದು ಲಿಂಗವ ಪೂಜಿಸಿ ಮಹಾಪದವಿಯನ್ನು ಪಡೆಯಬೇಕು. ಶರಣಸ್ಥಲದಲ್ಲಿ ನಿಂತ ಸಿದ್ಧರಾಮನಿಗೆ 'ಭೂತಾನುಕಂಪೆ' ಅವನ ಬದುಕಿನ ಅವಿಭಾಜ್ಯ ಭಾಗವಾಯಿತು. 'ಕೆರೆ ತೊರೆ ದೇಗುಲಂಗಳ ಕಡೆಯಿಂದ ನಿಮ್ಮ ಕಂಡೆ' ಎನ್ನುವ ಸಿದ್ಧರಾಮನ ಮಾತಿನಲ್ಲಿ ಯಥಾರ್ಥವಿದೆ. ಕೆರೆ, ತೊರೆ, ದೇಗುಲಗಳ

ನಿರ್ಮಾಣದ ಹಿಂದೆ ಲೋಕಕಲ್ಯಾಣದ ಸಂಕಲ್ಪವಿದೆ. ತ್ರಿಪುರಾಂತಕ ಕೆರೆಯ ನಿರ್ಮಾಣದ ಮೂಲಕ ಸಕಲ ಜೀವಾವಳಿಯ ಬಾಯಾರಿಕೆ ನೀಗಬಹುದು, ತೊರೆಯ ನಿರ್ಮಾಣದ ಮೂಲಕ ಲೋಕದ ಜನರ ಹಸಿವೆ ನೀಗಬಹುದು, ದೇವಾಲಯ ನಿರ್ಮಾಣದ ಮೂಲಕ ಜನರ ಮನಸ್ಸಿನಲ್ಲಿ ಭಕ್ತಿಯ ಬೀಜ ಬಿತ್ತ ಬಹುದು. ನಿರ್ಗತಿಕರಿಗೆ ಧನದ ನೆರವು ನೀಡಿ, ಬಡವರ ಹೆಣ್ಣುಮಕ್ಕಳ ವಿವಾಹಕ್ಕೆ ಧನದ ನೆರವು ನೀಡಿ, ಸಾಲಗಾರರ ಋಣಪರಿಹಾರಕ್ಕಾಗಿ ಧನದ ನೆರವು ನೀಡಿ ಹೀಗೆ ಸಿದ್ಧರಾಮ ಲೋಕಕಲ್ಯಾಣ ಕಾರ್ಯವನ್ನು ನಿರಂತರವಾಗಿ ಮಾಡಿದನು. ಲೋಕದ ಜನರ ಸಂಕಷ್ಟಗಳನ್ನೆಲ್ಲಾ ಪರಿಹರಿಸಿಬಿಡುತ್ತೇನೆ ಎಂಬ ಉತ್ಸಾಹದಿಂದ ಹೊರಟ ಸಿದ್ಧರಾಮ ಜನರಿಗೆ ಎಲ್ಲಿಯವರೆವಿಗೆ ಅನಿವಾರ್ಯವಾಗಿ ಬಿಟ್ಟನೆಂದರೆ, ಎಲ್ಲಿಯಾದರೂ ಜನ ಹಾವುಕಡಿದು ಸತ್ತರೆ, ಬೆಂಕಿಯಲ್ಲಿ ಸಿಕ್ಕಿ ಪ್ರಾಣಬಿಟ್ಟರೆ, ಕಾಯಿಲೆಯಿಂದ ಜೀವ ಹೋದರೆ, ಅವರನ್ನೆಲ್ಲ ಹೊತ್ತುಕೊಂಡು ಬಂದು ಸಿದ್ಧರಾಮನ ಮಹಾಮನೆಯ ಬಾಗಿಲಲ್ಲಿ ಬಿಟ್ಟು ಹೋಗಿಬಿಡುತ್ತಿದ್ದರು. ಹೀಗೆ ಸತ್ತವರಿಗೆಲ್ಲಾ ಸಿದ್ಧರಾಮನೇ ಸದ್ಗತಿ ಕಾಣಿಸುತ್ತಿದ್ದನಂತೆ (ಸಿದ್ಧರಾಮ ಚಾರಿತ್ರ). ಸಿದ್ಧರಾಮನು ಲೋಕಸಂಸಾರದ ಬಂಧನಕ್ಕೆ ಸಿಕ್ಕಿ ಅದರಿಂದ ಬಿಡುಗಡೆಗೊಳ್ಳುವುದು ಹೇಗೆ ಎಂಬುದು ತಿಳಿಯದೆ ಒದ್ದಾಡುತ್ತಿರುವಾಗ ಅವನನ್ನು ಎಚ್ಚರಿಸಲು ಅವನ ನೆರವಿಗೆ ಬಂದ ಪ್ರಭುವು ಅವನ ಕಣ್ತೆರೆಯಿಸಿದನು. ಪ್ರಭು ಅವನಿಗೆ ಇಷ್ಟಲಿಂಗಪೂಜೆಯ ಮಹತಿಯನ್ನು ಮನಗಾಣಿಸುವನು. ತನ್ನ ಮಾನಸಿಕ ಪರಿವರ್ತನೆಗೆ ಪ್ರಭು ಕಾರಣನಾದನೆಂಬ ಧನ್ಯತಾಭಾವ ಸಿದ್ಧರಾಮನ 'ಕೆರೆ ತೊರೆ ದೇಗುಲಗಳ ಕಡೆಯಿಂದ ನಿಮ್ಮ ಕಂಡೆ...? ಎಂದು ಪ್ರಾರಂಭವಾಗುವ ವಚನದಲ್ಲಿ ವ್ಯಕ್ತವಾಗಿದೆ. ಸಿದ್ಧರಾಮನಿಗೆ 'ಸಾಕಾರನಿಷ್ಠೆ' ಹಾಗೂ 'ಭೂತಂಗಳೊಳಗನುಕಂಪೆ' ಪರಮಾತ್ಮನ ಸಾಕ್ಷಾತ್ಕಾರಕ್ಕೆ ಸಾಧನಗಳು. ಅವು ಸಮಸ್ತ ಸನ್ಮಂಗಳ ಸ್ವರೂಪಿಯಾದ ಪರಬ್ರಹ್ಮವೇ!

ಸಿದ್ಧರಾಮನ ಬದುಕಿನ ಎರಡನೆಯ ಘಟ್ಟ ಪ್ರಾರಂಭವಾಗುವುದು ಪ್ರಭು ಸಿದ್ಧರಾಮನನ್ನು ಕಲ್ಯಾಣಕ್ಕೆ ಕರೆದುಕೊಂಡು ಬಂದಾಗಲೆ. ಅವನನ್ನು ಅಲ್ಲಿಗೆ ಕರೆದುಕೊಂಡು ಬರುವ ಉದ್ದೇಶ ಅವನು ಸೊನ್ನಲಿಗೆಯಲ್ಲಿ ಇದುವರೆವಿಗೆ ಮಾಡಿದ ಲೋಕಕಲ್ಯಾಣ ಕಾರ್ಯಕ್ಕೆ ಬಸವಾದಿ ಪ್ರಮಥರ ಮಾನ್ಯತೆ (recognition) ಯೋಗಿಗಳ ಯೋಗಿ ಶಿವಯೋಗಿ ಸಿದ್ಧರಾಮನಿಗೆ ಸಿಗಲಿ, ಆ ಮೂಲಕ ಅವನ ವ್ಯಕ್ತಿತ್ವಕ್ಕೆ ಇನ್ನಷ್ಟು ಗೌರವ ಬೆಲೆ ಪ್ರಾಪ್ತವಾಗಲಿ ಎಂಬುದು ಪ್ರಭುವಿನ ವಿಚಾರ. ಸ್ಥಾವರ ಲಿಂಗಾರಾಧನೆಯ ಸುತ್ತ ಸಿದ್ಧರಾಮನ ಬದುಕು ಹೆಣೆದುಕೊಂಡು ಲೋಕೋದ್ಧಾರದ ಕನಸಿನಲ್ಲಿ ದಿನಗಳು ಕಳೆದುಹೋಗುತ್ತಿದ್ದಾಗ ಇವುಗಳಾಚೆಗೆ ಈ ಎಲ್ಲ ಬಂಧನಗಳನ್ನು ಕಳಚಿಕೊಳ್ಳುವ ದಾರಿ

ತೋರಬೇಕಾಗಿದ್ದಿತು. ಆ ಬೆಳಕು ಕಾಣುವುದು ಕಲ್ಯಾಣದ ಹಾದಿಯಲ್ಲಿ ಮಾತ್ರ ಎಂಬುದು ಪ್ರಭುವಿನ ಹೊಳಹಿಗೆ ಕಂಡು ಬಂದಿದೆ. ಸಿದ್ಧರಾಮನ ಮನಸ್ಸೂ ಲೌಕಿಕ ಪ್ರಪಂಚದಿಂದ ಅಲೌಕಿಕ ಪ್ರಪಂಚದ ಕಡೆಗೆ ಹೊರಳಿದೆ. ಅವನ ಈ ವಚನಗಳು ಅವನ ಮನದ ಹಂಬಲವನ್ನು ಬಿಂಬಿಸುತ್ತಿವೆ:

೧. ಹಿಂದೆ ಬಯಸಿದೆ ಕಾಳುತನದಲ್ಲಿ,
ಎನ್ನ ಮಂದಮತಿಯ ನೋಡವಿರಯ್ಯ!
ಕೆರೆ ಬಾವಿ ಹೂದೋಟ ಚೌಕ ಛತ್ರಂಗಳ ಮಾಡಿ
ಜೀವಂಗಳ ಮೇಲೆ ಕೃಪೆಯುಂಟೆಂದು ಎನ್ನ ದಾನಿಯೆಂಬರು.
ಆನು ದಾನಿಯಲ್ಲವಯ್ಯಾ, ನೀ ಹೇಳಿದಂತೆ ನಾ ಮಾಡಿದೆನು;
ನೀ ಬರಹೇಳಿದಲ್ಲಿ ಬಂದೆನು, ನೀ ಇರಿಸಿದಂತೆ ಇದ್ದೆನು.
ನಿನ್ನ ಇಚ್ಛಾಮಾತ್ರವ ಮೀರಿದೆನಾಯಿತ್ತಾದಡೆ
ಫಲಪದ ಜನನವ ಬಯಸಿದೆನಾದಡೆ ನಿಮ್ಮಾಣೆ!
ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ,
ಭವಕ್ಕೆ ಬರಿಸದಿರಯ್ಯಾ ನಿಮ್ಮ ಧರ್ಮ!

೨. ಮಾಡಿಸಯ್ಯಾ, ಎನಗೆ ನಿಮ್ಮವರ ಸಂಗವ
ಮಾಡಿಸಯ್ಯಾ, ಎನಗೆ ನಿಮ್ಮವರಾನಂದವ.
ಆಗಿಸಯ್ಯಾ, ನಿಮ್ಮವರಂತೆ.
ನೋಡಿಸಯ್ಯಾ, ನಿಮ್ಮವರ ಕೂಡೆ ಸಂಗವ ಮಾಡಿಸಯ್ಯ.
ಎನಗೆ ಪಾದೋದಕ ಪ್ರಸಾದವನೊಚ್ಚತವ ಸಲಿಸಯ್ಯಾ.
ನಿಮ್ಮವರ ಕೂಡೆ ಸಿಕ್ಕಿ ಇರಿಸಯ್ಯಾ.
ನಿಮ್ಮವರ ಪಾದದ ಕೆಳಗೆ ನಿತ್ಯವಾಗಿ ಬರಿಸಯ್ಯಾ ಎನ್ನ ಭವಭವದಲ್ಲಿ
ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ
ನೀನಿಂತು ಕೆಡಿಸಯ್ಯಾ, ಎನ್ನ ಭವಭವದ ಹುಟ್ಟ.

ಕಲ್ಯಾಣಕ್ಕೆ ಬಂದದ್ದರಿಂದ ಬಸವಣ್ಣ, ಚನ್ನಬಸವಣ್ಣ ಮೊದಲಾದ ಮಹಾನ್‌ಶರಣರ ಜೀವನಸಿದ್ಧಾಂತಗಳನ್ನು ಗ್ರಹಿಸಲು ಸಾಧ್ಯವಾಯಿತು. ಎಲ್ಲಕ್ಕೂ ಮಿಗಿಲಾಗಿ ಚನ್ನಬಸವಣ್ಣನ ಕೃಪೆಯಿಂದ ದೀಕ್ಷೆಯಾಗಿ 'ತನ್ನೊಳಗೆ ಲಿಂಗವ ಕಂಡು, ಲಿಂಗದೊಳಗೆ ತನ್ನ ಕಂಡು ತನ್ನೊಳಗೆ ಸಮಸ್ತ ವಿಸ್ತಾರವನೆಲ್ಲವ ಕಂಡು, ಜಂಗಮಮುಖ ಲಿಂಗವೆಂಬ ಭೇದವನು, ಅಂಗದೊಳಗೆ ಲಿಂಗವೆ ಆಚಾರವಾಗಿ ಅಳವಟ್ಟ ವಿವರವನು, ಲಿಂಗಾಂಗ ಸ್ಥಲಸಂಬಂಧ ಸ್ಥಳಕುಳಂಗಳ ವಿವರವಾಗಿ ಇದ್ದಿತೆಂಬುದನು, ಕಂಗಳ ನೋಟಕ್ಕೆ ಗುರಿಯಾದ ಲಿಂಗವೆ ಅಂಗವನೊಳಕೊಂಬ ಭೇದವನು' ತಿಳಿಯಲು ಸಾಧ್ಯವಾಯಿತು. ಸಿದ್ಧರಾಮ ತನ್ನ ಸಾಧಕಾವಸ್ಥೆಯಲ್ಲಿ ನೂರಾರು ಗುರುಗಳನ್ನು ಕಂಡಿರುವನು. ಅವರಲ್ಲೂ ಹಲವು ಬಗೆ. ಅವರ ಮಾರ್ಗದರ್ಶನದಿಂದ ಲಭ್ಯವಾಗುವ ಫಲಪದಗಳೂ ಭಿನ್ನರೂಪದವು. ತನ್ನ

ಗುರು ಚನ್ನಬಸವಣ್ಣ ಇವರೆಲ್ಲರಿಂದಲೂ ಸಂಪೂರ್ಣವಾಗಿ ಭಿನ್ನನು. ಅವನು ನನ್ನ ಸಂಶಯಗಳನ್ನೆಲ್ಲಾ ತನ್ನ ಜ್ಞಾನಾಗ್ನಿಯಿಂದ ದಹಿಸಿ ಮುಕ್ತಿಯ ಹಂಗೆಂಬುದನ್ನು ಅರುಹಿನ ಬಂಧನದಲ್ಲಿರಿಸಿದ ಅತ್ಯಪೂರ್ವ ಗುರುವೆಂಬುದನ್ನು ಆರ್ದ್ರಮನದಿಂದ ಹೇಳಿಕೊಂಡಿರುವನು:

ಲೋಕದಲ್ಲಿ ನೂರಾರು ಗುರುಗಳ ನೋಡಿ ನೋಡಿ
ನಾನು ಬೇಸರಗೊಂಡೆನಯ್ಯಾ.
ವಿತ್ತಾಪಹಾರಿ ಗುರುಗಳು ನೂರಾರು;
ಶಾಸ್ತ್ರಾರ್ಥ ಹೇಳುವ ಗುರುಗಳು ನೂರಾರು;
ಮಂತ್ರ ತಂತ್ರದಿಂದುಭಯ ಲೋಕದಲ್ಲಿ
ಸುಖದುಃಖವೀವ ಗುರುಗಳು ನೂರಾರು;
ಸತ್ಕರ್ಮೋಪದೇಶವನರುಹಿ
ಸ್ವರ್ಗಮರ್ತ್ಯದಲ್ಲಿ ಸುಖವೀವ ಗುರುಗಳು ನೂರಾರು;
ವಿಚಾರಮುಖದಿಂದ ಷಟ್ಸಾಧನೆಯನರುಹುವ ಗುರುಗಳು ನೂರಾರು;
ವಿಷಯಂಗಳೆಲ್ಲ ಮಿಥ್ಯಂಗಳೆಂದರುಹಿ
ಆತ್ಮಾನುರಾಗತ್ವವನೀವ ಗುರುಗಳು ನೂರಾರು.
ಶಿವಜೀವರ ಏಕತ್ವವನರುಹಿ
ನಿರ್ಮಲಜ್ಞಾನವೀವ ಗುರುಗಳು ಪ್ರಮಥರು.
ಸಂಶಯಾಳಿಗಳನೆಲ್ಲ ಜ್ಞಾನಾಗ್ನಿಯಿಂದ ದಹಿಸಿ
ಮುಕ್ತಿಯ ಹಂಗೆಂಬುದ ಅರುಹಿನ ಬಂಧನದಲ್ಲಿರಿಸಿದ ಗುರು
ಚನ್ನಬಸವಣ್ಣನಲ್ಲದೆ ಮತ್ತೋರ್ವನ ಕಾಣೆ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ.

ತನ್ನ ಗುರುವಿನ ಬಗೆಗಿನ ತನ್ನ ಅಂತರಾಳದ ಗೌರವವನ್ನು ಮೇಲಿನ ವಚನದಲ್ಲಿ ಹೇಳಿರುವಂತೆ ಸಿದ್ಧರಾಮ ತನ್ನ ಇನ್ನೊಂದು ವಚನದಲ್ಲೂ ಮನೋಜ್ಞವಾಗಿ ಹೇಳಿರುವನು:

ಮಣಿಗಳಿಗೆ ಎಜ್ಜ ಹಿಡಿಯುವರಲ್ಲದೆ
ಮನಕ್ಕೆ ಎಜ್ಜ ಹಿಡಿಯುವವರಾರೂ ಇಲ್ಲ.
ವ್ಯಾಧಿಗೆ ಔಷಧವ ಕೊಡುವರಲ್ಲದೆ
ಮರಣಕ್ಕೆ ಔಷಧವ ಕೊಡುವವರಾರೂ ಇಲ್ಲ.
ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನ ಗರ್ಭದೊಳು
ಪ್ರಮಥಚಿಂತಾಮಣಿ ಚನ್ನಬಸವಣ್ಣನಲ್ಲದೆ ಮತ್ತಾರೂ ಇಲ್ಲ.

ಅಂಗಕ್ಕೆ ಲಿಂಗೋಪದೇಶ, ಮನಕ್ಕೆ ಮಂತ್ರೋಪದೇಶವಾದ ಮೇಲೆ ಸಿದ್ಧರಾಮನ ವಿಚಾರಸರಣಿಯಲ್ಲಿ ಮಹತ್ತರ ಬದಲಾವಣೆಯಾಯಿತು. ಇದುವರೆವಿಗೆ ತಾನು ಮಾಡಿಕೊಂಡು ಬಂದ ಸ್ಥಾವರ ಲಿಂಗಾರಾಧನೆ ಹಾಗೂ ಅದಕ್ಕೆ ಸಂಬಂಧಿಸಿದಂತೆ ನಡೆಸಿದ ಕಾರ್ಯಗಳೆಲ್ಲವೂ ವ್ಯರ್ಥವೆಂಬ ಅರಿವಿನೊಂದಿಗೆ ಒಂದು ಗಟ್ಟಿಯಾದ ತೀರ್ಮಾನ ಮೈದಾಳಿತು. 'ಎಲೆ ಕಪಿಲಸಿದ್ಧಮಲ್ಲಿನಾಥಯ್ಯಾ ನಾ ಧರಿಸಿಕೊಂಬುವೆ

ಲಿಂಗವ ನೀ ಕರಸಿಕೊಂಬುವನಾಗು ಮತ್ತೊರ್ವನ ನಿನ್ನ ಪೂಜೆಗೆ; ನಾ ನಿನ್ನವನಲ್ಲೆಲೆ ದೇವಾ' ಎಂದು ತನ್ನ ಇಷ್ಟದೈವವಾದ ಸ್ಥಾವರರೂಪಿ ಕಪಿಲಸಿದ್ಧ ಮಲ್ಲಿನಾಥನಿಗೆ ಹೇಳಿಬಿಡುವನು. ಸಿದ್ಧರಾಮನ ಹಿಂದಿನ ಅಧ್ಯಾತ್ಮಿಕ ಪರಿಕಲ್ಪನೆಗೂ ಈಗಿನ ಪರಿಕಲ್ಪನೆಗೂ ಸ್ಪಷ್ಟ ವ್ಯತ್ಯಾಸ ಕಾಣಿಸತೊಡಗಿತು. ಆ ಬದಲಾವಣೆಯನ್ನು (transformation) ಅವನು ತನ್ನ ಒಂದು ವಚನದಲ್ಲಿ ಹೀಗೆ ಹೇಳಿಕೊಂಡಿರುವನು:

> ಅಧ್ಯಾತ್ಮ ಅಧ್ಯಾತ್ಮವೆಂದೆಂಬಿರಿ, ಅಧ್ಯಾತ್ಮವಾರಿಗೆ?
> ಶ್ರೀಗುರು ಬಹಳವಪ್ಪ ಶಿವಲಿಂಗವ ಸೂಕ್ಷ್ಮವ ಮಾಡಿ,
> ಕರಸ್ಥಲದಲ್ಲಿ ಕೊಟ್ಟ ಬಳಿಕ ಬೇರೆ ಯೋಗವುಂಟೆ?
> ತನ್ನ ಹಸ್ತವ ಮಸ್ತಕದಲ್ಲಿಟ್ಟು ವಾಯುಪ್ರಾಣಿಯಾಗಿರ್ದುದ ಕೊಂದು
> ಲಿಂಗಪ್ರಾಣಿಯ ಮಾಡಿದ ಬಳಿಕ,
> ಅಕ್ಷರವೈದರಲ್ಲಿ ಮುಕ್ತನ ಮಾಡಿದ ಬಳಿಕ,
> ಮರಳಿ ಯೋಗವುಂಟೆ ಶಿವಯೋಗವಲ್ಲದೆ?
> ಲಿಂಗಾರ್ಚನೆಯ ಮಾಡಿ ಜಂಗಮ ಪ್ರಸಾದವ ಕೊಂಡ ಬಳಿಕ,
> ಬರಿಯ ಯೋಗಕ್ಕೆ ಒಡಂಬಡುವುದೆ ಅರಿವು?
> ಇಂತಪ್ಪವನತಿಗಳೆದು ಶುದ್ಧ ಶಿವಯೋಗಿಯ ಮಾಡಿದಾತ ಚನ್ನಬಸವಣ್ಣ.
>
> ಮಹಾಲೋಕದಲ್ಲಿಪ್ಪ ಅಕ್ಷರದ್ವಯವ ಭೇದಿಸಿ ತಂದು
> ಕರಸ್ಥಲದಲ್ಲಿರಿಸಿ ಇದು ಉರುತರಪದವೆಂದು ತೋರಿಕೊಟ್ಟು,
> ಎನ್ನ ತನ್ನಂತೆ ಮಾಡಿದ ಗುರು ಚನ್ನಬಸವಣ್ಣ.
> ಆನು ಚನ್ನಬಸವಣ್ಣನ ಕರುಣದಿಂದ ಅಭ್ಯಾಸಯೋಗವನತಿಗಳೆದು
> ಶಿವಯೋಗದಲ್ಲಿ ನಿತ್ಯನಾಗಿ,
> ಭಕ್ತ ಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ ಎಂಬ
> ಷಡುಸ್ಥಲಕ್ಕೆ ಅಧಿಕಾರಿಯಾದೆನು.
> ನಿನ್ನವರ ಸಲುಗೆಗೆ ಸಂದೆನು.
> ಚನ್ನಬಸವಣ್ಣನ ಕೃಪೆ ಎನ್ನನಿಂತು ಮಾಡಿತ್ತು ಕಾಣಾ,
> ಶ್ರೀಗುರುವೆ ಕಪಿಲಸಿದ್ಧಮಲ್ಲಿಕಾರ್ಜುನಾ.

ಸಾಮಾಜಿಕ ಹೊಣೆಗಾರಿಕೆಯಲ್ಲಿ ವೈಚಾರಿಕತೆಯ ಪಾತ್ರ ಅಷ್ಟೇ ಮುಖ್ಯವಾದುದು. ಸಾಮಾಜಿಕ ಸ್ಥಿತ್ಯಂತರಕ್ಕೆ ತಹತಹಿಸುವ ವೈಚಾರಿಕ ಮನೋಭಾವದ ವ್ಯಕ್ತಿ ಕ್ರಿಯಾಶೀಲನಾಗುವುದು ಮುಖ್ಯವಾಗಿದೆ. ಮನ ವಚನ ಕಾಯ ಶುದ್ಧನಾದ ವ್ಯಕ್ತಿ ಜನತೆಯ ನಡುವೆ ನಿಂತು ಸಾಮಾಜಿಕ ಪರಿವರ್ತನೆಗೆ ತೊಡಗಿದಾಗ ಜನ ಸಹಜವಾಗಿ ಅದಕ್ಕೆ ಸ್ಪಂದಿಸುವರು. ಇದು ಎಲ್ಲ ಕಾಲದ ಚಳವಳಿಗಳಲ್ಲಿ ಕಂಡುಬರುವ ವಾಸ್ತವ ಸತ್ಯ. ಸಾಮಾಜಿಕ ನೆಲೆಯಲ್ಲಿ ಯಾವುದೇ ಬದಲಾವಣೆ ಕ್ಷಣಮಾತ್ರದಲ್ಲಿ ಆಗುವಂತಹುದಲ್ಲ. ಪರಂಪರೆಯಿಂದ ಜಡ್ಡುಗಟ್ಟಿದ ಜನರ ಮನಸ್ಸನ್ನು ತಿದ್ದಬೇಕು. ಮಾನಸಿಕ ಪರಿವರ್ತನೆ ನಡೆಸಬೇಕು. ಇದಕ್ಕೆ ತಾಳ್ಮೆ ಬೇಕು, ಜನರ ಮನಸ್ಸನ್ನು ಅರ್ಥಮಾಡಿಕೊಂಡು

ಹಿತವಾದ ರೀತಿಯಲ್ಲಿ ಬೋಧಿಸಿ ತಿದ್ದಬೇಕು, ಜನರ ಮನಸ್ಸನ್ನು ಗೆಲ್ಲುವ ಜಾಣ್ಮೆ, ಪ್ರಭಾವಶಾಲಿ ಮಾತುಗಾರಿಕೆ ಬೇಕು.

ಸಿದ್ಧರಾಮ ಇಷ್ಟಲಿಂಗವನ್ನು ಪಡೆಯುವ ಮೂಲಕ ದೊಡ್ಡವನಾಗಲಿಲ್ಲ, ಅವನನ್ನು ದೊಡ್ಡವನನ್ನಾಗಿ ಮಾಡಿದ್ದು ಶರಣರ ವಿಚಾರಧಾರೆ. ಕಲ್ಯಾಣದಲ್ಲಿನ ಶರಣರ ಸಂಪರ್ಕಕ್ಕೆ ಬಂದಮೇಲೆ ಅವನ ವಿಚಾರಸರಣಿಯಲ್ಲೇ ದೊಡ್ಡ ಮಾರ್ಪಾಡು ಕಂಡುಬಂದಿತು. ಮೊದಲಿಗೆ ಸ್ವರ್ಗ-ನರಕ, ಪುಣ್ಯ-ಪಾಪಗಳ ಬಗೆಗಿನ ಪಾರಂಪರಿಕ ನಂಬುಗೆಯನ್ನು ಕಣ್ಣುಮುಚ್ಚಿ ಸ್ವೀಕರಿಸಿದ್ದ ಅವನ ಚಿಂತನಕ್ರಮದಲ್ಲಿ ಈಗ ಬದಲಾವಣೆಯಾಗಿದೆ. ಕಲ್ಯಾಣಕ್ಕೆ ಬರುವ ಮುನ್ನ 'ಸಾಕಾರ ನಿಷ್ಠೆ ಭೂತಂಗಳೊಳನುಕಂಪೆ'ಯ ತನ್ನ ಜೀವನ ಸಿದ್ಧಾಂತದಲ್ಲಿ ಸಂಪೂರ್ಣವಾಗಿ ತೊಡಗಿಕೊಂಡಿದ್ದ ಅವನಿಗೆ ಸ್ವತಂತ್ರವಾಗಿ ಆಲೋಚಿಸಲೂ ವ್ಯವಧಾನವಿರಲಿಲ್ಲ. ಅವನನ್ನು ವಿಚಾರಮಾಡಲು ಪ್ರಚೋದಿಸಿದವರು ಕಲ್ಯಾಣದ ಶರಣರು. ಬಹುಶಃ ಈ ಘಟ್ಟದಲ್ಲಿಯೇ ಅವನು ವಚನ ರಚನೆಗೆ ಪ್ರೇರಣೆಯೊದಗಿರಬಹುದು. ನಮ್ಮ ಬದುಕಿನ ಸಾರ್ಥಕ್ಯ ಸ್ವರ್ಗವನ್ನು ಪಡೆಯುವುದೆಂಬುದು ಪಾರಂಪರಿಕ ನಂಬುಗೆ. ಪಾಪದ ಭೀತಿಗಾಗಿ ನರಕದ ಕಲ್ಪನೆ ಬೆಳೆದುಬಂದಂತಿದೆ. ಕಣ್ಣಿಗೆ ಕಾಣದ ಸ್ವರ್ಗ-ನರಕಗಳು, ಸುಖ-ಅಸುಖಗಳಿಗೆ ಸಂಕೇತವಾಗಿವೆ. ತಪಸ್ಸನ್ನು ಮಾಡಿ ಸ್ವರ್ಗವನ್ನು ಪಡೆಯುವೆನೆನ್ನುವರ ಮುಖವನ್ನು ನೋಡಲಾಗದು ಎನ್ನುವ ನಿಲುವಿಗೆ ಸಿದ್ಧರಾಮ ಬರುವನು. ಅಷ್ಟೇ ಅಲ್ಲ, ಸ್ವರ್ಗವೆಂದರೆ ಸುಖಕ್ಕೆ ನಾಮ, ನರಕವೆಂದರೆ ಬಾಧೆಗೆ ನಾಮ ಎಂದು ಹೇಳಿ ಪರಂಪರೆಯ ನಂಬುಗೆಯನ್ನು ಸರಳವಾಗಿ ನಿರಾಕರಿಸುವನು. ಶಿವಭಕ್ತರ ಪರಮ ಗುರಿ ಕೈಲಾಸವನ್ನು ಸೇರುವುದು ಎಂಬ ಪರಂಪರೆಯ ನಂಬುಗೆಯನ್ನು ಅಲ್ಲಗಳೆದ 'ಅವನು ಕೈಲಾಸವೆಂಬುದೊಂದು ಭೂಮಿಯೊಳಿರುವ ಹಾಳುಬೆಟ್ಟ, ಅಲ್ಲಿರುವ ಮುನಿಗಳೆಲ್ಲರು ಜೀವಗಳ್ಳರು. ಅಲ್ಲಿರುವ ಚಂದ್ರಶೇಖರನು ಬಹು ಎಡ್ಡ....?' ಎಂದು ಟೀಕಿಸುವಷ್ಟರ ಮಟ್ಟಿಗೆ ಮಾನಸಿಕವಾಗಿ ಬದಲಾದ. ಸ್ವರ್ಗ-ನರಕ ಕೈಲಾಸಗಳ ಪಾರಂಪರಿಕ ಕಲ್ಪನೆಯನ್ನು ಬದಲಿಸಿ ವಾಸ್ತವ ಜಗತ್ತಿನೆಡೆಗೆ ನಮ್ಮ ಆಲೋಚನೆಯನ್ನು ಹೊರಳಿಸುರ ನಿಟ್ಟಿನಲ್ಲಿ ಮಹತ್ತರ ಪರಿವರ್ತನೆ ಅವನಲ್ಲಾಯಿತು. ಪುಣ್ಯ-ಪಾಪಗಳು ಪೂರ್ವಾರ್ಜಿತವೆನ್ನುವ ನಂಬುಗೆಯನ್ನು ಸಿದ್ಧರಾಮ ಅಲ್ಲಗಳೆಯುವನು. 'ಮೊದಲಿಲ್ಲಿಯ ಪುಣ್ಯ ಪಾಪವದು ಇದರಲ್ಲಿಯ ಜೀವಕ್ಕೆ ಸುಖದುಃಖ ನೋಡಾ ಎಂದೆನಲಾರೆ.... ಸಂಗದಿಂ ಸುಖ ದುಃಖವಲ್ಲದೆ ಪೂರ್ವಾರ್ಜಿತ ಪುಣ್ಯ ಪಾಪವೆಂಬುವ ತಿಳಿಯಬಾರದು? ಮನಸ್ಸಿನ ಕಾರ್ಯವೆ ಪುಣ್ಯ-ಪಾಪ ನೋಡಯ್ಯ' ಎಂಬ ಅವನ ಹೇಳಿಕೆಯಲ್ಲಿ ನಾವು ಮಾಡುವ ಸತ್ಕಾರ್ಯವು ಪುಣ್ಯಕ್ಕೆ ಕಾರಣವಾಗಿಯೂ,

ದುಷ್ಕಾರ್ಯವು ತಾಪಕ್ಕೆ ಕಾರಣವಾಗಿಯೂ ಬರುವುದೆಂಬುದನ್ನು ಹೇಳಲಾಗಿದೆ. ಸುಖ ಬಂದರೆ ದೈವಕೃಪೆಯೆಂದೂ ದುಃಖ ಬಂದರೆ ದೈವದ ಅವಕೃಪೆಯೆಂದೂ ನಂಬಿರುವ ಜನರ ಶ್ರದ್ಧೆಯನ್ನು ಪ್ರಶ್ನಿಸುವ ಅವನು 'ಸುಖವು ಮಾಡುವ ಕ್ರಿಯೆಯಲ್ಲರಿಯ ಬಂದಿತ್ತು. ಸುಖವು ದೈವವಲ್ಲ.....' ಎಂದು ಮನವರಿಕೆ ಮಾಡಿಕೊಡುವನು. ಗಂಗೆಯಲ್ಲಿ ಮುಳುಗಿದವರಿಗೆ ಪಾಪ ನಿವಾರಣೆಯಾಗುತ್ತದೆಂಬ ನಂಬುಗೆಯನ್ನು ಪ್ರಶ್ನಿಸುವ ಅವನು 'ಗಂಗೆಯ ಮುಳುಗಿ ಬಂದವರೆಲ್ಲಾ ಪಾಪವ ಮಾಡಿ ಸತ್ತಡೆ, ಅವರಿಗೆ ಪುಣ್ಯದ ಪದವಿಯುಂಟಾದಡೆ ಗಂಗೆ ಘನವೆಂಬೆ. ಮುಳುಗಿ ಪಾಪವ ಮಾಡದೆ ಸತ್ತುಹೋದಡೆ ಪುಣ್ಯದ ಪದವವರಿಗುಂಟಾದಡೆ ಘನವೆಂಬೆ...' ಎನ್ನುವನು.

ಜಂಗಮವು ಜ್ಞಾನದ ಸಂಕೇತವಾಗಿ ಒಂದೆಡೆ ನಿಲ್ಲದೆ ಚರಿಸುತ್ತಿರಬೇಕು. ಅಂದು ಇದಕ್ಕೆ ವ್ಯತಿರಿಕ್ತವಾದ ಜಂಗಮರಿದ್ದರು. ಭೂಷಣವುಳ್ಳ ಜಂಗಮವನ್ನು ಭೂಪಾಲ ಪೂಜಿಸುವನು, ವೇಷವುಳ್ಳ (=ಸುಂದರವಾದ) ಜಂಗಮನನ್ನು ವೇಶಿ ಪೂಜಿಸುವಳು; ವೇಷಧಾರಿ ಜಂಗಮನನ್ನು ಲೋಕವೆಲ್ಲ ಪೂಜಿಸುವುದು. ಆದರೆ ಜ್ಞಾನಿಯಾದ ಜಂಗಮನನ್ನು ಯಾರೂ ಪೂಜಿಸುತ್ತಿಲ್ಲವಲ್ಲಾ ಎಂಬ ನೋವು ಸಿದ್ಧರಾಮನದು.

ಪರಂಪರೆಯಿಂದ ಬಂದ ಜಾತಿ ಅಥವಾ ಕುಲದ ಪ್ರಶ್ನೆಯ ಬಗೆಗೆ ಶಿವಶರಣರು ಸಾಕಷ್ಟು ವಿಚಾರ ಮಾಡಿರುವರು. ವ್ಯಕ್ತಿಯ ಹುಟ್ಟನ್ನು ಪ್ರಶ್ನಿಸದೆ ಗುಣವನ್ನು ಮನ್ನಿಸುವ ವಿಚಾರಧಾರೆ ಶಿವಶರಣರದು. ಜಾತಿರಹಿತ ಸಮಾಜ ನಿರ್ಮಾಣ ಮಾಡಹೊರಟ ಶಿವಶರಣರಿಗೆ ಮಾನವ ಕುಲದಲ್ಲಿ ಕಂಡದ್ದು ಗಂಡು-ಹೆಣ್ಣು ಎಂಬ ಎರಡೇ ಜಾತಿ; ಭಕ್ತ - ಭವಿ ಎಂಬ ಎರಡೇ ವರ್ಗ. ಶರಣರ ಚಿಂತನಸರಣಿಯಿಂದ ಪ್ರೇರಿತನಾದ ಸಿದ್ಧರಾಮನೂ ಕುಲದ ಬಗೆಗೆ ಸಾಕಷ್ಟು ವಿಚಾರಮಾಡಿರುವನು. 'ಕುಲದಲ್ಲಿ ಶೂದ್ರನಾದಡೇನು? ಮನದಲ್ಲಿ ಮಹಾದೇವ ನೆಲೆಗೊಂಡವನೆ ವೀರಶೈವ ನೋಡಾ' 'ಆವ ಯೋನಿಜನಾದಡೇನು ನೀನೊಲಿದವನೆ ಕುಲಜನಯ್ಯಾ' 'ಕುಲವೆಂದು ಹೋರಾಡುವ ಅಣ್ಣಗಳಿರಾ, ಕೇಳಿರೊ ಕುಲವೇ ಡೋಹಾರನ? ಕುಲವೇ ಮಾದಾರನ? ಕುಲವೇ ದೂರ್ವಾಸನ? ಕುಲವೇ ವ್ಯಾಸನ? ಕುಲವೇ ವಾಲ್ಮೀಕನ? ಕುಲವೇ ಕೌಂಡಿನ್ಯನ? ಕುಲವ ನೋಳ್ಪಡೆ ಹುರುಳಿಲ್ಲ, ಅವರ ನಡೆಯ ನೋಳ್ಪಡೆ ತ್ರಿಲೋಕದಲ್ಲಿಲ್ಲ ನೋಡಾ' ಎಂಬ ಸಿದ್ಧರಾಮನ ವಿಚಾರಧಾರೆ ಪ್ರಗತಿಪರವಾಗಿದೆ.

ಇಷ್ಟಲಿಂಗವು ಕಳೆದುಹೋದರೆ ಜಲ ನೇಣು ಬೆಂಕಿ, ಆತ್ಮಘಾತ, ಬೆಟ್ಟದ ಮೇಲಿಂದ ಬೀಳುವುದು- ಹೀಗೆ ಹಲವು ಬಗೆಯಿಂದ ಜೀವ ಕಳೆದುಕೊಳ್ಳುವ ದುಷ್ಟ

ಪದ್ಧತಿ ಸಾಮಾಜಿಕ ನೆಲೆಯಲ್ಲಿದ್ದಿತು. ಅದನ್ನು ನೋಡಿದ ಸಿದ್ಧರಾಮ 'ಎನ್ನಂಗ ನಡುಗಿತ್ತು' ಎಂದು ಉದ್ಗಾರ ತೆಗೆದಿರುವನು. 'ಲಗ್ನಕ್ಕೆ ವಿಘ್ನ ಬಾರದೆ?' ಎಂದು ಜ್ಯೋತಿಷ್ಯರನ್ನು ಕೇಳುವ ವಾಡಿಕೆ ಎಂಟುನೂರು ವರ್ಷಗಳ ಹಿಂದೆಯೂ ಇದ್ದಿತು. ಸಿದ್ಧರಾಮ ಹೇಳುವಂತೆ ಜ್ಯೋತಿಷ್ಯವದು ಜ್ಯೋತಿಯಂತಯ್ಯಾ ಕೂಡುವ ಕಾಲಕ್ಕೆ ಪ್ರಕಾಶಮಯವು, ಕೂಡದ ಕಾಲಕ್ಕೆ ದಗ್ಧಮಯವು.'

ಸಾಮಾಜಿಕ ಮನ್ನಣೆ ದೀಕ್ಷೆಯ ಮೂಲಕ ಪ್ರಾಪ್ತವಾಗುತ್ತದೆನ್ನುವ ಆಸೆಯ ಕಾರಣವಾಗಿ ಯೋಗ್ಯರಲ್ಲದವರು ಗುರುಗಳಿಗೆ ಧನದಾಮಿಶ ಒಡ್ಡಿ ದೀಕ್ಷೆ ಪಡೆಯಹೊರಟರು. ಅಂತಹವರನ್ನು ನೋಡಿ ಸಿದ್ಧರಾಮನು 'ದುಡ್ಡಿನ ಲಿಂಗವು ಮೋಕ್ಷವ ಕೊಡಬಲ್ಲಡೆ, ಅಡ್ಡಬೀಳುವುದೇಕಯ್ಯ ಗುರುವಿಗೆ' ಎಂದು ಕೇಳಿರುವನು. ಇಷ್ಟಲಿಂಗವನ್ನು ಧರಿಸಿದ ಮೇಲೂ ಸ್ಥಾವರಲಿಂಗಗಳಿಗೆ ನಮಸ್ಕರಿಸಿ ಪೂಜಿಸುವ ಭಕ್ತರನ್ನು ನೋಡಿ ಕಟ್ಟಿದ ಲಿಂಗವ ಬಿಟ್ಟು ನಟ್ಟಿದ ಲಿಂಗವನಲ್ಲಿ ಮೊಟ್ಟೆ ಮೊಟ್ಟೆ ತಾವರೆ ಮೊದಲಾದ ಪುಷ್ಪವ ಧರಿಸುವಾತನಿರವು ಚಾಂಡಾಲನ ಇರವು ನೋಡಾ, ಆತನ ಸಂಗ ಮಾದಿಗರ ಸಂಗ ನೋಡಾ' ಎಂದು ಕಟುವಾಗಿ ಅವರನ್ನು ಟೀಕಿಸಿರುವನು. ನಿಷ್ಠಾವಂತ ಸ್ಥಾವರಲಿಂಗ ಪೂಜಕನಾಗಿದ್ದ, ಸ್ಥಾವರಲಿಂಗ ಪ್ರತಿಷ್ಠಾಪಕನಾಗಿದ್ದ ಸಿದ್ಧರಾಮನಿಂದ ಈ ಮಾತು ಬರಬೇಕಿದ್ದರೆ, ಕಲ್ಯಾಣದ ಶರಣರ ಪ್ರಭಾವ ಅವನ ಮೇಲೆ ಎಷ್ಟರ ಮಟ್ಟಿಗೆ ಆಗಿರಬಹುದು? ಅವನ ಬದುಕಿನ-ಚಿಂತನೆಯ ವ್ಯವಸ್ಥೆಯನ್ನೇ ಆ ಪ್ರಭಾವ ಬುಡಮೇಲು ಮಾಡಿರಬಹುದು. ನಂಬಲಾಗದ, ಆದರೆ ನಂಬಲೇ ಬೇಕಾದ ಆಶ್ಚರ್ಯವಿದು. ಅವನ ಒಂದು ವಚನ ಸ್ಥಾವರಲಿಂಗಪೂಜೆಗಿಂತ ಮಾನಸಪೂಜೆ ಶ್ರೇಷ್ಠವೆಂಬ ಭಾವವನ್ನು ಸೊಗಸಾಗಿ ನಿರೂಪಿಸುತ್ತದೆ:

> ಕೆರೆಯ ನೀರು ಮರದ ಪುಷ್ಪ ಧರಿಸಿದಡೇನು ಅಯ್ಯಾ
> ಆಗುವುದೇ ಆಗುವುದೇ ಲಿಂಗಾರ್ಚನೆ?
> ನೀರನೆರೆಯಲಿಕ್ಕಾತನೇನು ಬಿಸಿಲಿನಿಂದ ಬಳಲಿದನೆ?
> ಪುಷ್ಪದಿಂದ ಧರಿಸಲಿಕ್ಕಾತನೇನು ವಿಟರಾಜನೆ?
> ನಿನ್ನ ಮನವೆಂಬ ನೀರಿಂದ, ಜ್ಞಾನವೆಂಬ ಪುಷ್ಪದಿಂದ ಪೂಜಿಸಬಲ್ಲಡೆ
> ಭಕ್ತನೆಂಬೆ, ಮಹೇಶ್ವರನೆಂಬೆ ನೋಡಾ,
> ಕಪಿಲಸಿದ್ಧಮಲ್ಲಿಕಾರ್ಜುನಾ.

ಯತಿಗಳು ತಪಸ್ಸಿಗಾಗಿ ಕಾಡು, ಪರ್ವತಗಳಿಗೆ ಹೋಗುವುದು ಬರಿಯ ಭ್ರಮೆಯಾಗಿ ಸಿದ್ಧರಾಮನಿಗೆ ಈಗ ತೋರುತ್ತಿದೆ. ಮನಸ್ಸಿನ ಏಕಾಗ್ರತೆ ಸಾಧಿಸಿ ಶಿವನೇ ತಾನಾಗಬಲ್ಲವರಿಗೆ ಗಿರಿ ಗ್ರಾಮ ವನವಾಸದ ಗೊಂದಿ ಏಕಯ್ಯಾ? ಎಂದು ಅವನು ಕೇಳುವನು. ಇಂದ್ರಿಯನಿಗ್ರಹ

ಮಾಡಿದೆನೆನ್ನುವ ಯತಿಗಳನ್ನು ನೋಡಿ 'ಇಂದ್ರಿಯನಿಗ್ರಹ ಮಾಡಿದಡೇನಯ್ಯಾ ಚಂದ್ರಧಾರಿಯಾಗಬಲ್ಲನೆ? ಇಂದ್ರಿಯಕಟ್ಟಿದ ಕುದುರೆ ಇಂದ್ರನ ಉಚ್ಚೈಶ್ರವವಹುದೆ? ಅಯ್ಯಾ. ಇಂದ್ರಿಯಂಗಳೆಂಬುದು ಮಾಯಾಜಾಲವು ತಾನೆ...' ಎಂದು ಪ್ರಶ್ನಿಸುವನು.

ಸಿದ್ಧರಾಮನಲ್ಲಿ 'ಸಮತಾಗುಣ'ವನ್ನು ಪ್ರತಿಪಾದಿಸುವ ಅನೇಕ ವಚನಗಳು ಬರುತ್ತವೆ. ಉದಾಹರಣೆಗೆ 'ಆವನಾಗಿ ಒಬ್ಬನು ನಿಡುಮುಳ್ಳಿನ ಮೇಲೆ ಪೊರಳ್ಚುಗೆಯ ಮೇಣು ಹಂಸೆಯ ಹಾಸಿನಮೇಲೆ ಪೊರಳ್ಚುಗೆಯ, ಪೊರಳ್ಚಿದಡೆ ಮನ ವಿಚ್ಛಂದವಾಗದೊಂದೆಯಂದದಲ್ಲಿಪ್ಪಂತಪ್ಪ ನಿಮ್ಮದೊಂದು ಸಮತಾಗುಣ ಎನ್ನನೆಂದು ಪೊದ್ದಿಪ್ಪುದು ಹೇಳಾ ಕಪಿಲಸಿದ್ಧಮಲ್ಲಿಕಾರ್ಜುನ.'

ಸಿದ್ಧರಾಮನು 'ಯೋಗಿಗಳ ಯೋಗಿ ಶಿವಯೋಗಿ' ಎಂದು ತನ್ನನ್ನು ಕರೆದುಕೊಂಡಿದ್ದರೂ ಕಾಮನ ಉಪಟಳದಿಂದ ತನ್ನನ್ನು ರಕ್ಷಿಸುವಂತೆ ಬೇಡಿ-ಕೊಂಡಿರುವನು - ಎರಡು ವಚನಗಳಲ್ಲಿ. ಆ ಬೇಡಿಕೆ ಸಾಮಾನ್ಯರಿಗೆ ಅನ್ವಯಿಸಬಹುದೇ ಹೊರತು ಸಿದ್ಧರಾಮನ ವ್ಯಕ್ತಿತ್ವಕ್ಕೆ ಅನ್ವಯವಾಗುತ್ತಿಲ್ಲವೆನ್ನಿಸಿದರೂ (ರಾಘವಾಂಕನ ಸಿದ್ಧರಾಮ ಚಾರಿತ್ರದಲ್ಲಿ ಮನ್ಮಥನನ್ನೇ ಸಿದ್ಧರಾಮನು ಸೋಲಿಸಿದಂತೆ ಚಿತ್ರಿಸಲಾಗಿದೆ!) ಸಿದ್ಧರಾಮನ ಆ ಪ್ರಾರ್ಥನೆ ತೋರಿಕೆಗೆ ಆತ ಮನ್ಮಥನಿಗೆ ಅಂಜಿದಂತೆ ವಚನದಲ್ಲಿ ಸೊಗಸಾಗಿ ಆ ಭಾವವನ್ನು ಅಭಿವ್ಯಕ್ತಿಸಲಾಗಿದೆ :

೧. ಅಯ್ಯಾ, ನಾನೊಂದ ಬೇಡುವೆ ನಿಮ್ಮಲ್ಲಿ
ಎನಗೊಂದು ಲೇಸ ಮಾಡಯ್ಯಾ.
ನಾರಿಯರುರದ ಗಾಳಿ ಸೋಂಕದಂತೆ
ಎನ್ನುವ ಮಂತ್ರಿಸಿ ರಕ್ಷಿಸಯ್ಯಾ
ಎನಗಿನಿಸು ಮಾಡಿ ಬದುಕಿಸಯ್ಯಾ.

೨. ಕಾಮನನು ನೋಡಿದಾ ಕಂಗಳಲಿ ನೋಡದೆ
ಸೋಮನಯನದಿ ನೋಡಿ ಸಲಹು ತಂದೆ.
ಕಾಮಾರಿ ಕಪಿಲಸಿದ್ಧಮಲ್ಲಿಕಾರ್ಜುನತಂದೆ
ಕಾಮಂಗೆ ಒಪ್ಪಿಸದಿರೆನ್ನ ತಂದೆ.
ಅನ್ಯಾಯದಿಂದ್ಯೆದು ನಾಯನಟ್ಟಿ
ಅವನು ಬಿನ್ನಾಣದಿಂ ಬೇಟೆಯಾಡುತ್ತಿಪ್ಪಾ.
ಎನ್ನ ಕಂಡಡೆ, ತನ್ನ ಹೋ ಮೃಗವು ಎಂದೆಸುವ
ಇನ್ನೇವೆನ್ನೆ ಗುರುವೆ ಕಪಿಲಸಿದ್ದ ಮಲ್ಲಿಕಾರ್ಜುನಾ.

ಮೊದಲನೆಯ ವಚನದ ನಾರಿಯರ ಎದೆಯ ಗಾಳಿ ನನ್ನನ್ನು ಸೋಂಕದಂತೆ ಮಂತ್ರ ಹಾಕಿ ನನ್ನನ್ನು ಕಾಪಾಡು ಎನ್ನುವ ಮೊರೆಯಲ್ಲಿನ ಆರ್ತತೆ ತನ್ನ ಕಾವ್ಯಗುಣದಿಂದ ನಮ್ಮ ಮನಸ್ಸನ್ನು ಮುದಗೊಳಿಸುತ್ತದೆ. ಎರಡನೆಯ ವಚನದಲ್ಲಿ ನನ್ನನ್ನು ಸುಡುಗಣ್ಣಿನಿಂದ

(ಅಗ್ನಿ ನೇತ್ರದಿಂದ) ನೋಡದೆ ಚಂದ್ರನಲ್ಲಿನ ಸ್ವಭಾವ ಸಹಜವಾದ ತಣ್ಣನೆಯ ನೋಟದಿಂದ ನೋಡು. ಕಾಮನು ಪಂಚೇಂದ್ರಿಯಗಳೆನ್ನುವ ಐದು ನಾಯಿಗಳನ್ನು ಬೆನ್ನಟ್ಟಿಸಿ ಬೇಂಟೆಯಾಡುವನು. ನನ್ನನ್ನು ಕಂಡರೆ ಬಿಡುವುದಿಲ್ಲ. ಕಾಮಾರಿ ಕಾಪಾಡು ಎನ್ನುವ ಕೋರಿಕೆಯು ಅವನು ಕೊಡುವ ಹೋಲಿಕೆಗಳಿಂದಾಗಿ ಈ ವಚನವು ನಮಗೆ ಇನ್ನಷ್ಟು ಪ್ರಿಯವಾಗುತ್ತದೆ.

'ಸಿದ್ಧರಾಮಯ್ಯದೇವರ ವಚನಗಳು' ಸಂಕಲನದಲ್ಲಿ (ಸಂ.ಡಾ.ಎಂ. ಎಂ.ಕಲಬುರ್ಗಿ, ಡಾ.ಸಾ.ಶಿ.ಮರುಳಯ್ಯ) ಪ್ರಾರಂಭದ ಎರಡು ಮೂರನೆ ಸ್ವರವಚನಗಳಲ್ಲಿ ಕಾಣುವ ಅಭಿವ್ಯಕ್ತಿಯಲ್ಲಿನ ಹೊಸತನವು ಗಮನಾರ್ಹವಾಗಿದೆ. ತಡೆದು ತಡೆದು ಅಕ್ಷರಗಳನ್ನು ನುಡಿವಾಗಿನ ಸೊಗಸು ಸಕಳೇಶ ಮಾದರಸನ ವಚನಗಳನ್ನು ನೆನಪಿಸುತ್ತದೆ. ಸಿದ್ಧರಾಮನ ಉಕ್ತಿವಿಶೇಷತೆಗೆ ಕೆಳಗಿನ ಉದಾಹರಣೆಗಳನ್ನು ನೋಡಬಹುದು:

೧. ಏಕೋವೃಕ್ಷದ ಕೆಳಗೆ ನಿಂದಿರ್ದೆ
ನಾಕು ಕೊಂಬಿನ ಫಲವ್ವನಜ಼ವರೆ ಆ ಆ ಆ॥
ನಾಕು ಕೊಂಬಿನ ಫಲವ್ವನಜ಼ವರೆ ಯೆ ಯೆ ಯೆ
ಈ ಫಲವ್ಯನ್ನಜ಼ಿದು
ಹಣ್ಣು ಕೊಯಿವ ಕನ್ನಡ ಜಾಣನೆ ಆ ಆ ಆ ॥೧॥

೨. ಗಗನ್ನ ಗಗನ್ನವೆಲ್ಲಾ ಶ್ವೇತ ಪೀತ ವರ್ಣ ಓ ಓ ಓ
ಬಹುರೂಪ ಬಹುದಾಯ ಚಂದ್ರಸೂರ್ಯಚರಣ ಓ ಓ ಓ
ಬಹುರೂಪ ಬಹುದಾಯ ನಕ್ಷಂತ್ರಗಳುವೆಲ್ಲ
ಶಿವನಕ್ಷಯಮಾಲೆಗಳಾ ಆ ಆ ಅ
ಬಹುರೂಪು ಬಹುದಾಯ॥
ಲೆಕ್ಕಕೆ ಬಾರದ ಘನವ್ವ ಚಕ್ಕನೆ ಹೇಳಿದ ಕನ್ನಡ ಜಾಣ॥
ಬಹುರೂಪು ಬಹುದಾಯ ॥೨॥

೩. ಕೇಳವ್ವಾ ಕೇಳವ್ವಾ ಕೆಳದಿ, ಹೇಳುವೆ ನಿನಗೆ :
ಆಹಾ ಕಂಗಳಲ್ಲಿ ಕಾಬೆ ಮತ್ತೆ ಕಾಣೆ
ಮನದಲ್ಲಿ ಹಿಡಿವೆ ಹಿಡಿದು ಮತ್ತೆ ಕಾಣೆನವ್ವಾ
ಅ ಅ ಅ ಅವ್ವಾ
ಮಿಂಚಿನಾ ರವೆರವೆಯಂತೆ ತೋಱುವನಡಗುವನವ್ವಾ,
ನಮ್ಮ ಕಪಿಲಸಿದ್ಧಮಲ್ಲಿನಾಥದೇವ ॥೩॥

ಇಲ್ಲಿನ ಮದಲನೆ ಹಾಗೂ ಎರಡನೆ ಹಾಡುಗಳಲ್ಲಿ ಎರಡನೆ ಸಾಲು ಮೂರನೆಯ ಸಾಲಿನಲ್ಲಿ ಪುನರಾವೃತವಾಗುತ್ತದೆ- ತ್ರಿಪದಿಯಲಯದಂತೆ. ಇಂತಹ ಪ್ರಯೋಗ ಇತರರ ವಚನಗಳಲ್ಲಿ ಅಪರೂಪ. ಸಿದ್ಧರಾಮನ ವಚನಗಳು ತ್ರಿಪದಿ ಲಯವನ್ನು ಹೊಂದಿರುವುದನ್ನು ಅವನ ವಚನಗಳಲ್ಲಿ ನಾವು ಗುರುತಿಸಬಹುದು. ಮೂರನೆಯದು ಸತಿ ಪತಿ ಭಾವದ

ನಿರೂಪಣೆ. ಭಾವಪೂರ್ಣವಾದ ವಚನವಿದು. ಮಿಂಚಿನಂತೆ ಹೊಳೆದು ಮಾಯವಾಗುವ ತನ್ನಿನಿಯನನ್ನು ಮನದಲ್ಲಿ ಹಿಡಿದು ನಿಲಲಿಸಲಾಗದ ಅವಸ್ಥೆಯಲ್ಲಿ ತಡೆದು ತಡೆದು ಹೊರಡುವ ಅ ಅ ಅ ಅವ್ವಾ ಎನ್ನುವ ಬೆರಗಿನ ಉದ್ಗಾರ ನಮ್ಮ ಮನಸೆಳೆಯುತ್ತದೆ. ಒಮ್ಮೆ ಸುಳಿದು ಥಟ್ಟನೆ ಮಾಯವಾಗುವುದನ್ನು ಮಿಂಚಿನಾ ರವೆರವೆಯಂತೆ ಎಂದು ಮನೋಜ್ಞ ಹೋಲಿಕೆಯೊಂದನ್ನು ಅದು ಜನಪದದಲ್ಲಿ ಬಳಕೆಯಲ್ಲಿರುವಂತೆಯೇ ಕೊಟ್ಟಿರುವುದು ಗಮನಾರ್ಹವಾದುದು.

ಸಿದ್ಧರಾಮನ ವಚನಗಳು ಆಕಾರದಲ್ಲಿ ಪುಟ್ಟವು. ಬಹುಶಃ ತ್ರಿಪದಿ ಲಯ ವಿನ್ಯಾಸ ಜೇಡರ ದಾಸಿಮಯ್ಯನ ವಚನಗಳಲ್ಲಿ ಹೇಗೆ ಕಂಡುಬರುತ್ತದೊ ಹಾಗೆ ಇವನ ವಚನಗಳಲ್ಲಿಯೂ ಕಂಡು ಬರುತ್ತದೆ. 'ಸಂಕೀರ್ಣ ತ್ರಿವಿಧಿ' 'ಬಸವ ಸ್ತೋತ್ರದ ತ್ರಿವಿಧಿ' 'ಮಿಶ್ರಸ್ತೋತ್ರದ ತ್ರಿವಿಧಿ' 'ಅಷ್ಟಾವರಣ ಸ್ತೋತ್ರದ ತ್ರಿವಿಧಿ'ಗಳು ಅವನ ವಚನ ವಿನ್ಯಾಸಕ್ಕೆ (structure) ಸ್ಪಷ್ಟ ಉದಾಹರಣೆಗಳಾಗಿವೆ. ಸಿದ್ಧರಾಮನ ವಚನಗಳು ಭಾವಪೂರ್ಣತೆಗೆ ಜೇಡರ ದಾಸಿಮಯ್ಯನ ರಚನೆಯಂತೆ ಅವುಗಳ ಕಿರಿದಾದ ಆಕಾರವೂ ಕಾರಣವೆನ್ನಬಹುದು. ಕೇವಲ ಎರಡೇ ಎರಡು ಸಾಲಿನ ವಚನಗಳನ್ನು ಇವನಲ್ಲಿ ಕಾಣಬಹುದು. ಇವನಿಗೂ ಮೊದಲಿಗೆ ಜೇಡರ ದಾಸಿಮಯ್ಯನಲ್ಲಿ ಈ ಬಗೆಯ ಪ್ರಯೋಗಗಳನ್ನು ನಾವು ನೋಡಿರುವೆವು:

ಇಂದಿಂಗೆಂತು ನಾಳಿಂಗೆಂತೆಂದು ಚಿಂತಿಸಲೇಕೆ
ತಂದಿಕ್ಕುವ ಶಿವಂಗೆ ಬಡತನವೇ ರಾಮನಾಥ॥

ಊರ ಮಾಡುವನ ಭಕ್ತಿ ದೂರದ ಹೊಲನಂತೆ
ದೂರದಿಂದ ಬಂದು ಅದು ನಿಂದು ಮುಂದೆ ಸಾಗರವಾಗಲಱಿಯದು
ರಾಮನಾಥ ॥ ೧ ॥

ಸಿದ್ಧರಾಮನಲ್ಲಿ-

ಓಂಕಾರದಲ್ಲಿ ಬಿಂದು ಅತ್ಯುತ್ತರಂಗಳಲಿ
ಮೇಲು ಪಂದಿಯಾಗಿಕ್ಕು ಯೋಗಿನಾಥಾ॥

ಮಕಾರದಲಿ ಬಿಂದು ಆಱು ವರ್ಗವಾಗಿ
ತೋಱಿಯಿಪ್ಪುದು ಶಿವನೆ ಯೋಗಿನಾಥ..

ಬಿಂದು ಭೇದಂಗಳಲಿ ಛಂದದಾನಂದದಲ್ಲಿ
ಸಂದಳಿದು ಒಂದಕ್ಕು ಯೋಗಿನಾಥಾ॥

(ಸಿದ್ಧರಾಮಯ್ಯದೇವರ ವಚನಗಳು, ೭೬೦-೭೬೨)

ಸಿದ್ಧರಾಮನ ವಚನಗಳಲ್ಲಿ ದೇವರ ಸಾಕ್ಷಾತ್ಕಾರಕ್ಕಾಗಿ ಅವನು ಅನುಭವಿಸಿದ ಯಾತನೆ, ಹಂಬಲಗಳು ಮನೋಜ್ಞವಾಗಿ ಮೂಡಿಬಂದಿವೆ. ಅವುಗಳ ಕಾವ್ಯಮಯತೆಗೆ

ಯಾರೇ ಆಗಲಿ ಬೆರಗಾಗುತ್ತಾರೆ. ಉದಾಹರಣೆಗೆ-

೧. ಅಯ್ಯಾ ಮಹಾಭಕ್ತರ ಹೃದಯದಲ್ಲಿ ನೀನಿಪ್ಪೆಯಾಗಿ
ಅವರ ವಚನವೆನ್ನ ಕರ್ಣದೊಳಗೆ ತುಂಬಲೊಡನೆ
ವಿರಕ್ತಿ ಬೆದೆಯಾಗಿ, ಭಕ್ತಿ ಮೊಳೆಯಾಗಿ
ನಿಮ್ಮ ಶ್ರೀಪಾದದೊಳಗೆನ್ನ ಸುತ್ತಿತ್ತು
ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ.

೨. ಎನ್ನ ತನು ಕರಗಿ ಎನ್ನ ಮನ ಕರಗಿ ಕೊರಗಿದ ದುಃಖವಿದಾರದಯ್ಯಾ?
ಅಯ್ಯಾ ಅಯ್ಯಾ ಎಂದುಳುವ ಅಕ್ಕೆ ಇದಾರದಯ್ಯಾ?
ಮರಹೆಂಬ ಕೂರಸಿಗೆ ಗುರಿಮಾಡಿದವರಾರಯ್ಯಾ?
ಆಹಾ ಎಂಬ ಧ್ವನಿಯ ಕೇಳಲಾರದೆ
ಕಂಡು ಕರುಣದಿಂದ ಶಿರವ ಹಿಡಿದೆತ್ತಿ
ಎನ್ನ ಕಣ್ಣನೀರ ತೊಡೆದನು
ಕಪಿಲಸಿದ್ಧಮಲ್ಲಿನಾಥಯ್ಯನು.

೩. ಅಯ್ಯಾ, ನಿಮ್ಮ ವಿಕಳದಲ್ಲಿ ನೆನೆವುತ್ತ
ಗಾಳಿಯ ಸರವ ನೀವೆಂದು ಬಗೆದೆ ಕಂಡಯ್ಯಾ.
ಕಪಿಲಸಿದ್ಧಮಲ್ಲಿನಾಥಯ್ಯಾ,
ನಿಮ್ಮ ವಿಕಳದಲ್ಲಿ ಮಹಾಭ್ರಾಂತಿಯಾಗಿದ್ದೆನಯ್ಯಾ.

೪. ಅಯ್ಯಾ ನಿಮ್ಮ ಹಾಡಿ ಹಾಡಿ ಹಂಬಲಿಸಿದೆನಯ್ಯಾ
ನಿಮ್ಮ ಬೇಡಿ ಬೇಡಿ ಬಾಯಿ ಬೋಡಾದೆನಯ್ಯಾ
ನುಡಿಗೆಟ್ಟ ಬ್ರಹ್ಮದಲ್ಲಿ ನಡೆದಹೆನೆಂದರೆ
ಎನ್ನೊಡಲಾಮಿಷ ಕಾಡುತ್ತಿದೆ.
ಮೃಡನೆ, ಕಪಿಲಸಿದ್ಧಮಲ್ಲಿಕಾರ್ಜುನಯ್ಯ,
ಇವನೆಲ್ಲವ ಕಳೆದು ನಿಮ್ಮದೊಂದು ಭಕ್ತಿಯ ಕರುಣಿಸಯ್ಯಾ ತಂದೆ!

೫. ಅಯ್ಯಾ, ನೀ ಬಾರಯ್ಯಾ!
ಬಂದು ಎನ್ನ ಹೃದಯ ಮನ ಶಾಸನವ ಮಾಡಿ ನಿಲ್ಲಯ್ಯ.
ಹಾ! ಅಯ್ಯಾ, ಅಯ್ಯಾ, ನೀರ ಬಾರಾ ನಿಮ್ಮ ಧರ್ಮ.....

೬. ಅಯ್ಯಾ ನೀನೇಕೆ ಬರಲೊಲ್ಲೆ ಹೇಳಯ್ಯಾ
ನೀ ಬಾರೆಯೆಂದಾನು ಕಲ್ಮರನಾಗಿರ್ದೆನಯ್ಯಾ.
ಅಯ್ಯಾ ನೀ ಬಾರಯ್ಯಾ
ಬಂದೆನ್ನ ಹೃದಯ ಸಿಂಹಾಸನವ ಮಾಡಿ ನಿಲ್ಲಯ್ಯಾ
ಆಹಾ! ನೀ ಬಾರಾ, ಎನ್ನ ಕಪಿಲಸಿದ್ಧ ಮಲ್ಲಿನಾಥಯ್ಯಾ.

ಮೇಲಿನ ಮೂರು ಮತ್ತು ನಾಲ್ಕನೆಯ ವಚನಗಳಲ್ಲಿ ಭಾವತೀವ್ರತೆ ಓದುಗನ ಮನಸ್ಸನ್ನು ಮಿಡಿಯುತ್ತದೆ. ಪರಮಾತ್ಮನ ಹಂಬಲ ತೀವ್ರವಾದಾಗ ಗಾಳಿಯ ಸರವ (=ಶಬ್ದ) ನೀವೆಂದೆ ಬಗೆದೆ ಎನ್ನುವಲ್ಲಿನ ಅಭಿವ್ಯಕ್ತಿಯ ಸೊಗಸು, ನಿಮ್ಮನ್ನು ಬೇಡಿ

ಬೇಡಿ ನನ್ನ ಬಾಯಿ ಬೋಡಾಯಿತು ಎನ್ನುವಲ್ಲಿನ ವಾಸ್ತವತೆ ನಮ್ಮನ್ನು ಒಂದು ಕ್ಷಣ ಹಿಡಿದು ನಿಲ್ಲಿಸುತ್ತದೆ. ಐದನೆಯ ವಚನದಲ್ಲಿನ 'ಎನ್ನ ಹೃದಯ ಮನ ಶಾಸನದ ಮಾಡಿ ನಿಲ್ಲು' ಎನ್ನುವಲ್ಲಿನ ಉಕ್ತಿವಿಶೇಷ ಒಂದು ಕ್ಷಣ ನಮ್ಮನ್ನು ರೋಮಾಂಚನಗೊಳಿಸುತ್ತದೆ.

ಸಿದ್ಧರಾಮನಲ್ಲಿ ಸತಿ-ಪತಿ ಭಾವದ ವಚನಗಳು ವಿಶೇಷವಾಗಿವೆ. ಶಿವಯೋಗಿ ಸಿದ್ಧರಾಮ ತನ್ನನ್ನೇ ಹೆಣ್ಣಾಗಿಯೂ ಕಪಿಲಸಿದ್ಧಮಲ್ಲಿಕಾರ್ಜುನನನ್ನೇ ಗಂಡಾಗಿಯೂ ಪರಿಭಾವಿಸಿ ನಡೆಸುವ ಭಕ್ತಿರತಿ ಗಜೇಶ ಮಸಣಯ್ಯ, ಉರಿಲಿಂಗದೇವರನ್ನು ನೆನಪಿಗೆ ತರುತ್ತದೆ. ಹೆಣ್ಣಿನ ಮನದ ವಿರಹ ವೇದನೆಯನ್ನು, ನಲ್ಲನ ಆಗಮನದ ಕಾತರತೆಯನ್ನು, ನಲ್ಲನು ಕಾಣಿಸಿಕೊಂಡಾಗಿನ ಮನದ ಸಂಭ್ರಮವನ್ನು, ಒಬ್ಬರು ಇನ್ನೊಬ್ಬರಲ್ಲಿ ಲಯವಾಗುವ ಏಕೀಭಾವವನ್ನು ಅಷ್ಟು ನವಿರಾಗಿ ಮಾತಿನಲ್ಲಿ ಮೂಡಿಸಿರುವುದು ಮೆಚ್ಚುವಂತಹದು (ಇದರ ಬಗೆಗೆ ಹೆಚ್ಚಿನ ವಿವರಗಳಿಗೆ ನನ್ನ 'ವಚನಾನುಶೀಲನ' ಪು.೨೪೭-೨೭೨ ನೋಡಿ).

ಸಿದ್ಧರಾಮನದು ಕವಿಹೃದಯ. ಉತ್ಸಾಹ, ಲವಲವಿಕೆ ಅವನ ವಚನಗಳ ಸ್ಥಾಯೀಭಾವ. ಹೇಳಬೇಕಾದುದನ್ನು ಮನಮುಟ್ಟುವಂತೆ ಹೇಳುವುದು ಅವನ ವಚನಗಳ ಶೈಲಿಯ ಪ್ರಮುಖಗುಣ. ಕಿರಿದಾದ ವಾಕ್ಯಗಳಲ್ಲಿ ಹಿರಿದಾದ ಅರ್ಥವನ್ನು ತುಂಬುವ ಜಾಯಮಾನ ಅವನದು. ಅವನ ವಚನಗಳ ಭಾಷೆ ಆಡುನುಡಿಯಿಂದ ಪರಿಪುಷ್ಟವಾಗಿದೆ. ಭಾಷೆಯ ಬಳಕೆಯಲ್ಲಿ ಎಚ್ಚರವಹಿಸಿರುವ ಸಿದ್ಧರಾಮ 'ಮಜ್ಜಿಗೆ ಹುಳಿ ಎಂದಡೆ ಅದು ಗೊಜ್ಜಿನ ಹಾದಿ' 'ಜಲದೊಳಗೆ ಕಲ್ಲು ನೆನೆದು ಮೃದುವಪ್ಪುದೆ ಒಲವಿಲ್ಲದವಗೆ ಭಕ್ತಿ ನೆಲೆಗೊಂಬುದೆ' 'ಬಡವ ನಿಧಾನವ ಕಂಡಂತೆ ಹಾರುವ ಮಾಳವ (ಮಹಳ = ಶ್ರಾದ್ಧ) ಕಂಡಂತೆ, ಶಿಶು ತನ್ನ ತಾಯ ಕಂಡಂತೆ. ವೀರ ತಾನು ಪರಸೇನೆಯ ಕಂಡಂತೆ ಚನ್ನಬಸವಣ್ಣನ ಪಾದವ ನೋಡಿ ಹರುಷಿತನಾದೆ' 'ವಾಯು ಕರ್ಪೂರವನು ಕೂಡಿಪ್ಪುದೆ ಇರದು ವಾಯು ಪರಿಮಳವ ಕೂಡುವಂತೆ' 'ಬಾಲನ ಮಾತಿಗೆ ಮಾತೆಪಿತರಿಗೆ ಪ್ರೀತಿಯಪ್ಪಂತೆ ಎನ್ನ ಮಾತ ಆಲಿಸುವರು ಶಿವಭಕ್ತರು' 'ಕೆಱೆ'ಯೊಳಗೆ ಬಾಯಿಯನು ಅಗಳುವವ ಮುನ್ನೆಗ್ಗ' 'ಸಂಸಾರವೆಂಬ ಸಾಗರಕೆ ಒಡಲೆಂಬುದೊಂದು ಚೈತ್ರ ಕಂಡಯ್ಯಾ' 'ಗುಣದಿಂದ ಹಾರುವನಲ್ಲದೆ ಅಗಣಿತ ವಿದ್ಯಾಭ್ಯಾಸದಿಂದ ಹಾರುವನಲ್ಲ' 'ಹೊಗಳಿತೆಗೆ ಎನ್ನ ದೇಹ ಉರಸದಯ್ಯಾ. ಹೊಗಳಿತೆಯ ಹೊಗಳುವಾಗ ನೆಲನ ಬಗಿದು ಹೋಗುವಂತಪ್ಪುದಯ್ಯಾ' 'ಕ್ಷೀರಕ್ಕು ತಕ್ರಕ್ಕು ಭೇದವೇನುಂಟು, ರುಚಿಯಿಂದಲ್ಲದೆ ರೂಪದಿಂದವೆ?' 'ತಿಳಿನೀರೆಂಬೆ ತಿಳಿನೀರೆಂಬ ತಿಳಿ ನೀ ಎಂದು ಒಂದು ದಿನ ಅಂದಿಲ್ಲಲ್ಲೆ ಮಾನವಾ' 'ಅಯ್ಯಾ ಹೊಟ್ಟೆ ಬೆನ್ನ ಮಚ್ಚಿದಂತೆ ನಾ ನಿನ್ನ ಮಚ್ಚಿದೆನಯ್ಯಾ' 'ಅರಲುಗೊಂಡ ಕೆರೆಗೆ ತೊರೆ ಬಂದು ಹಾಯ್ವಂತೆ' 'ಶುಭಕ್ಕೆ ವಿಘ್ನವಲ್ಲದೆ ಅಶುಭಕ್ಕೆ ವಿಘ್ನವೆ' 'ಹಾಲುಳ್ಳಲ್ಲಿ ಹಬ್ಬವ ಮಾಡಿ, ಗಾಳಿಯುಳ್ಳಲ್ಲಿ ತೂರಿಕೊಳ್ಳಿರಿ' 'ಸಾಕುವವರು ತಾವಾದ ಬಳಿಕ ನೂಕುವವರು ತಾವಾಗಬಾರದು' 'ಜಪವೆಂಬುದು ಪಾಪಕ್ಕೆ ಬಹುತಾಪ'

'ಶರಣನ ನೋಟ ಭವದ ಕಾಟ' 'ರಂಭೆ ಎಂದಡೆ ನಿನ್ನಂಗನೆಯಾಗಲಿಲ್ಲವು, ಒಂದಿನ ಸ್ವಪ್ನವಲ್ಲಾದಡೂ ರತಿಸಲಿಲ್ಲ' 'ಅಯ್ಯಗಳು ಅನುಭವಕ್ಕಲ್ಲದೆ ನಿನ್ನ ಪಾಪಕ್ಕವರು ಅಯ್ಯಗಳೆ' ನೀರಲ್ಲಿಯ ಕ್ರೀಡೆ ಕುಂಬಳಕಾಯಿಗಲ್ಲದೆ ದೊಡ್ಡ ಬಂಡೆಗುಂಟೇನಯ್ಯಾ' 'ಓದುವುದದು ಸದ್ಗುಣಕ್ಕಲ್ಲದೆ ಕಿವಿಯನೂದುವುದಕ್ಕೇನೊ' 'ಅನುಭವವೆಂಬುದು ಅನುಭಾವಿಕಂಗಲ್ಲದೆ ಹೊತ್ತಗೆಯಲಿಲ್ಲ' 'ಮನವಿದ್ದಲ್ಲಿ ಮಹಾದೇವನಿಪ್ಪ' 'ಕೃಷಿಯ ಮಾಡಿ ಉಣ್ಣದೆ ಹಸಿವು ಹರಿಯುವ ಪರಿಯಿನ್ನೆಂತೊ? 'ಆಳುವ ಅರಸಿನ ಹೆಂಡತಿಯ ಹಾದರಗಿತ್ತಿ ಎಂದಡೆ ಆಳುವ ಅರಸು ಕೈಕಾಲನು ತಱಿಸದೆ ಬಿಡನೆ?' 'ಸತ್ಯಕ್ಕೆ ಸಾಕ್ಷಿಯಲ್ಲದೆ ಮಿಥ್ಯಕ್ಕೆ ಸಾಕ್ಷಿಯೆ?' ಹೀಗೆ ಸಿದ್ಧರಾಮ ಅರ್ಥಪೂರ್ಣವಾದ ಆಡುಭಾಷೆಯಿಂದ ಕಸುವುಗೊಂಡ ಮಾತುಗಳನ್ನು ಸಂದರ್ಭೋಚಿತವಾಗಿ ಬಳಸಬಲ್ಲ ಸಮರ್ಥನು.

ಸಿದ್ಧರಾಮನ ಮೇಲೆ ಬಸವಣ್ಣನ ವಚನಗಳ ಪ್ರಭಾವ ಗಾಢವಾಗಿ ಆಗಿರುವಂತಿದೆ. ಇದಕ್ಕೆ ಸಾಕಷ್ಟು ಉದಾಹರಣೆಗಳನ್ನು ಕೊಡಬಹುದು. ಬಸವಣ್ಣನ 'ಆಸೆಯೆಂಬ ಪಾಶದಲ್ಲಿ....' ಎಂದು ಪ್ರಾರಂಭವಾಗುವ ವಚನದ ಭಾವ ಸಿದ್ಧರಾಮನ ಮೂರುವಚನಗಳಿಗೆ- 'ಈ ಆಸೆಯೆಂಬವಳು ನೋಡಾ ಜಲಸಮುದ್ರಂಗಳಂ ಕಟ್ಟಿಸುವಳು...' 'ಈ ಆಸೆಯೆಂಬವಳು ನೋಡಾ ತಡೆಯದೆ ವಾಹಿಗೊಟ್ಟಿಗೆಗಳಂ ಕಟ್ಟಿಸುವಳು.....' 'ಈ ಆಸೆಯೆಂಬವಳು ನೋಡಾ ಏನಾದಡಂ ತನ್ನತ್ತಲೆ ಎಳೆವಳು...' - ಮೂಲವಾಗಿರವಂತೆ ತೋರುತ್ತದೆ. 'ಚರಿಸುವ ಚರನಿಗೆ ಚರ್ಚೆಯೆ ಭೂಷಣ..' ಎಂಬುದು 'ನೀರಿಂಗೆ ನೈದಿಲೆಯೆ ಶೃಂಗಾರ' ಎಂಬ ವಚನವನ್ನು ನೆನಪಿಸುತ್ತದೆ. 'ಶರಣನ ಜಾಗ್ರತಿಯೆ ಶಿವರಾತ್ರಿ ಕಂಡಾ ಮನವೆ' ಎಂಬುದು 'ಶರಣ ನಿದ್ರೆಗೈದಡೆ ಜಪ ಕಾಣಿರಣ್ಣಾ' ಎಂಬ ವಚನವನ್ನು ನೆನಪಿಸುತ್ತದೆ. 'ವೇದಪ್ರಿಯನಲ್ಲಯ್ಯಾನೀನು..... ನಾದಪ್ರಿಯನಲ್ಲಯ್ಯಾ ನೀನು..... ಭಕ್ತಿಪ್ರಿಯ' ಎಂಬ ವಚನವು 'ನಾದಪ್ರಿಯ ಶಿವನೆಂಬರು....' ಎಂಬ ಬಸವಣ್ಣನ ವಚನದ ನೇರ ಅನುಕರಣೆಯಂತೆ ತೋರುತ್ತದೆ. 'ಹಸಿವುದೋರದ ಮುನ್ನ....' ಎಂಬ ವಚನವು 'ನೆರೆಕೆನ್ನೆಗೆ ತೆರೆ ಗಲ್ಲಕೆ ಶರೀರ ಗೂಡುವೋಗದ ಮುನ್ನ....' ಎಂಬ ಬಸವಣ್ಣನವರ ವಚನವನ್ನು ನೆನಪಿಸುತ್ತದೆ. 'ಸಂಸಾರದ ಅಣಲೊಳಗೆ ಇದ್ದೆನಯ್ಯಾ...' ಎಂಬ ವಚನ ಬಸವಣ್ಣನ 'ಕಪ್ಪೆ ಸರ್ಪನ ನೆಳಲಲ್ಲಿಪ್ಪಂತೆ...' 'ಶೂಲದ ಮೇಲಣ ವಿಭೋಗ...' ಎಂಬ ಎರಡು ವಚನಗಳಿಂದ ಪ್ರಭಾವಿತವಾಗಿರುವಂತಿದೆ. 'ಹಿರಣ್ಯವೆಂದು ಮನ ವೇಧಿಸಿ ಕೈಯಾಂತರೆ ಅಯ್ಯಾ ನಿಮ್ಮಾಣೆ....' ಎಂಬ ವಚನ 'ಹೊನ್ನಿನೊಳಗೊಂದೊರೆಯ..' ಎಂಬ ವಚನದಿಂದ ಪ್ರಭಾವಿತವಾಗಿರುವಂತಿದೆ. ಬಸವಣ್ಣನ ಅನೇಕ ವಚನಗಳ ಬಂಧ, ಭಾವ, ಉಕ್ತಿಗಳನ್ನು ಸಿದ್ಧರಾಮನು ಅನುಕರಿಸಿದಂತೆ ತೋರುತ್ತದೆಯಾದರೂ ಅನುಕರಣೆಯೆ ಸಿದ್ಧರಾಮನ ಪ್ರಧಾನ ಗುಣವಲ್ಲ. ಸಿದ್ಧರಾಮನು ಕವಿಹೃದಯದ ಪ್ರತಿಭಾವಂತ ವಚನಕಾರ ನೆಂಬುದನ್ನು ಯಾರೂ ಅಲ್ಲಗಳೆಯಲು ಸಾಧ್ಯವಿಲ್ಲ. ಬಸವಣ್ಣನ ಸ್ತುತಿ ಅವನ ವಚನಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಬಂದಿದೆ. 'ಬಸವಸ್ತೋತ್ರದ ತ್ರಿವಿಧಿ' ಎಂಬ ಪ್ರತ್ಯೇಕ ಕೃತಿಯನ್ನೇ ಬಸವ ಸ್ತುತಿಗಾಗಿ ಮೀಸಲಿರಿಸಿದ್ದಾನೆ. ಹೀಗಾಗಿ, ಬಸವಣ್ಣನ ಪ್ರಭಾವ ಸಿದ್ಧರಾಮನ ವಚನಗಳ

ಮೇಲೆ ಆಗಿದ್ದರೆ ತಪ್ಪಾಗಲಾರದು. ಬಸವಣ್ಣ ವಚನಕಾರರಿಗೆ ವಚನ ರಚನೆಗೆ ಒಂದು 'ಮಾದರಿ' ಯಾಗುವುದರಿಂದ ಈ ಪ್ರಭಾವ ಸಹಜವಾದುದೇ. ಈ ಪ್ರಭಾವವನ್ನು ಜೀರ್ಣಿಸಿಕೊಂಡು, ಸಿದ್ಧರಾಮ ತನ್ನ ಸ್ವಂತಿಕೆಯನ್ನು ಅನೇಕ ಕಡೆ ಪ್ರಕಟಪಡಿಸಿರುವುದನ್ನು ಯಾರೂ ಅಲ್ಲಗಳೆಯಲಾರರು. ಅವನು ಆ ಕಾಲದ ಶ್ರೇಷ್ಠ ಅನುಭಾವಿ, ಶಿವಯೋಗಿ.

**ಸಂಪಾದನೆಯ ವಿಧಾನ:**

'ಸಿದ್ಧರಾಮೇಶ್ವರ ವಚನಸಂಪುಟ'ದಲ್ಲಿ ಅವರ ವಚನಗಳನ್ನು ಎರಡು ಕಾಂಡಗಳಲ್ಲಿ ಸಂಕಲಿಸಲಾಗಿದೆ. ಕಾಂಡ: ಒಂದು- ಬೇರೆ ಬೇರೆ ಸಂಕಲನ ಗ್ರಂಥಗಳಲ್ಲಿ ಬಂದಿರುವ ಸಿದ್ಧರಾಮನ ವಚನಗಳನ್ನು ಅಕಾರಾದಿಯಾಗಿ ಕೊಡಲಾಗಿದೆ. (ಸಂಪಾದನೆಗೆ ಬಳಸಿಕೊಳ್ಳಲಾಗಿರುವ ಹಸ್ತಪ್ರತಿ / ಮುದ್ರಿತ ಪ್ರತಿಗಳ ವಿವರಗಳನ್ನು ಈ ಸಂಪುಟದ ಕೊನೆಯಲ್ಲಿ ಕೊಡಲಾಗಿದೆ.) ಕಾಂಡ: ಎರಡು- ಷಟ್‌ಸ್ಥಲ ವಚನಗಳನ್ನು ಕೊಡಲಾಗಿದೆ. ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ಕಾಗದದ ಪ್ರತಿ ೭೫೭ನ್ನು ಷಟ್‌ಸ್ಥಲ ವಚನಗಳ ಸಂಪಾದನೆಯಲ್ಲಿ ಬಳಸಲಾಗಿದೆ (ಇದರ ಶುದ್ಧಾಶುದ್ಧತೆಯನ್ನು ಕುರಿತು ಮುಂದೆ ಪ್ರಸ್ತಾಪಿಸಲಾಗುವುದು). ವಚನಗಳನ್ನು ಮಾತ್ರ ಸಂಪಾದಿಸಿ ಪ್ರಕಟಿಸುವ ಉದ್ದೇಶ 'ಸಮಗ್ರ ವಚನ ಸಾಹಿತ್ಯ ಪ್ರಕಟಣ ಯೋಜನೆ'ಯದ್ದು. ಹೀಗಾಗಿ, ತ್ರಿಪದಿ ರೂಪದ ಯೋಗಿನಾಥಾಂಕಿತದ ಸಂಕೀರ್ಣ ತ್ರಿವಿಧಿ, ಬಸವಸ್ತೋತ್ರದ ತ್ರಿವಿಧಿ, ಮಿಶ್ರಸ್ತೋತ್ರದ ತ್ರಿವಿಧಿ, ಅಷ್ಟಾವರಣ ಸ್ತೋತ್ರದ ತ್ರಿವಿಧಿಗಳನ್ನು ಈ ಸಂಪುಟದಲ್ಲಿ ಸೇರಿಸದೆ ಬಿಡಲಾಗಿದೆ. ಸೊಲ್ಲಾಪುರದ ಕುಂಟೋಜಿಮಠವು ಪ್ರಕಟಿಸಿರುವ ಕ್ರಿಯಾಸಮರಸ (ಅಲ್ಲಮಹಾಪ್ರಭು ಸಿದ್ಧರಾಮೇಶ್ವರನ ವಾದದ ವಚನ)ದ ೪೮೨ ವಚನಗಳು ಹಾಗೂ ಸಿದ್ಧರಾಮ ಶಾಂತಿಶೆಟ್ಟಿವಾದದ ೨೪೬ ವಚನಗಳು -ಈ ಗ್ರಂಥಗಳನ್ನು ಮತ್ತು 'ಮುಕ್ತಿ ಕಂಠಾಭರಣ' ಸಂಕಲನ ಗ್ರಂಥವನ್ನು ಸಂಪಾದನೆಗೆ ಬಳಸಿಲ್ಲ.

ಅಂಕಿತದ ಸಮಸ್ಯೆಯಲ್ಲಿ ಯೋಗಿನಾಥಾಂಕಿತ ತ್ರಿವಿಧಿಗಳು ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂಬ ಅಂಕಿತದ ವಚನಗಳಾಗಿ ಹಲವು ಸಂಕಲನ ಗ್ರಂಥಗಳಲ್ಲಿ ಕಂಡುಬರುವುದು ಪರಿಶೀಲನಾರ್ಹವಾಗಿದೆ. ಉದಾಹರಣೆಗೆ 'ಯೋಗಭೂಷಣನೆ, ನಿಮ್ಮ ನೆರೆಯಲು ಬೇಕು....' ಎಂಬ ಸಂಕೀರ್ಣ ತ್ರಿವಿಧಿಯು (೭೫) ಗುಮ್ಮಳಾಪುರದ ಸಿದ್ಧಲಿಂಗಯತಿಗಳ ಶೂನ್ಯಸಂಪಾದನೆಯಲ್ಲಿ 'ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ' ಎಂಬ ಅಂಕಿತದ ವಚನವಾಗಿ ಬಂದಿದೆ; 'ತುಂಬಿ ಇಂಬಿನ ಕೊಳನ....' ಎಂಬ ಸಂಕೀರ್ಣ ತ್ರಿವಿಧಿಯು (೧೦೯) 'ವಿಶೇಷಾನುಭವ ಷಟ್‌ಸ್ಥಲ' ಹಾಗೂ 'ಪ್ರಸಾದಿಸ್ಥಲದ ವಚನಗಳು' ಸಂಕಲನ ಗ್ರಂಥಗಳಲ್ಲಿ 'ಕಪಿಲಸಿದ್ಧಮಲ್ಲಿನಾಥಾ' ಎಂಬ ಅಂಕಿತದ ವಚನವಾಗಿ ಬಂದಿದೆ; 'ಆರೇನನೆಂದಡೆಯು ಮೌನಗೊಂಬುದೆ ಸಮತೆ....' ಎಂಬ ಸಂಕೀರ್ಣ ತ್ರಿವಿಧಿಯು (೯೦) 'ವಿಶೇಷಾನುಭವ ಷಟ್‌ಸ್ಥಲ' ಹಾಗೂ 'ಪ್ರಸಾದಿಸ್ಥಲದ ವಚನಗಳು' ಎಂಬ ಸಂಕಲನ ಗ್ರಂಥಗಳಲ್ಲಿ 'ಕಪಿಲಸಿದ್ಧ ಮಲ್ಲಿನಾಥಾ' ಎಂಬ ಅಂಕಿತದ ವಚನವಾಗಿ ಬಂದಿದೆ. ಸಿದ್ಧರಾಮೇಶ್ವರರ ಅನೇಕ ವಚನಗಳಲ್ಲಿ ತ್ರಿಪದಿಯ ಲಯವನ್ನು

ಗುರುತಿಸಬಹುದು. ಮೂಲತಃ ಇವು ತ್ರಿಪದಿಗಳಾಗಿದ್ದವೆ? ಎಂಬುದನ್ನು ಖಚಿತವಾಗಿ ಹೇಳಲಾಗದು. ಕೆಲವು ವಚನಗಳಲ್ಲಿ ತ್ರಿವಿಧಿಯ ಲಯ ಕಂಡುಬಂದರೂ ವಚನ ಭಾವ ವಿಸ್ತರಣೆಗೊಳ್ಳುವಾಗ ತ್ರಿಪದಿಯ ಲಯದ ಹಿಡಿತ ತಪ್ಪಿದಂತೆ ಭಾಸವಾಗುತ್ತದೆ. ಜೇಡರ ದಾಸಿಮಯ್ಯನಲ್ಲಿ ತ್ರಿಪದಿಯ ಲಯ ಕಾಣುವಂತೆ ಸಿದ್ಧರಾಮೇಶ್ವರರಲ್ಲೂ ಕಾಣಬರುವುದು ಆಕಸ್ಮಿಕವಾಗಿರುವಂತೆ ತೋರುವುದಿಲ್ಲ. ವಚನದ ಮೂಲಸೆಲೆ ದೇಸೀ ಛಂದಸ್ಸಾದ ತ್ರಿಪದಿಯಲ್ಲಿಯೇ ಕಾಣಬರುತ್ತಿದೆ.

ಯೋಗಿನಾಥಾಂಕಿತ ತ್ರಿವಿಧಿಗಳು ವಚನಗಳಾಗಿರುವಂತೆ ವಚನಗಳು ಯೋಗಿನಾಥಾಂಕಿತ ತ್ರಿವಿಧಿಗಳಾಗಿ ಉಲ್ಲೇಖಗೊಂಡಿರುವುದನ್ನು ಸಂಕಲನ ಗ್ರಂಥಗಳಲ್ಲಿ ನೋಡಬಹುದಾಗಿದೆ. ಉದಾಹರಣೆಗೆ 'ಬಸವ ಕಾರಣ ವಸುಧೆ, ವಸುಧೆ ಕಾರಣ ಬಸವ'; 'ನಿನ್ನಾಜ್ಞೆಯಿಂದ ಲೋಕವೊಪ್ಪಿಪ್ಪುದಯ್ಯಾ....'; 'ಯೋಗಭೂಷಣ, ನಿಮ್ಮ ಆದಿ ಅಕ್ಷರಭೇದ....' ಎಂದು ಪ್ರಾರಂಭವಾಗುವ ವಚನಗಳು ಗುಮ್ಮಳಾಪುರದ ಸಿದ್ಧಲಿಂಗಯತಿಗಳ ಶೂನ್ಯಸಂಪಾದನೆಯಲ್ಲಿ ಯೋಗಿನಾಥಾಂಕಿತವಾಗಿವೆ. 'ಅಧ್ಯಾತ್ಮ ಅಧ್ಯಾತ್ಮವೆಂದೆಂಬಿರಿ, ಅಧ್ಯಾತ್ಮವಾರಿಗೆ?' ಎಂದು ಪ್ರಾರಂಭವಾಗುವ ವಚನ ಹಲಗೆದೇವರ ಶೂನ್ಯಸಂಪಾದನೆಯಲ್ಲಿ ಯೋಗಿನಾಥ ಅಂಕಿತದಲ್ಲಿದೆ. ಆದರೆ ಈ ವಚನವು ಗುಮ್ಮಳಾಪುರದ ಸಿದ್ಧಲಿಂಗಯತಿಗಳ ಶೂನ್ಯಸಂಪಾದನೆಯಲ್ಲಿ ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂಬ ಅಂಕಿತವನ್ನೊಳಗೊಂಡಿದೆ. 'ಬಸವನನ್ನು ಹೊಗಳುವವ....' ಎಂದು ಪ್ರಾರಂಭವಾಗುವ ವಚನವು 'ಭಕ್ತಾನಂದ ಸುಧಾರ್ಣವ'ದಲ್ಲಿ ಯೋಗಿನಾಥಾಂಕಿತವಾಗಿದೆ. 'ಸುರಭಿಮಧ್ಯದಲ್ಲಿಪ್ಪ ವಿರಳಕೂಪವ....' ಎಂದು ಪ್ರಾರಂಭವಾಗುವ ವಚನವು 'ಪ್ರಸಾದಿಸ್ಥಲದ ವಚನಗಳು' ಸಂಕಲನ ಕೃತಿಯಲ್ಲಿ ಯೋಗಿನಾಥಾಂಕಿತವಾಗಿದೆ. 'ತತ್ವಮಸಿಯಿಂದತ್ತ ಮಿಥ್ಯವಾಗಲು....' ಎಂದು ಪ್ರಾರಂಭವಾಗುವ ವಚನವು 'ವಿಶೇಷಾನುಭವ ಷಟ್‌ಸ್ಥಲ'ದಲ್ಲಿ ಯೋಗಿನಾಥಾಂಕಿತ-ವಾಗಿದೆ.

ಯೋಗಿನಾಥ ಅಂಕಿತವು ಸಿದ್ಧರಾಮನಿಗೆ ಶಿವಯೋಗಿಯಾದ ಮೇಲೆಯೇ ಹೊಳೆದಿರಬೇಕೇನೊ! ಎಂದೂ, ಯೋಗಿನಾಥ ಮತ್ತು ಚೆನ್ನಬಸವಣ್ಣ ಇವರಲ್ಲಿ ಅವಿನಾಭಾವವಿರಬೇಕು, ಅಭಿನ್ನತೆಯಿರಬೇಕೆಂದು ತೋರುತ್ತದೆ ಎಂದೂ ಡಾ. ಆರ್.ಸಿ. ಹಿರೇಮಠ ಅವರು ಅಭಿಪ್ರಾಯಪಡುವರು.[೩] ಈ ಅಭಿಪ್ರಾಯದಲ್ಲಿ ಸತ್ಯಾಂಶವಿದೆ. ಸಾಮಾನ್ಯವಾಗಿ ಯೋಗಿನಾಥ ಅಂಕಿತವನ್ನು ತ್ರಿವಿಧಿಗಳಿಗೆ ಬಳಸಿರುವಂತೆ ಕಂಡುಬರುತ್ತದೆ. ವಚನಗಳಲ್ಲಿ ಯೋಗಿನಾಥ ಅಂಕಿತ ಕ್ವಚಿತ್ತಾಗಿ ಸೇರ್ಪಡೆ ಮಾಡಿರಬಹುದು. ವಿಶೇಷವೆಂದರೆ, 'ಕಪಿಲಸಿದ್ಧಮಲ್ಲಿಕಾರ್ಜುನ' 'ಯೋಗಿನಾಥ' ಎರಡೂ ಅಂಕಿತಗಳು ಒಮ್ಮೆಗೆ ಕೆಲವು ವಚನಗಳಲ್ಲಿ ಕಂಡುಬಂದಿರುವುದು (ಉದಾಹರಣೆಗೆ ವ. ೧೩೦೬, ೧೩೦೭, ೧೩೧೨, ೧೩೧೭, ೧೩೨೨). ಇಲ್ಲಿ ಎರಡೂ ಅಂಕಿತಗಳು ಉಲ್ಲೇಖಿತ

೩. ಸಿದ್ಧರಾಮೇಶ್ವರರ ವಚನಗಳು, ಪ್ರಸ್ತಾವನೆ, ಪು. ೨೧.

ವಚನಗಳಲ್ಲಿ ಸಹಜವೆನ್ನುವಂತೆ ಬಂದಿವೆ. ಉದಾಹರಣೆಗೆ ಕೆಳಗಿನ ವಚನವನ್ನು ಪರಿಭಾವಿಸಬಹುದು.

ಯೋಗಿನಾಥನ ಒಲುಮೆ ಯೋಗಿಯಾದವಂಗಲ್ಲದೆ
ಭೋಗಿಯಾದಾತಂಗೆಲ್ಲಿಹುದಯ್ಯಾ?
ಪಂಚಮಸ್ವರಪಾಯತ ಕೋಗಿಲೆಗಲ್ಲದೆ ಕಾಗೆಗೆಲ್ಲಿಹುದೊ?
ಕಪಿಲಸಿದ್ದಮಲ್ಲಿಕಾರ್ಜುನ ಯೋಗಿನಾಥಾ.

ಕೆರೆಯ ಅಗಳುವ ಅಣ್ಣಂಗಳೆಲ್ಲ
ಮೂಲೋಕದೆರೆಯನ ಪಾದದಲ್ಲಿ ಬಿದ್ದು
ಹೊರಳಾಡುತ್ತಾರೆ ನೋಡಾ!
ದೊರೆಯ ಮಾರಾರಿಯನರಿದು ತ್ರಿಪುರಾರಿ ತಾವಾಗರು ನೋಡಾ!
ಕಪಿಲಸಿದ್ಧ ಮಲ್ಲಿಕಾರ್ಜುನ ಯೋಗಿನಾಥಾ.

ಸಿದ್ಧರಾಮೇಶ್ವರರು ನಿರೂಪಿಸಿದ ಷಟ್‌ಸ್ಥಲ ವಚನಗಳು-ಕಾಗದದ ಪ್ರತಿ, ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ವಿಭಾಗದ ೭೫೭ನೇ ನಂಬರಿನ ಪ್ರತಿ. ಇದಕ್ಕೆ ಸಮಾನವಾದ ಪ್ರತಿ ೭೬೦ನೇ ನಂಬರಿನದು. ಶ್ರೀ ಪಿ.ಎಂ. ಗಿರಿರಾಜು ಅವರು ಹೇಳುವ ಸಿದ್ಧರಾಮೇಶ್ವರರ ೮೪೮ ಖೋಟಾ ವಚನಗಳಲ್ಲಿ ಬಹುಪಾಲು ಇಲ್ಲಿ ಸಾಚಾ ವಚನಗಳಾಗಿವೆ. ಶ್ರೀಯುತರು ೭೫೭ ಮತ್ತು ೭೬೦ನೇ ನಂಬರಿನ ಕಾಗದವ ಪ್ರತಿಗಳು ಸಂಶಯಾತೀತವಲ್ಲದ ಪ್ರತಿಗಳೆಂದು ಪರಿಗಣಿಸುವರು. ಕಾಗದದ ಪ್ರತಿಗಳು ನಂಬಿಕೆಗೆ ಅರ್ಹವಲ್ಲವೆನ್ನುವ ಅವರ ತೀರ್ಮಾನ ಸಾಧುವಾದುದಲ್ಲ ; ಕಾಲ ನಮೂದಿತವಲ್ಲದ ಕಾಗದದ ಪ್ರತಿಗಳು ಇತ್ತೀಚಿನವೆನ್ನುವ ಅವರ ತೀರ್ಮಾನವೂ ಸಹ ಆತುರದ್ದು. ಎಲ್ಲ ಪ್ರತಿಕಾರರು ತಾವು ನಕಲು ಮಾಡಲು. ಆಧರಿಸಿದ ಪ್ರತಿಗಳ ವಿವರಗಳನ್ನು ನೀಡಿಲ್ಲ. ಹೀಗಾಗಿ, ಒಂದು ಕಾಗದದ ಪ್ರತಿ ಪ್ರಾಚೀನ ಪ್ರತಿಯೊಂದನ್ನು ಮೂಲ ಆಕರವಾಗಿ ಏಕೆ ಹೊಂದಿರಬಾರದು? ಶ್ರೀ ಪಿ.ಎಂ. ಗಿರಿರಾಜುರವರು ನಂಬಿಕೆಗೆ ಅರ್ಹವಲ್ಲವೆಂದು ತಿರಸ್ಕರಿಸಿರುವ ೭೫೭ನೇ ನಂಬರಿನ ಕಾಗದದ ಪ್ರತಿಯ ಒಂದು ವಚನವನ್ನು ಪರಿಶೀಲಿಸೋಣ:

ಇಂದ್ರ ನೋಡುವಡೆ ಭಗದೇಹಿ;
ಚಂದ್ರ ನೋಡುವಡೆ ಗುರುಪತ್ನಿಗಮನಿ;
ಉಪೇಂದ್ರ ನೋಡುವಡೆ ಬಾರದ ಭವದಲ್ಲಿ ಬಂದ ಅವತಾರಿ.
ಬ್ರಹ್ಮ ನೋಡುವಡೆ ಸ್ವಪುತ್ರೀಪತಿ;
ಮುನಿಗಣ ನೋಡುವಡೆ ಕುಲಹೀನರು;
ಗಣಪತಿ ನೋಡುವಡೆ ಗಜಾನನ;
ವೀರಭದ್ರ ನೋಡುವಡೆ ಮಹಪ್ರಳಯಾಗ್ನಿ ಸಮಕ್ರೋಧಿ;
ಷಣ್ಮುಖ ನೋಡುವಡೆ ತಾರಕಧ್ವಂಸಿ-
ಇವರೆಲ್ಲರು ಎಮ್ಮ ಪೂಜೆಗೆ ಬಾರರು.
ನೀ ನೋಡುವಡೆ ಶ್ಮಶಾನವಾಸಿ, ರುಂಡಮಾಲಾದ್ಯಲಂಕಾರ;
ನಿನ್ನ ವಾಹನ ಬಿದಂಗ ಆದಿವೃಷಭ.
ನಿರೂಪಿಸಾ, ಕಪಿಲಸಿದ್ಧಮಲ್ಲಿಕಾರ್ಜುನಾ.

ಈ ವಚನವು ರಾಘವಾಂಕನ 'ಸಿದ್ಧರಾಮ ಚಾರಿತ್ರ'ದಲ್ಲಿ (ಸಂಧಿ ೩, ಪದ್ಯ ೨೨) ಷಟ್ಪದಿ ರೂಪತಾಳಿದೆ.* ರಾಘವಾಂಕನು 'ಸಿದ್ಧರಾಮ ಚಾರಿತ್ರ' ರಚಿಸುವಾಗ ಸಿದ್ಧರಾಮೇಶ್ವರರ ವಚನಗಳನ್ನು ಓದಿ ಪ್ರಭಾವಿತನಾಗಿರುವಂತಿದೆ. ಹಲವೆಡೆ ಅವನು ಸಿದ್ಧರಾಮೇಶ್ವರರ ವಚನಗಳನ್ನು ಉಚಿತವೆನಿಸುವಷ್ಟು ಪ್ರಮಾಣದಲ್ಲಿ ಷಟ್ಪದಿಗೆ ರೂಪಾಂತರಿಸುವನು. ಉದಾಹರಣೆಗೆ

**ವಚನ**

ಸಂಸಾರವೆಂಬ ಘೋರ ಕಾಂತಾರದೊಳಗೆನ್ನನಾಸುರದಿ
ಬಿಡದಿರಾ ಬೊಪ್ಪ.
ಎನ್ನ ಬೆಂಬಳಿಯೊಳಿರ್ದು ಸಾಕಾ ಬೊಪ್ಪ.

**ಷಟ್ಪದಿ**

ಹಿರಿದೆನಿಪ ಘೋರ ಸಂಸಾರದಾರಣ್ಯದೊಳು
ಹರವರಿಯ ಕಾಮನೆಂದೆಂಬ ಬೇಂಟೆಯ ಬೇಡ
ನುರವಣೆಯನನ್ಯಾಯ ಮಾಣಿಸೈ ಎಂಬ ಗೀತವ ಹಾಡಿ ಸುಖದೊಳಿರಲು
(೪.೨೫)

**ವಚನ**

ಕಂಡೆನಯ್ಯಾ, ನೀನೊಡ್ಡಿದೊಡ್ಡಣೆಯ,
ಕಿರಿಕಿರಿದಾಗಿ ತರಿದಡೆ ಹಿರಿಹಿರಿದಾಗಿ ನೆನೆವೆನು;
ಕಾಯವ ಬೇಡಿದಡೀವೆನು.
ಪ್ರಾಣ ನಿಮ್ಮದಾಗಿ, ಉಳಿದ ಹಂಗು ನಮಗಿಲ್ಲ,
ಕಪಿಲಸಿದ್ಧಮಲ್ಲಿನಾಥಯ್ಯಾ.

ಷಟ್ಪದಿ

ಅಯ್ಯ ಕೇಳಯ್ಯ ನೀನೊಡ್ಡಿದೊಡ್ಡಿದ ಸಮಂ
ಮೆಯ್ಯನಿರಿದಿರಿದು ಕಿರಿಕಿರಿದಾಗಿ ಕಡಿದಡಂ
ಅಯ್ಯಯೆಂದಳುಕೆ ಹಿರಿಹಿರಿದಾಗಿ ನೆನೆವೆ ಕೇಳಯ್ಯ ಅಯ್ಯಯೆನುತ
ಕಯ್ಯ ಲಾಕುಳವನಂದಲುಗುತ್ತ ಹಾಡುತ್ತ
ಲೊಯ್ಯನೀ ಕಾಯವಿವಳಿಗೆ ಜೀವ ನಿಮಗೆಂದು
ಸಯ್ಯಮಿವ್ರತನಿರತ ಶ್ರೀ ಸಿದ್ಧರಾಮನಾಥಂ ಹಾಡಿದಂ ಗೀತವ (೬.೬)

ಮೇಲೆ ಉಲ್ಲೇಖಿಸಿರುವ 'ಇಂದ್ರ ನೋಡುವಡೆ ಭಗದೇಹಿ' ಎಂದು ಪ್ರಾರಂಭವಾಗುವ ವಚನವು 'ಸಿದ್ಧರಾಮ ಚಾರಿತ್ರ'ದಲ್ಲಿ ಷಟ್ಪದಿಗೆ ರೂಪಾಂತರಗೊಂಡಿರುವುದನ್ನು ಪರಿಶೀಲಿಸೋಣ:

ಸರಸಿಜಸುತಂ ಸ್ವಪುತ್ರೀವರಂ ವಾಯು ವಿಷ
ಧರನಿಕರಪೀತಾವಶೇಷನಿನನತ್ಯುಷ್ಣ

---

* ಈ ಸಂಗತಿಯನ್ನು ತಿಳಿಸಿ ಉಪಕರಿಸಿದವರು ಮಾನ್ಯ ಗುರುಗಳಾದ ಡಾ. ಎಂ. ಚಿದಾನಂದ ಮೂರ್ತಿಯವರು.

ಕರನಿಂದು ದೋಷಾಕರಂ ವಿಷ್ಣು ಪುಷ್ಪಾಕ್ಷನಗ್ನಿ ತಾಂ ಸರ್ವಭಕ್ಷಂ
ವರಮುನಿಗಳೆಲ್ಲ ಕುಸ್ಥಾನಜಾತರು ಮಹಾ
ಸುರಪನತಿಜಾರನಿಂತಿವರಾಗದಿಂದೆಮ್ಮ
ಸರಿ ಸರ್ವಧರ್ಮರೂಪಂ ವೃಷಭನಾಚಾರ್ಯನಾದಪಂ ಪೋಗೆಂದನು

'ಇಂದ್ರ ನೋಡುವಡೆ ಭಗದೇಹಿ' ಎಂಬುದು 'ಮಹಾಸುರಪನತಿಜಾರಂ' ಎಂದಾಗಿಯೂ, 'ಚಂದ್ರ ನೋಡುವಡೆ ಗುರುಪತ್ನಿಗಮನಿ' ಎಂಬುದು 'ಇಂದು ದೋಷಾಕರಂ' ಎಂದಾಗಿಯೂ, 'ಉಪೇಂದ್ರ ನೋಡುವಡೆ ಬಾರದ ಭವದಲ್ಲಿ ಬಂದ ಅವತಾರಿ' ಎಂಬುದು ವಿಷ್ಣು ಪುಷ್ಪಾಕ್ಷಂ ಎಂದಾಗಿಯೂ, 'ಬ್ರಹ್ಮ ನೋಡುವಡೆ ಸ್ವಪುತ್ರೀ ಪತಿ' ಎಂಬುದು 'ಸರಸಿಜಸುತಂ ಸ್ವಪುತ್ರೀವರಂ' ಎಂದಾಗಿಯೂ, 'ಮುನಿಗಣ ನೋಡುವಡೆ ಕುಲಹೀನರು' ಎಂಬುದು 'ವರಮುನಿಗಳೆಲ್ಲ ಕುಸ್ಥಾನಜಾತರು' ಎಂದಾಗಿಯೂ ರೂಪಾಂತರಗೊಂಡಿರುವುದು ಗಮನಾರ್ಹ. ವಚನವು ಇನ್ನಷ್ಟು ಮುಂದುವರೆದಿದೆ-ಯಾದರೂ ರಾಘವಾಂಕನು ವಚನದಲ್ಲಿ ತನಗೆ ಅಗತ್ಯವೆನಿಸುವಷ್ಟು ಭಾಗಗಳನ್ನು ಮಾತ್ರ ಬಳಸಿಕೊಂಡಿರುವನು. ೭೫೭ ನೇ ನಂಬರಿನ ಕಾಗದದ ಪ್ರತಿ ಶ್ರೀ ಪಿ.ಎಂ. ಗಿರಿರಾಜುರವರ ಪ್ರಕಾರ ಖೋಟಾ ವಚನಗಳನ್ನೊಳಗೊಂಡ ಪ್ರತಿಯಾಗಿದ್ದರೆ 'ಇಂದ್ರ ನೋಡುವಡೆ ಭಗದೇಹಿ....' ಎಂದು ಪ್ರಾರಂಭವಾಗುವ ವಚನ 'ಸಿದ್ಧರಾಮ ಚಾರಿತ್ರ'ದಲ್ಲಿ ಉಲ್ಲೇಖಗೊಳ್ಳುವುದು ಹೇಗೆ ಸಾಧ್ಯ? 'ಸಿದ್ಧರಾಮ ಚಾರಿತ್ರ'ದಲ್ಲಿ ಈ ವಚನ ರೂಪಾಂತರಗೊಂಡು ಬಂದಿರಬೇಕಾದರೆ ರಾಘವಾಂಕನ ಈ ವಚನ ಆಕಾಲಕ್ಕೆ ಬಳಕೆಯಲ್ಲಿದ್ದಿರಬೇಕು. ಈ ವಾಸ್ತವ ಸತ್ಯವನ್ನು ಒಪ್ಪಿಕೊಂಡರೆ, ೭೫೭ನೇ ನಂಬರಿನ ಕಾಗದದ ಪ್ರತಿ ಖೋಟಾ ವಚನಗಳನ್ನೊಳಗೊಂಡದ್ದೆಂಬ ವಾದ ಅಸಮಂಜಸವಾಗುತ್ತದೆ. ನಮ್ಮ ವಾದಕ್ಕೆ ಉಪಷ್ಟಂಭಕವಾಗಿ ಇನ್ನಷ್ಟು ಆಧಾರವನ್ನು ಕೊಡಬಹುದು. ಸಿದ್ಧರಾಮೇಶ್ವರರು ತಾವು ಮಾಡಿದ ಎರಡು ಪವಾಡಗಳನ್ನು ಪ್ರಾಸಂಗಿಕವಾಗಿ ತಮ್ಮ ವಚನಗಳಲ್ಲಿ ಉಲ್ಲೇಖಿಸಿರುವುದು. ಮೊದಲನೆಯದು, ಏಲೇಶನಿಗೆ ಪ್ರಾಣವಿತ್ತುದು. ಮಾಡದುದ ಮಾಡಲು ದೈವಬಲವೆಂಬುದೀಲೋಕ. ಎಲೆ ಕಪಿಲಸಿದ್ಧಮಲ್ಲಯ್ಯಾ, ಏಲೇಶಂಗೆ ಪ್ರಾಣವ ಕೊಟ್ಟುದಾವ ಬಲ ಹೇಳಾ, ಸೆರಗೊಡ್ಡಿ ಬೇಡುವೆ. ಈ ವಚನವು ೭೫೭ನೇ ನಂಬರಿನ ಪ್ರತಿಯಲ್ಲಿ ಬಂದಿದ್ದು, 'ಸಿದ್ಧರಾಮ ಚಾರಿತ್ರ'ದಲ್ಲಿ ಈ ಪವಾಡ ವಿವರಣೆಗೊಂಡಿದೆ (ನೋಡಿ ಸಂ. ೯. ಪ. ೨೭-೩೫). ಎರಡನೆಯದು ವಿಷದ ಪವಾಡ. 'ವಿಷ ಉಂಡು ದಣಿಯಲಾರದೆ ವಿಷ ನೈವೇದ್ಯವ ಮಾಡಿಕೊಂಡ ನೋಡಾ, ಈ ದೇವ' ಎಂಬ ಈ ಸಾಲು ೭೫೭ ನೇ ನಂಬರಿನ ಪ್ರತಿಯ ವಚನವೊಂದರಲ್ಲಿ ಬಂದಿದ್ದು 'ಸಿದ್ಧರಾಮ ಚಾರಿತ್ರ'ದಲ್ಲಿ ಈ ಪವಾಡ ವಿವರಣೆಗೊಂಡಿದೆ (ನೋಡಿ: ಸಂ. ೫. ಪ. ೯-೧೬). ನರಕದಲ್ಲಿದ್ದ ಬಿಲ್ಲೇಶ ಬೊಮ್ಮಯ್ಯನನ್ನು ಹಾಗೂ ಇತರ ನರಕಿಗಳನ್ನು ಅಲ್ಲಿಂದ ಮೇಲೆತ್ತಲು ಸಹಸ್ರ ಕಂಡುಗ ಕಪಿಲೆಯಮೃತವನ್ನು ಶಿವನು ಲಂಚವಾಗಿ ಪಡೆದ ಪ್ರಸಂಗ 'ಸಿದ್ಧರಾಮ ಚಾರಿತ್ರ'ದಲ್ಲಿ ವರ್ಣಿತವಾಗಿದೆ. (ಸಂ. ೪. ಪ. ೩೭-೩೯). ಇಲ್ಲಿ ಶಿವನು ಲಂಚವಾಗಿ ಕೇಳುವುದು ಆದಿಲಿಂಗಕ್ಕೆ ೧೨ ಸಾವಿರ

ಸೂಲಿಗೆ ತುಪ್ಪದ ಅಭಿಷೇಕ ಹಾಗೂ ನಿರ್ಧನಿಕರಾದ ತಂದೆ-ತಾಯಿಯರ ಸಾವಿರ ಕನ್ಯೆಯರ ಕಲ್ಯಾಣ ಕಾರ್ಯವನ್ನು.

ಮೇಲಿನ ಆಧಾರಗಳಿಂದ ಶ್ರೀ ಪಿ.ಎಂ. ಗಿರಿರಾಜುರವರು ಪಟ್ಟಿಮಾಡಿರುವ ಖೋಟಾ ವಚನಗಳನ್ನು ಅವರು ಹೇಳಿರುವ ಕಾರಣಕ್ಕಾಗಿ ಸಾರಾಸಗಟು ಖೋಟಾ ವಚನಗಳೆಂದು ಕೈಬಿಡಲಾಗದು. ಸಿದ್ಧರಾಮೇಶ್ವರರ ವಚನಗಳ ಶೈಲಿಯನ್ನು ಚೆನ್ನಾಗಿ ಅಧ್ಯಯನ ಮಾಡಿದವರಿಗೆ ಖೋಟಾ ವಚನಗಳೆಂದು ತಲೆಪಟ್ಟಿ ಅಂಟಿಸಿಕೊಂಡಿರುವ ವಚನಗಳು ಖೋಟಾ ಆಗಿರಲಿಕ್ಕೆ ಸಾಧ್ಯವಿಲ್ಲ. ಖೋಟಾ ವಚನಗಳೆಂದು ಪಟ್ಟಿ ಮಾಡಿದವುಗಳಲ್ಲಿ ಬಹಳಷ್ಟು ವಚನಗಳು ಸಾಹಿತ್ಯಕವಾಗಿ ಮೌಲಿಕವಾಗಿವೆ. 'ಅರುವತ್ತೆಂಟು ಸಾವಿರ ವಚನಂಗಳ ಹಾಡಿ ಹಾಡಿ ಸೋತಿತೆನ್ನ ಮನ ನೋಡಯ್ಯಾ'; 'ಅಲ್ಲಯ್ಯಗಳ ವಚನ ಎರಡೆಂಬತ್ತು ಕೋಟಿ...'; 'ಎಲ್ಲ ಪ್ರಮಥರು ಲಿಂಗವ ಧರಿಸುತ್ತಿರಲು....' ಇಂತಹ ಐತಿಹಾಸಿಕ ಮಹತ್ವವುಳ್ಳ ವಚನಗಳೂ ಖೋಟಾ ವಚನಗಳ ಪಟ್ಟಿಗೆ ಸೇರುವುದಾದರೆ ಹೇಳುವುದಾದರೂ ಏನಿದೆ? ಒಂದು ವೇಳೆ ಶ್ರೀ ಪಿ.ಎಂ. ಗಿರಿರಾಜುರವರು ಹೇಳುವ ಖೋಟಾ ವಚನಗಳನ್ನೆಲ್ಲಾ ತೆಗೆದುಬಿಟ್ಟರೆ ಸಿದ್ಧರಾಮೇಶ್ವರರ ವಚನಗಳ ಸ್ವರೂಪ ಹೇಗಿರಬಹುದು- ರಕ್ತ-ಮಾಂಸಗಳಿಲ್ಲದಂತ ಅಸ್ಥಿಪಂಜರದಂತೆ!

ಇನ್ನೊಂದು ಮಾತನ್ನು ನಾವಿಲ್ಲಿ ಸ್ಪಷ್ಟಪಡಿಸಬೇಕಾಗಿದೆ : ಯೋಗಿನಾಥಾಂಕಿತಗಳು ಸಿದ್ಧರಾಮೇಶ್ವರರವಲ್ಲ ಎಂಬ ಅಭಿಪ್ರಾಯ ನಮ್ಮದಲ್ಲ. ಅವುಗಳನ್ನು ಕೈಬಿಡಬೇಕು ಎಂಬ ಉದ್ದೇಶವೂ ನಮ್ಮದಲ್ಲ. ಯೋಗಿನಾಥಾಂಕಿತದಲ್ಲಿ ಬಂದಿರುವವು ತ್ರಿಪದಿಗಳು-ಹಾಡುಗಳು. ಅವನ್ನು ಹಾಗೂ ಸಿದ್ಧರಾಮೇಶ್ವರರ ಸ್ವರಬೊಲ್ಲಿಗಳನ್ನು ಪ್ರತ್ಯೇಕವಾಗಿ ಬೇರೆ ಸಂದರ್ಭದಲ್ಲಿ ಪ್ರಕಟಿಸಬೇಕೇ ಹೊರತು ವಚನಗಳ ಜೊತೆ ಸೇರಿಸುವುದು ಬೇಡವೆಂದು ಸಮಗ್ರ ವಚನಸಾಹಿತ್ಯದ ಜನಪ್ರಿಯ ಆವೃತ್ತಿಯ ಸಂಪಾದಕ ಮಂಡಲಿ ತೀರ್ಮಾನಿಸಿರುವುದರಿಂದ ಅವನ್ನು ಇಲ್ಲಿ ಕೊಡಲಾಗಿಲ್ಲ.

೭೫೭ನೇ ನಂಬರಿನ ಕಾಗದದ ಪ್ರತಿ ಷಟ್‌ಸ್ಥಲ ವಚನಗಳ ಪ್ರತಿ. ಸಂಕಲನಕಾರ ಹಾಗೆಂದು ಕರೆದು ವಚನಗಳನ್ನು ಜೋಡಿಸಿದ್ದರೂ ಷಟ್‌ಸ್ಥಲಗಳ ಉಲ್ಲೇಖ ವಿಂಗಡಣೆಯಲ್ಲಿ ಕಂಡುಬರುವುದಿಲ್ಲ. (ಸ್ಥಲ ವಿಂಗಡಣೆಯಲ್ಲಿ ಅವನದೇ ಆದ ಒಂದು ವಿಧಾನವಿರುವಂತಿದೆ.) ನಾವು ಈ ಪ್ರತಿಯಲ್ಲಿರುವಂತೆಯೇ ವಚನಗಳನ್ನು ಕ್ರಮಾಗತವಾಗಿ ಕೊಟ್ಟಿರುವೆವು. ಈ ಪ್ರತಿಯಲ್ಲಿ ಸಂಕಲನಕಾರರು ಸಿದ್ಧರಾಮೇಶ್ವರರ ಅಂಕಿತವಲ್ಲದ ಕೆಲವು ವಚನಗಳನ್ನೂ ಸೇರಿಸಿರುವನು. ಉದಾಹರಣೆಗೆ

| ವಚನ | ಅಂಕಿತ |
|---|---|
| "ಎನ್ನ ಕಾಯ ಪ್ರಸಾದವಾಯಿತ್ತು...' | ಘನಲಿಂಗ ಮೋಹದ ಚೆನ್ನಮಲ್ಲಿಕಾರ್ಜುನಯ್ಯಾ |
| "ಲಿಂಗಸುಖದಲ್ಲಿ ಮನ ವೇದ್ಯವಾಯಿತ್ತು, ಇನ್ನೆಂತಯ್ಯಾ...." | ಚೆನ್ನಮಲ್ಲಿಕಾರ್ಜುನಪ್ರಭುವೆ |

"ಕಾಯ ಪ್ರಸಾದವೆನ್ನ ಧನ ಪ್ರಸಾದವೆನ್ನ...." ಚೆನ್ನಮಲ್ಲಿಕಾರ್ಜುನಯ್ಯಾ
"ಪಾತಾಳವಿತ್ತಿತ್ತ ಪಾದಂಗಳತ್ತತ್ತ...." ಚೆನ್ನಮಲ್ಲಿಕಾರ್ಜುನಯ್ಯಾ
"ಒಪ್ಪುವ ಶ್ರೀವಿಭೂತಿಯ ನೊಸಲಲ್ಲಿ ಧರಿಸಿ...." ಚೆನ್ನಮಲ್ಲಿಕಾರ್ಜುನಾ
"ಓಂ ಎಂದಲ್ಲಿ ನಿರಾಕಾರವಾದೆಯಲ್ಲ...." ನಿಷ್ಕಳಂಕ ಮಲ್ಲಿಕಾರ್ಜುನಾ
"ಎನ್ನ ತನ್ನವನೆನಿಸಿ ಮನ್ನಿಸಿದ...." ಶ್ರೀಗುರುಮಲ್ಲಿಕಾರ್ಜುನಾ
"ಕಲ್ಪಿತೋದಕ ಒಂದು ಅರ್ಪಣೋದಕ...." ಶ್ರೀಗುರುಮಲ್ಲಿಕಾರ್ಜುನಾ
"ಹಿತವಿದೆ ಸಕಲಲೋಕದ ಜನ್ಮಕ್ಕೆ...." ಶ್ರೀಮಲ್ಲಿಕಾರ್ಜುನಾ
"ಏಳುಕೋಟಿ ಮಹಾಮಂತ್ರ...." ಸದ್ಗುರು ಮಲ್ಲಿಕಾರ್ಜುನ

ಸಿದ್ದರಾಮೇಶ್ವರರ ವಚನಗಳನ್ನು ಸಂಪಾದಿಸುವಾಗ ಒಂದು ವಚನ ಬೇರೆ ಹಸ್ತಪ್ರತಿಗಳಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸಗಳಿಗೆ ಒಳಗಾಗಿ ಮತ್ತೊಂದು ಸ್ವತಂತ್ರ ವಚನವಾಗಿ ಬಂದಿರುವುದು ನಮಗೆ ಕಂಡುಬಂದಿದೆ. ಉದಾಹರಣೆಗೆ 'ವ್ಯಾಪ್ತದಿಂ ದಿನ ರಾತ್ರಿಯಗಳಲ್ಲಿಯು....' ಎಂಬ ವಚನದ (ವ. ೭೩೧) ಉತ್ತರಾರ್ಧವು (ಶಿವಾಚಾರ ಸಂಪನ್ನರಾಗಿ....) ಒಂದು ಸ್ವತಂತ್ರ ವಚನವಾಗಿ 'ಪ್ರಸಾದಿಸ್ಥಲದ ವಚನಗಳು' ಸಂಕಲನ ಗ್ರಂಥದಲ್ಲಿ ಕಂಡುಬಂದಿದೆ. 'ಉಸುರ ಹಿಡಿದು ಮಜ್ಜನಕ್ಕೆರವೆನಯ್ಯಾ....' (ವ. ೨೨೧) ಎಂದು ಪ್ರಾರಂಭವಾಗುವ ವಚನವು 'ಎನ್ನ ತನುವೆ ಅಗ್ಗವಣೆಯ ಬಿಂದಿಗೆ ಮನವೆ ಸಿಂಹಾಸನ' ಎಂಬ ಒಂದು ಸಾಲನ್ನು ಪ್ರಾರಂಭದಲ್ಲಿ ಹೊಸದಾಗಿ ಸೇರಿಸಿಕೊಂಡು ಒಂದು ಸ್ವತಂತ್ರ ವಚನವಾಗಿ ಕಂಡುಬಂದಿದೆ. 'ಎನಿಸೆನಿಸಾದಳೆ ಅನಿಸರಲ್ಲಿ ನಿಲ್ಲಳು....' (ವ. ೨೪೫) ಎಂಬ ವಚನವು 'ಎನಿತಾದಡನಿತರಲ್ಲಿಯೂ ನಿಲ್ಲಳು....' ಎಂದು ಸ್ವಲ್ಪ ಪಾಠ ವ್ಯತ್ಯಾಸದೊಂದಿಗೆ ಒಂದು ಸ್ವತಂತ್ರ ವಚನವಾಗಿ ಕಂಡುಬಂದಿದೆ. 'ಎಮ್ಮ ನಲ್ಲ ಮನೆಯೊಳಗೆ ಏಕಾಂತಂಬೊಕ್ಕಹನು....' (ವ. ೨೪೭) ಎಂಬ ವಚನವು 'ಎನ್ನ ನಲ್ಲನೆನ್ನಮನದೊಳಗೆ...." ಎಂದು ಸ್ವಲ್ಪ ಪಾಠ ವ್ಯತ್ಯಾಸದೊಂದಿಗೆ ಒಂದು ಸ್ವತಂತ್ರ ವಚನವಾಗಿ ಕಂಡುಬಂದಿದೆ. 'ಅಯ್ಯಾ ನೀವು ಕೈಯ ಬಿಚ್ಚಲೊಡನೆ ಅಣ್ಣ ಕೇಳಿರಣ್ಣ, ಬ್ರಹ್ಮ ತಾ ಮೈಮರೆದ ವಿಷ್ಣು ತಾ ಮರೆದೊರಗಿದ ವೇದಗಳು ತಮತಮಗೆ ದೆಸೆದೆಸೆಗೆ ಬಾಯಬಿಟ್ಟವಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನನ ಮೈಯ ಶಬ್ದಕ್ಕೆ' (ವ. ೮೧) ಎಂಬ ವಚನವು ಪಾಠ ವ್ಯತ್ಯಾಸದೊಂದಿಗೆ ಬೇರೊಂದು ಸ್ವತಂತ್ರ ವಚನವಾಗಿ (ವ. ೮೭೯) ಹೀಗೆ ಬಂದಿದೆ. 'ಅಯ್ಯಾ ನಿಮ್ಮ ಕೈ ಬಿರ್ಚಲೊಡನೆ ಬ್ರಹ್ಮಾಂಡಂಗಳು ತಳತಳಿಸುತ್ತವೆ. ಬ್ರಹ್ಮ ಮರೆದನು, ವಿಷ್ಣು ತಾನೊರಗಿದನು, ವೇದಂಗಳು ದೆಸೆದೆಸೆಗೆ ಬಾಯ್ಬಿಡಲು, ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ, ನಿಮ್ಮ ಕೈಯ ಶಬ್ದದ ಹವಣೆಂತುಟು.'

ಮುದ್ರಿತ ಶ್ರೀ ಸಿದ್ಧರಾಮೇಶ್ವರರ ವಚನಗಳು ಗ್ರಂಥದಲ್ಲಿ (ಸಂಪಾದಕರು: ಡಾ. ಆರ್.ಸಿ. ಹಿರೇಮಠ) ವ. ೧೩೧೩ ರಿಂದ ೧೩೧೯ ರವರೆವಿಗೆ ಬಂದಿರುವ ಏಳು ವಚನಗಳು 'ಸದ್ಗುರು ಮಲ್ಲಿಕಾರ್ಜುನ' ಎಂಬ ಅಂಕಿತವನ್ನು ಒಳಗೊಂಡಿವೆ. ವ. ೩೬೩ 'ಶ್ರೀಗುರುಮಲ್ಲೇಶ್ವರಾ' ಎಂಬ ಅಂಕಿತವನ್ನೊಳಗೊಂಡಿದೆ. ವ. ೩೬೨ 'ಶ್ರೀಗುರುಮಲ್ಲಿಕಾರ್ಜುನ' ಎಂಬ ಅಂಕಿತವನ್ನು ಒಳಗೊಂಡಿದೆ. ವ. ೧೩೨೭

'ಮಲ್ಲಿಕಾರ್ಜುನಾ' ಎಂಬ ಅಂಕಿತವನ್ನೊಳಗೊಂಡಿದೆ. ಇವು ಸಿದ್ಧರಾಮೇಶ್ವರ ವಚನಗಳೆನ್ನುವುದರಲ್ಲಿ ಸಂದೇಹ, ಆದ್ದರಿಂದ ಕೈಬಿಡಲಾಗಿದೆ. ನಮ್ಮ ಗಮನಕ್ಕೆ ಬಂದ 'ಕುತ್ತಿಗೆಯನೆತ್ತಿ ಸ್ಥಾವರಲಿಂಗ್ಕಕೆ ಅಷ್ಟವಿಧಾರ್ಚನೆ....' ಎಂದು ಪ್ರಾರಂಭವಾಗುವ ವಚನವು 'ಸದ್ಗುರು ಮಲ್ಲಿಕಾರ್ಜುನ' ಎಂಬ ಅಂಕಿತದ್ದು ; 'ಆರು ಗುಣವು ಹಿಂಗಿ ಭಕ್ತ ಲಿಂಗಸಂಗಿಯಾಗಿ....' ಎಂದು ಪ್ರಾರಂಭವಾಗುವ ವಚನವು 'ಸದ್ಗುರು ಚೆನ್ನಮಲ್ಲೇಶ್ವರ' ಎಂಬ ಅಂಕಿತದ್ದು ; 'ನಿರ್ಮಲನ ಸಲಹಲ್ಕೆ ನಿರ್ಮಾಯ ಬಂದನೈ....' ಎಂದು ಪ್ರಾರಂಭವಾಗುವ ವಚನವು 'ಗುರು ಮಲ್ಲಿಕಾರ್ಜುನಾ' ಎಂಬ ಅಂಕಿತದ್ದು ; 'ಎನ್ನ ತನ್ನವನೆನಿಸಿ ಮನ್ನಿಸಿದ ಭಕ್ತಿಯೊಳು...' 'ನಾದಬಿಂದುವಿನಲ್ಲಿ ಆದಿಯಕ್ಷರ ದ್ವಯವನೆಯ್ದಿಸಿದ...' 'ಆರನಾದಡೂ ಅಯ್ಯಾ ಎಂದೆನಲಾರೆ' ಎಂದು ಪ್ರಾರಂಭವಾಗುವ ವಚನಗಳು 'ಶ್ರೀ ಮಲ್ಲಿಕಾರ್ಜುನಾ' ಎಂಬ ಅಂಕಿತದ್ದು. 'ಸಂಸಾರಸಾಗರದ ನಡುಗಡಲ...' ಎಂದು ಪ್ರಾರಂಭವಾಗುವ ವಚನವು 'ಶ್ರೀ ಮಲ್ಲಿನಾಥಲಿಂಗ' ಎಂಬ ಅಂಕಿತದ್ದು. ಇವು ಸಿದ್ಧರಾಮೇಶ್ವರರ ವಚನವೆನ್ನುವುದರಲ್ಲಿ ಸಂದೇಹ, ಆದ್ದರಿಂದ ಕೈಬಿಡಲಾಗಿದೆ. 'ಕೆರೆಯು ಗಂಗೆಯೆಂದು ಅರಿಯದೆ ಸ್ಥಾಪಿಸಿದೆನಲಾ....' ಎಂದು ಪ್ರಾರಂಭವಾಗುವ ವಚನವು ಸಿದ್ಧರಾಮೇಶ್ವರ-ಶಾಂತಶೆಟ್ಟಿ ಇವರ ನಡುವೆ ನಡೆದ ಸಂವಾದದ ವಚನ. ವಾದದ ವಚನಗಳನ್ನು ಕೈಬಿಡಬೇಕೆಂದು ಸಂಪಾದಕ ಮಂಡಳಿ ನಿರ್ಣಯ ಕೈಗೊಂಡಿರುವ ಕಾರಣ ಈ ವಚನವನ್ನು ಬಿಡಲಾಗಿದೆ.

ಈ ಸಿದ್ಧರಾಮೇಶ್ವರ ವಚನಸಂಪುಟವು ಜನಪ್ರಿಯ ಆವೃತ್ತಿ. ಹೀಗಾಗಿ ಇದರಲ್ಲಿ ಶಕಟರೇಫದ ಬಳಕೆಯನ್ನಾಗಲೀ, ಪಾಠಾಂತರಗಳನ್ನು ಅಡಿಟಿಪ್ಪಣೆ ರೂಪದಲ್ಲಿ ಕೊಡುವುದನ್ನಾಗಲೀ ಮಾಡಿಲ್ಲ. ಸಾಧ್ಯವಾದಷ್ಟು ಹೆಚ್ಚಿನ ಸಂಖ್ಯೆಯ ಪ್ರತಿಗಳನ್ನು ಆಧರಿಸಿ ವಚನಗಳ ಶುದ್ಧಪಾಠವನ್ನು ಕೊಡುವುದು ಸಮಗ್ರ ವಚನ ಸಾಹಿತ್ಯದ ಜನಪ್ರಿಯ ಆವೃತ್ತಿಯ ಉದ್ದೇಶ. ಡಾ. ಆರ್.ಸಿ. ಹಿರೇಮಠ ಅವರು ಸಂಪಾದಿಸಿದ ವಚನಗಳಿಗಿಂತ ಈ ಸಂಪುಟದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಚನಗಳಿವೆ. ಸಮಗ್ರ ವಚನ ಸಂಪುಟದ 'ಸಿದ್ಧರಾಮೇಶ್ವರ ವಚನ ಸಂಪುಟ'ದ ಮೊದಲನೆ ಮುದ್ರಣದಲ್ಲಿ ೧೯೬೯ ವಚನಗಳಿದ್ದರೆ ಎರಡನೆ ಪರಿಷ್ಕೃತ ಮುದ್ರಣದಲ್ಲಿ ೧೯೬೨ ವಡನಗಳಿವೆ. ತುಮಕೂರು ಜಿಲ್ಲೆ ತಿಪಟೂರು ತಾಲ್ಲೂಕು ಹೊನ್ನವಳ್ಳಿಯ ಕರಿಸಿದ್ಧದೇವರ ಮಠದಲ್ಲಿ ದೊರೆತ ಆರುಸಾವಿರ ವಚನಗಳನ್ನೊಳಗೊಂಡ ಸಿದ್ಧರಾಮಯ್ಯದೇವರ ವಚನಗಳ ಕಟ್ಟು ಡಾ. ಎಂ.ಎಂ. ಕಲಬುರ್ಗಿ ಹಾಗೂ ಡಾ. ಸಾ.ಶಿ. ಮರುಳಯ್ಯನವರಿಗೆ ದೊರೆತವು. ಮಠಕ್ಕೆ ಬಂದ ಅವರಿವರು ಈ ಕಟ್ಟು ಬಿಚ್ಚಿ ತಮಗೆ ಬೇಕಾದ ಗರಿಗಳನ್ನು ಕೊಂಡೊಯ್ದು ಆರುಸಾವಿರ ವಚನಗಳ ಮೊತ್ತಗೆಯನ್ನು ೧೩೧೩ಕ್ಕೆ ಇಳಿಸಿದ್ದರು. ಇದರ ನಕಲು ಮಾಡಿ ಡಾ. ಎಂ.ಎಂ. ಕಲಬುರ್ಗಿ ಅವರು ನನಗೆ ಕೊಟ್ಟರು. ನನ್ನ ಪಾಲಿಗೆ ಇದೊಂದು ನೆಲದ ಮರೆಯ ನಿಧಾನ! ಇದರಲ್ಲಿ ಇದುವರೆವಿಗೆ ಪ್ರಕಟವಾಗದಿರುವ ಅನೇಕ ಹೊಸ ವಚನಗಳಿದ್ದುವು. ಇದರಲ್ಲಿ ಈಗಾಗಲೇ ಪ್ರಕಟವಾಗಿರುವ ವಚನಗಳನ್ನು ಹಾಗೂ ನನ್ನ ಸಂಪಾದನೆಯ ಚೌಕಟ್ಟಿಗೆ ಸೇರದ ಸ್ವರವಚನಗಳನ್ನು ಬಿಟ್ಟು ಉಳಿದವುಗಳನ್ನು ನಾನು ದ್ವಿತೀಯ ಪರಿಷ್ಕೃತ ಮುದ್ರಣದ ಸಿದ್ಧರಾಮೇಶ್ವರ ವಚನ ಸಂಪುಟಕ್ಕೆ ಸೇರಿಸಿದೆನು.

ಹೀಗಾಗಿ ಹಿಂದಿನದಕ್ಕಿಂತ ೩೧೩ ಹೆಚ್ಚಿನ ವಚನಗಳು ಬಂದಿವೆ. ಡಾ. ಎಂ.ಎಂ. ಕಲಬುರ್ಗಿ ಅವರ ಉಪಕಾರವನ್ನು ನಾನು ಅತ್ಯಂತ ಕೃತಜ್ಞತೆಯಿಂದ ಸ್ಮರಿಸುತ್ತೇನೆ. ಹಿಂದೆ ತಿಳಿಸಿರುವಂತೆ ಸಿದ್ಧರಾಮೇಶ್ವರರವಲ್ಲದ ಹಲವು ವಚನಗಳನ್ನು ಈ ಸಂಪುಟದಲ್ಲಿ ತೆಗೆದುಹಾಕಲಾಗಿದೆ. ಈ ಸಂಪುಟದಲ್ಲಿ ಬಂದಿರುವಷ್ಟೇ ವಚನಗಳು ಸಿದ್ಧರಾಮೇಶ್ವರರ ನಿಜವಾದ ವಚನಗಳೆಂದು ನಾವು ವಾದಿಸಹೋಗುವುದಿಲ್ಲ. ಸಂಶೋಧನೆಯಲ್ಲಿ ಸತ್ಯದೆಡೆಗೆ ಸಾಗುವುದು ಮುಖ್ಯವೇ ಹೊರತು ನಮ್ಮ ಪೂರ್ವಾಗ್ರಹವನ್ನು ಸಾಧಿಸುವುದಲ್ಲ. ಇಲ್ಲಿ ನನ್ನದೇ ಸರಿಯಾದುದೆನ್ನುವ ಹಠ, ಅಹಂಕಾರ ಸಲ್ಲದು. ಸತ್ಯದೆದುರು ನಾವೆಲ್ಲರೂ ಸಣ್ಣವರೇ. ಕಾಲನ ನಿರಂತರ ಪ್ರವಾಹದಲ್ಲಿ ಒಂದಲ್ಲ ಒಂದು ದಿವಸ ಸತ್ಯವನ್ನು ಮುಸುಕಿರುವ ತೆರೆ ಸರಿಯಲೇ ಬೇಕು. ಈ ಅನುಭವದ ಹಿನ್ನೆಲೆಯಲ್ಲಿ ನಾವು ನಮ್ಮ ಪ್ರಾಂಜಲ ಪ್ರಯತ್ನವನ್ನು ನಡೆಸಿರುವೆವು. ನಮ್ಮ ಸಂಪುಟದಲ್ಲಿ ತಪ್ಪುಗಳೇ ಇಲ್ಲವೆಂದಲ್ಲ, ಇರಬಹುದು. ಪ್ರಾಜ್ಞರು ಸಹೃದಯರು ಅವನ್ನು ತೋರಿಸಿಕೊಟ್ಟರೆ ಮುಂದೆ ತಿದ್ದಿಕೊಳ್ಳುವೆವು.

ಈ ಸಂಪುಟದ ಕೆಲಸ ಅತ್ಯಂತ ಜವಾಬ್ದಾರಿಯುತವಾದುದೆಂದು ನಾವು ಭಾವಿಸಿರುವೆವು. ಈ ಸಂಪುಟದ ಸಂಪಾದನೆಯ ಸಂದರ್ಭದಲ್ಲಿ ನನಗೆ ಎದುರಾದ ಸಮಸ್ಯೆಗಳು ಹಲವಾರು. ಅವನ್ನೆಲ್ಲ ಸಂಪಾದಕ ಮಂಡಲಿ ತಾಳ್ಮೆಯಿಂದ ಕೇಳಿ ಪರಿಹಾರ ತೋರಿಸಿದೆ. ಅದಕ್ಕಾಗಿ ನಾನು ಮಂಡಲಿಯ ಎಲ್ಲ ಸದಸ್ಯರಿಗೂ ಋಣಿಯಾಗಿರುವೆನು. ಸಮಸ್ಯೆಗೆ ಪರಿಹಾರ ಕಾಣದೆ ವಿಕ್ಷಿಪ್ತ ಸ್ಥಿತಿಯಲ್ಲಿದ್ದಾಗ ನನ್ನಲ್ಲಿ ನೈತಿಕವಾಗಿ ಧೈರ್ಯ ತುಂಬಿದವರು ಡಾ. ಎಂ. ಚಿದಾನಂದಮೂರ್ತಿಯವರು ಹಾಗೂ ಆತ್ಮೀಯ ಮಿತ್ರರಾದ ಡಾ. ಎಂ.ಎಂ. ಕಲ್ಬುರ್ಗಿ ಅವರು. ನಿಜವಾಗಿ ಹೇಳುವುದಾದರೆ, ೮೪೪ ಖೋಟಾ ವಚನಗಳ ಅಬ್ಬರದ ಪ್ರಚಾರದಲ್ಲಿ ಮಾನಸಿಕವಾಗಿ ಹಿಂಸೆಗೆ ಒಳಗಾದ ನನ್ನ ಪಾಲಿಗೆ ಶ್ರೀರಕ್ಷೆಯಾಗಿ ನಿಂತವರು ಡಾ. ಎಂ. ಚಿದಾನಂದ ಮೂರ್ತಿಯವರು. ಸಮಸ್ಯೆಗಳಿಗೆಲ್ಲ ಪರಿಹಾರದ ದಾರಿ ತೋರಿಸಿ ನನ್ನಲ್ಲಿ ಧೈರ್ಯ ತುಂಬಿದವರು ನನ್ನ ಈ ವಿದ್ಯಾಗುರುಗಳು. ಅವರ ಉಪಕಾರಕ್ಕೆ ಪ್ರತಿಯಾಗಿ ಹೇಳಲು ನನ್ನಲ್ಲಿ ಮಾತುಗಳಿಲ್ಲ. ಡಾ. ಎಂ.ಎಂ. ಕಲ್ಬುರ್ಗಿಯವರು ಉದ್ದಕ್ಕೂ ನನ್ನನ್ನು ಪ್ರೋತ್ಸಾಹಿಸುತ್ತ ಬಂದವರು. ಈ ಸಂಪುಟದ ಸಂದರ್ಭದಲ್ಲಂತೂ ಅವರ ಸಲಹೆ, ಸಹಕಾರ ವಿಶೇಷವಾದುದು. ಅವರಿಗೂ ನನ್ನ ಪ್ರೀತಿಯ ನೆನಕೆಗಳು. ಪ್ರೀತಿಯ ಗೆಳೆಯರಾದ ಶ್ರೀ ಎಸ್. ಶಿವಣ್ಣನವರು ಈ ಸಂಪುಟದ ಸಂಪಾದನೆಯ ಸಂದರ್ಭದಲ್ಲಿ ನನಗೆ ಬಹಳಷ್ಟು ನೆರವು ನೀಡಿರುವರು, ಪ್ರಸ್ತಾವನೆಯನ್ನು ಓದಿ ಸಲಹೆ ಸೂಚನೆ ನೀಡಿರುವರು, ಇತ್ತೀಚೆಗೆ ಚಿತ್ರದುರ್ಗದ ಬೃಹನ್ಮಠದಲ್ಲಿ ದೊರೆತ ಸಿದ್ಧರಾಮೇಶ್ವರರ ಅಪ್ರಕಟಿತ ವಚನಗಳನ್ನು ನನ್ನ ಗಮನಕ್ಕೆ ತಂದು, ಅವನ್ನು ಬಳಸಿಕೊಳ್ಳಲು ಅನುಮತಿಸಿರುವರು. ಈ ಸಂಪುಟವನ್ನು ತಪ್ಪಿಲ್ಲದೆ ಚೆನ್ನಾಗಿ ಮುದ್ರಿಸಿಕೊಟ್ಟವರು ಬೆಂಗಳೂರಿನ ಸ್ನೇಹಾ ಪ್ರಿಂಟರ್ಸ್‌ರವರು ಅದಕ್ಕಾಗಿ ಇವರುಗಳಿಗೆ ನನ್ನ ವಂದನೆಗಳು.

**–ಡಾ. ಎಸ್. ವಿದ್ಯಾಶಂಕರ**



## ಪರಿವಿಡಿ

೧

ಅಂಕುಸದರಳಿನ ಸಂಪಗೆಯ ಹುವ್ವಿನ ಕಂಪು !
ಇತ್ತಲಿತ್ತ ಬಿಜಯಂಗೈಯದಿರು ಶಿವನೆ !
ಅರಿಯಾ ಮಗನೆ! ಮನೆಯ ಮಲ್ಲಯ್ಯ ನಿನಗೆಂದು ಬಂದುವನು.
ನೀವು ಭಕ್ತರಂಗಳದಲ್ಲಿ ಆಡುವ
ತೊತ್ತು ವೇಶಿಯ ಮಗನೆಂದು ಬಂದಿರಿ ಶಿವನೆ !
ಕಪಿಲಸಿದ್ಧಮಲ್ಲಿಕಾರ್ಜುನ ! ॥ ೧ ॥

೨

ಅಂಗ ಅಂಗದಲ್ಲಿ ಎನ್ನ ಅಂಗವಿಸದಂತೆ ಇರಿಸಯ್ಯಾ
ಅಯ್ಯಾ ಸಂಗ ಸಂಗಸುಖದಲ್ಲಿ ಬಳಲಿಸದೆ,
ಅಂಗವನೆ ಈಯಯ್ಯಾ
ಕಾರುಣ್ಯಾಕರನೆ, ಕಪಿಲಸಿದ್ಧಮಲ್ಲಿನಾಥಯ್ಯಾ
ನಿಮ್ಮ ಸಂಗವ ಹಿಂಗದಂತಿರಿಸು. ॥ ೨ ॥

೩

ಅಂಗದಲ್ಲಿ ಲಿಂಗ! ಆ ಲಿಂಗ ಧ್ಯಾನದಲ್ಲಿಪ್ಪ
ಒಡಲೊಡವೆ ಒಡೆಯರಿಗೆಂಬ;
ಮಾಡಿ ಮನದಲ್ಲಿ ಹೊಳೆಯದೆ ಬಾಳೆ ಫಲದಂತಿಪ್ಪ
ಮಾತಿನ ಬಟ್ಟೆಗೆ ಹೋಗ[ದ]; ಸೂತಕಶ್ರುತವ ಕೇಳದ;
ಸದ್ಭಕ್ತರ ನೆನವುದೆ ಮಂತ್ರವಯ್ಯ,
ಕಪಿಲಸಿದ್ಧಮಲ್ಲಿಕಾರ್ಜುನ. ॥ ೩ ॥

೪

ಅಂಗನೆಯರು ಮೂವರ ಸಂಗವ ಮಾಡಿದ ಕಾರಣ
ಇತರ ಸಂಗಕ್ಕೆ ಸಮನಿಸದಾದೆ.
ಅಂಗನೆಯ ಮೂವರನೊಂದು ಮಾಡಿ ಕೂಡಿದಡೆ
ಲಿಂಗ ನೀನಾದೆ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪ ॥

೫

ಅಂಗವ ಬೆರಸದ ಲಿಂಗ ಪ್ರಾಣವ ಬೆರಸುವ ಪರಿಯೆಂತೊ?
ಬೆನಕನ ತೋರಿ ಬೆಲ್ಲವ ಮೆಲುವಂತೆ
ಇಷ್ಟಲಿಂಗವ ತೋರಿ ಹೊಟ್ಟೆಯ ಹೊರೆವರು.
ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ, ದೂರ ನೀ ಹೊತ್ತೆ ;
ಸೂರೆಯನಾರಿಕೆ ಕೊಂಡರು. ॥ ೫ ॥

೬

ಅಂಗವ ಮರೆವನ್ನಕ್ಕರ,
ಲಿಂಗಾ, ನಿಮ್ಮ ಚೆಲುವ ಕಂಗಳು ತುಂಬಿ ನೋಡುತ್ತಲೆಂದಿಪ್ಪೆನೊ!
ಪರಿಪರಿಯ ನೋಟದಿಂದ ಹರುಷವನೈದಿಕೊಂಡು

ಪರಮೇಕಾಂತದೊಳೆಂದಿಪ್ಪೆನೊ!
ವರಗುರು ಕಪಿಲಸಿದ್ಧಮಲ್ಲಿಕಾರ್ಜುನಾ,
ನಿಮ್ಮ ಶರಣ ಪ್ರಭುವಿನ ಕರುಣವೆಂದಪ್ಪುದೊ ! ॥ ೬ ॥

೭

ಅಂಗವರತು ನಿಂದವಂಗೆ
ಜಗದ ಹಂಗಿನಲ್ಲಿ ಸಿಕ್ಕಿ ಜಂಗುಳಿಗಳ ಕೂಡದೆ
ಲಿಂಗವೇ ಅಂಗವಾಗಿ ನಿಂದುದು
ಕಪಿಲಸಿದ್ಧಮಲ್ಲಿಕಾರ್ಜುನಲಿಂಗವು ತಾನಾದುದು. ॥ ೭ ॥

೮

ಅಂಗವಸ್ತ್ರವನುಟ್ಟುಕೊಂಡಳವ್ವೆ
ಕಾಳಿಗೆವಟ್ಟೆಯ ಕುಪ್ಪಸವ ತೊಟ್ಟುಕೊಂಡಳವ್ವೆ
ಕಣ್ಣಲಿ ಬಟ್ಟಂಬಳೆಯ ಬೊಟ್ಟನಿಟ್ಟುಕೊಂಡಳವ್ವೆ
ತನ್ನುರವರವ ಕುಚದ ಮೇಲೆ ತೊಟ್ಟಿಲ್ಲದ ಮಣಿಯ ಸರವ
ಇನಿಸುವ ಸಿಂಗಾರವ ಮಾಡಿ ಒಪ್ಪಿದಾಕೆಯನರಸುವನವ್ವ !
ಕಪಿಲಸಿದ್ಧಮಲ್ಲಿನಾಥಯ್ಯ! ॥ ೮ ॥

೯

ಅಂಗವಿಸದಿರು ಇನ್ನು ಹಿಂಗಿಹೋಗೆಂದೆನುತ
ಮಂಗಳಾತ್ಮಕ ನುಡಿದ ಗುರುಕರುಣದಾ
ಅಂಗವಿಸದಿರು ಎಂದನಂಗಹರ ಪ್ರಭುರಾಯ
ಬಂದು ನೂಕಿದನೆನ್ನನೇಡಿಸುವ ಮಾಯೆಯನು.
ಮಂಗಳಾತ್ಮಕ ಕಪಿಲಸಿದ್ಧಮಲ್ಲೇಶ್ವರನೆ
ಲಿಂಗ, ನಿಮ್ಮನು ಅರಿವೆ; ಮಾಯೆಯ ಗೆಲುವೆ
ಪ್ರಭುವಿನಂದದಲಿ. ॥ ೯ ॥

೧೦

ಅಂಗವಿಸನನ್ಯಕ್ಕೆ ಸಂಗಮಾಡನು ತತ್ವ
ಯೆಂಬ ಮಠಕವನು ತಾನಪ್ರಮಾಣ

ಮಂಗಳಾತ್ಮನ ತೆರಹು ಹಿಂಗದಿಹ ಸೀಮೆಯ
ತಂಪರುಪಿದಾತ ಗುರು ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೧೦ ॥

೧೧

ಅಂಗವಿಸನನ್ಯಕ್ಕೆ ಹಿಂಗಿಹ ಮಾಯಕ್ಕೆ
ಸಂದ ಸುಖವೆ ಶಿವನ ಅಂಘ್ರಿಗಾಗಿ,
ಮಂಗಳ ಉರುತರ ಬೆಳಗು ಪ್ರಕಾಶಿಸುವ
ನಿಸ್ಸಂಗ ಗುರುವು ಚೆನ್ನಬಸವಣ್ಣನು
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೧೧ ॥

೧೨

ಅಂಗಾಲಕೋಪವ ಮನಕ್ಕೆ ತಂದಿಪ್ಪವನ,
ಆ ಮನದ ಕೋಪವ ಹೃದಯದಲ್ಲಿಟ್ಟುಕೊಂಡಿಪ್ಪವನ
ಅವನ ಪಾದಕ್ಕೆ ಎನ್ನ ನೊಸಲ ತಂಪ ತಂದು ತಳಿವೆ,
ಎನ್ನ ನೊಸಲ ಅಮೃತದಿಂದ ಅವನ ಮನವ ತಿಳುಹುವೆ,
ಕಪಿಲಸಿದ್ಧಮಲ್ಲಿಕಾರ್ಜುನನ. ॥ ೧೨ ॥

೧೩

ಅಂಗೋದಕದಿಂದ ಅಂಗರಕ್ಷಣಂಗಳ ಮಾಡುವೆ;
ಲಿಂಗೋದಕದಿಂದ ಸರ್ವಪವಿತ್ರವ ಮಾಡುವೆ;
ಪ್ರಸಾದೋದಕದಿಂದ ಪ್ರಾಣನ ನೆಲೆಯನರಿವೆ
ಇಂತೀ ತ್ರಿವಿಧೋದಕದಿಂದ ಶುದ್ಧನಹೆ, ಸಿದ್ಧನಹೆ, ಪ್ರಸಿದ್ಧನಹೆ,
ಕಪಿಲಸಿದ್ಧಮಲ್ಲಿಕಾರ್ಜುನ ತಾನಹೆ. ॥ ೧೩ ॥

೧೪

ಅಂಜನಗಾರನ ಕೈ ನಂಜುಗೊಂಡಿದೆ ಅಯ್ಯಾ.
ಅಂಜನಗಾರ ಹರುಷವಾಗಲೆಂದು
ಹರಸಿಕೊಂಡ ಹರಕೆ ಈಡೇರಿತ್ತೆನಗಿಂದು.
ಕುಂಜರಂಗಳೆಂಟಂಜಿ ಕೆಲ ಸಾರಿದವು.
ಅಂಜನವ ಬಲ್ಲ ನೀನೊಬ್ಬನಲ್ಲದಿಲ್ಲ ಕಾಣಾ,
ಕಪಿಲಸಿದ್ಧಮಲ್ಲಿನಾಥ. ॥ ೧೪ ॥

೧೫

ಅಂಜನದಗಿರಿ ರಂಜಿಸುತ್ತಿದೆ ಆಯತವಿಡಿದು ಸುಖವ ಕಂಡು
ಅನುಭವದವಳಿಗೆ [ಮಾಣಿಕ್ಯ] ವರ್ಣವನೇಕೀಕರಿಸಿ ನೋಡಲು
ಅನುವಾಯಿತ್ತಯ್ಯ ಅಂಜನದ ಹತ್ತೆಸಳಪೀಠ.
ಆ ಪೀಠದಲ್ಲಿ ಭೃತ್ಯನೆಂಬವ ನಿಂದು ಲಿಂಗವಿಡಿದು ನಡೆಯೆ
ಉರಿ ನಂದಿ ನೆಲೆಗೊಂಡನಯ್ಯಾ ನಿಮ್ಮ ಶರಣ ಚೆನ್ನಬಸವಣ್ಣನು.
ಕಪಿಲಸಿದ್ಧಮಲ್ಲಿನಾಥಯ್ಯ, ಚೆನ್ನಬಸವಣ್ಣನಿಂದ ಬದುಕಿದೆನು.
॥ ೧೫ ॥

೧೬

ಅಂತರಾತ್ಮ ಪರಮಾತ್ಮ ಭೂತಾತ್ಮವೊಳಗಾದ ಅಧ್ಯಾತ್ಮಿ ಕೇಳಾ:
ನೀನು ಯೋಗದ ಪ್ರಮಾಣ ಬಲ್ಲ ಅಯ್ಯನು
ಶ್ರೋತ್ರೇಯ ಮನೆಯಲ್ಲಿ, ನೇತ್ರೆಯ ಜಿಹ್ವೆಯಲ್ಲಿ, ಆನಂದ
ಪಾತ್ರೆಯಲ್ಲಿ
ಸಂಗತಿ ಸದಾಚಾರ ನಿಷ್ಕಳ ಪರಮಸೀಮೆ ಎಂಬ ಪಾತ್ರೆಯಲ್ಲಿ
ಪಂಚಬ್ರಹ್ಮವನೊಡಗೂಡಿದ ಪಂಚಸ್ತ್ರೀಯರಿಗೆ
ಪ್ರಸಾದವನಿಕ್ಕುವಾಗ
ಪ್ರಸನ್ನತೆಯೆಂಬ ಪ್ರಸಾದವನನುಗ್ರಹಿಸಲರಿಯದೆ
ಇದ್ದ ಕಾರಣ ಅಂತರಿಸಿದೆಯಯ್ಯಾ
ಆದ್ಯಂತಪ್ರಸಾದವ ಕೊಂಡ ಕಾರಣದಲ್ಲಿ ಆನು ನೀನಾದೆ ;
ಕಪಿಲಸಿದ್ಧಮಲ್ಲಿಕಾರ್ಜುನನ ಕೂಡಿ ಸಂದಳಿದೆ. ॥ ೧೬ ॥

೧೭

ಅಂತುಸದರಳಿನ ಸಂಪಗೆಯ ಹೂವಿನ ಕಂಪು
ಇತ್ತಲೆತ್ತ ಬಿಜಯಂಗೈದಿರಿ ಶಿವನೆ,
ಅರಿಯಾ ಮಗನೆ, ಮಲೆಯ ಮಲ್ಲಯ್ಯ ನಿನಗೆಂದು ಬಂದುವನು.
ನೀವು ಭಕ್ತರಂಗಳದಲಾಡುವ
ತೊತ್ತಿನ ಓಹಿಯ ಮಗನೆಂದು ಬಂದಿರಿ ಶಿವನೆ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೧೭ ॥

೧೮

ಅಂದು ಅನಾದಿಯಲ್ಲಿ ತಂದು ಬಿತ್ತಿದ ಬೀಜ
ಮುಂದಕ್ಕೆ ಮೂಲ ನಾಶವೈ.
ಸಾಧಿಸುವ ನಿಜವ ಮೂಲನಾಶವ ಮಾಡಿದರೆ
ತಾನೆ ಫಲ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೧೮ ॥

೧೯

ಅಂದು ಅದಿಯಲಾದ ಆನಂದ ರೂಪಿನ ನಿಜವನು
ತಂದೆನ್ನ ಕರಕ್ಷೇತ್ರದಲ್ಲಿ ಬಿತ್ತಿದ, ಸದ್ಗುರುಸ್ವಾಮಿ.
ಕೊಂಬು ಬೇರಾಗಿ ಬೇರು ಕೊಂಬಾಗಿ ಫಲಂಗಳಾರಾದವು.
ಆ ಫಲ ಗುರುವಿಂಗೊಂದು ಲಿಂಗಕ್ಕೊಂದು
ಉಳಿದ ನಾಲ್ಕ ಜಂಗಮಕ್ಕಿತ್ತು
ಹಿಂದು ಮುಂದುಗೆಟ್ಟ ಕಪಿಲಸಿದ್ಧಮಲ್ಲಿಕಾರ್ಜುನ. ॥ ೧೯ ॥

೨೦

ಅಂದು ಬಸವಣ್ಣ ಬಂದು ಜರಿದು ಹೋದುದ
ಮರೆದೆನೆ ಆ ನೋವ !
ಜರಿದುದೆ ಎನಗೆ ದೀಕ್ಷೆಯಾಯಿತ್ತು!
ಆ ದೀಕ್ಷೆಯ ಗುಣದಿಂದ ಫಲಪದಕ್ಕೆ ದೂರವಾದೆ
ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ
ಬಸವಣ್ಣನೆನ್ನ ಪರಮಾರಾಧ್ಯ! ॥ ೨೦ ॥

೨೧

ಅಂದೊಮ್ಮೆ ಜಗನ್ನಾಥ ಭಸ್ಮವ ತೊಡೆದು ಕೈಯ ಬಿರ್ಚಿದರೆ
ಕೇಳಿರಣ್ಣ! ಅಣ್ಣ! ಅಣ್ಣ ಕೇಳಿರಣ್ಣ!
ಬ್ರಹ್ಮ ತಾ ಮರದೊರಗಿ ವಿಷ್ಣು [ತಾ] ಜುಮ್ಮೆಂದು
ವೇದಗಳು ಮತಿಗೆಟ್ಟು ದೆಸೆಗೆ ಬಾಯ ಬಿಟ್ಟವಯ್ಯ!
ಎನಿಸೆನಿಸು ಲೋಕಂಗಳು ಅನಿಸು ಬಾಯ ಬಿಟ್ಟವು!
ಕೇಳಿರಣ್ಣ! ಅಣ್ಣ! ಅಣ್ಣ! ಕೇಳಿರಣ್ಣ!
ತಮ್ಮ ಬಲ ಅವಕುಂಟು ಕೇಳಿರಣ್ಣ !
ಆಯುಷ ತನಿಗೆನಿಸೆಂಬುದವೈ
ಎನ್ನ ಕಪಿಲಸಿದ್ಧಮಲ್ಲಿನಾಥಯ್ಯನ ಕೈಯ ಸಬುದಕಣ್ಣ !
॥ ೨೧ ॥

೨೨

ಅಂಧಕಾರದ ಗಿರಿ ಅರಿವೇರಿತು ಅನುವಿಡಿದು ಸುಖವ ಕಂಡು
ಅನುಭವದವಳಿಗೆ [ಕೆಂಪುವರ್ಣ] ಸುಖವನೇಕೀಕರಿಸಿ ನೋಡಲು
ಆಯತವಾಯಿತ್ತು ಈ ಅಂಧಕಾರದ ಎರಡೆಸಳಪೀಠ
ಆ ಪೀಠದಲ್ಲಿ ಸಮಯಾಚಾರಿಯೆಂಬವ ನಿಂದು
ಪರಿಣಾಮವಿಡಿದು ನಡೆಯೆ,
ಆತ್ಮನ ಗುಣ ಕೆಟ್ಟು ನೆಲೆಗೊಂಡನಯ್ಯಾ ನಿಮ್ಮ ಶರಣ
ಚೆನ್ನಬಸವಣ್ಣನು.
ಕಪಿಲಸಿದ್ಧಮಲ್ಲಿನಾಥಯ್ಯಾ,
ಚೆನ್ನಬಸವಣ್ಣನ ಧರ್ಮದಿಂ ಬದುಕಿದೆನು. ॥ ೨೨ ॥

೨೩

ಅಕ್ಷರತ್ರಯದಲ್ಲಿ ಆನಂದಬ್ರಹ್ಮದಲ್ಲಿ
ಅಕ್ಷರತ್ರಯದಲ್ಲಿ ನಿತ್ಯರೂಪ
ಅಕ್ಷರತ್ರಯವೆಂಬ ಆನಂದಬ್ರಹ್ಮದ
ಅಕ್ಷರವು ಆರರಲ್ಲಿ ಭಕ್ತಿ ಶಕ್ತಿ
ನಿತ್ಯಾಂಗನೆಯ ಹಸ್ತ ತತ್ವಮಸಿಯಿಂದತ್ತ
ಭಕ್ತಿ ಕಾರಣ ಶಿವನು ಕಪಿಲಸಿದ್ಧಮಲ್ಲಿಕಾರ್ಜುನ. ॥ ೨೩ ॥

೨೪

ಅಕ್ಷರವೈದರಿಮ್ಮೇಲೆ ಒಪ್ಪಿಪ್ಪೆ ನೀನು,
ಶಿವ ಅಕ್ಷರಾಂಕನು ನೀನು,
ಪೂರ್ವಕ್ಕೆ ಮೂರು ಅಕ್ಷರ
ಆನತದಿಂ ಮೇಲೆ ನೀನಯ್ಯಾ.
ಅನಾದಿ ಮೂಲಶೂನ್ಯ
ಕಪಿಲಸಿದ್ಧಮಲ್ಲಿನಾಥ
ಆದಿಯಾಧಾರಕ್ಕೆ ಮೂಲ ನೀನು. ॥ ೨೪ ॥

೨೫

ಅಕ್ಕಟಾ ಅವನ ನೆನಹಿನ ಮನೆಯೊಳಗೆನ್ನ ನಿಲಿಸಿ
ಅವನನೆ ಮೂಲ ನಾಶವ ಮಾಡಿರವ್ವಾ.
ನೆನಹಿನ ಮನೆಯೊಳಗೆ ಅವನನೊಡಗೂಡಿ
ಲೀಯವ ಮಾಡು ಕಪಿಲಸಿದ್ಧಮಲ್ಲಿನಾಥಯ್ಯನಾ. ॥ ೨೫ ॥

೨೬

ಅಕ್ಕಟಾ ಎನಗೆ - ನಿನಗೆ ನೆರೆಗೆ- ಹೊರಗೆ
ಹೇಳುವನಲ್ಲ ಕಂಡಯ್ಯ! ಅಯ್ಯ!
ಹಾ! ಅಯ್ಯ! ಹೇಳಿದರಲ್ಲದೆ ತೋರಿದಲ್ಲದೆ ಕಾಬವನಲ್ಲ
ಕಂಡಯ್ಯ.
ಹಾ! ಅಯ್ಯ! ಎನ್ನ ಕಾಣದ ಕೇಳದ ಪ್ರಾಣಗೆ
ಅನುಮಿಷನಾಗಿರಿಸೆನ್ನ ಕಪಿಲಸಿದ್ಧಮಲ್ಲಿನಾಥಯ್ಯ. ॥ ೨೬ ॥

೨೭

ಅಕ್ಕಟಾ ತನು ನೀನೆಯೆಂಬ ನೀನು ನಾನೆಂಬ ಕಾನನದಲ್ಲಿ
ಕಾಮಿಸಿದೆನು ಕರುಣರಸ ಕಂಬನಿಯ
ಕರಣಗುಣ ಸಂಗಮದ
ಅನುನಯದಲೊಪ್ಪಿಪ್ಪ ತಾತ್ಪರ್ಯವಾ
ಮನಸಿಜನ ಬಾಣಕ್ಕೆ ಒಳಗಾದ
ಮಾನಸಗುರಿಗಳೆತ್ತ ಬಲ್ಲರೈ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೭ ॥

೨೮

ಅಗ್ನಿಸ್ತಂಭವ ಬಲ್ಲೆವೆಂಬರಯ್ಯ!
ಅನ್ನವನಿಕ್ಕುವರಯ್ಯ !
ಜಲಸ್ತಂಭವ ಬಲ್ಲೆವೆಂಬರಯ್ಯ!
ಅರವಟ್ಟಿಗೆಯನಿಕ್ಕುವರಯ್ಯ!
ಖಡ್ಗಸ್ತಂಭವ ಬಲ್ಲೆವೆಂಬರಯ್ಯ!
ಮರೆಹೊಕ್ಕರೆ ಕಾವರಯ್ಯ!
ಇಂತೀ ತ್ರಿವಿಧಗುಣವ ಮೀರಿದವರು
ದೇವರಿಗೆ ದೇವರಾಗಿಪ್ಪರು ಕಾಣಾ!
ಕಪಿಲಸಿದ್ಧಮಲ್ಲಿಕಾರ್ಜುನಾ, ದೇವರ ದೇವ. ॥ ೨೮ ॥

೨೯

ಅಘವಿಧ್ವಂಸನನರ್ಚಿಸಿ[ಹೆ]ನೆಂದು ಹೋದಡೆ
ಅಘವೆ ಪರಿವೇಷ್ಟಿಸಿತಯ್ಯಾ ಎನ್ನನು.
ಇವನ ಹೇಂಗೆ ಕಳೆವೆನಯ್ಯಾ?
ಇದ ಕಳವೆನಿನ್ನು ನಿನ್ನವರ ಸಂಗದಿಂದ;
ಇದ ಕಳೆವೆ ನೀನು ಗುರುವಾಗಿ ಬಂದಡೆ.
ಎನ್ನವರ ಸಂಗವಿಲ್ಲದೆ
ಅಲ್ಲದಿದ್ದೊಡೆ ನಿನ್ನ ದೈವತ್ವದಿಂದ ಕಳೆದೆನೆಂದಡೆ
ಎನ್ನ ಸುತ್ತಿ ಮುತ್ತಿತ್ತೈ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೯ ॥

೩೦

ಅಚ್ಚಪ್ರಸಾದ ನಿಚ್ಚಪ್ರಸಾದ ಸಮಯಪ್ರಸಾದವನರಿಯದ
ಮೂಢರಿಗೆ
ಷಡ್ವಿಧ ಲಿಂಗಾಂಗ ಪ್ರಸಾದ ಪಾದೋದಕವ ಹೇಳುವನೊಬ್ಬ
ಪಾದೋದಕದ್ರೋಹಿ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೩೦ ॥

೩೧

ಅರ್ಚಿಸಲಿ ಬೇಡವದು, ಪೂಜಿಸಲು ಬೇಡ,
ನಿತ್ಯ ಜಪತಪನೇಮ ನಿನಗೆ ಬೇಡ.
ಸಚ್ಚಿದಾನಂದ ಗುರು ಕಪಿಲಸಿದ್ಧಮಲ್ಲಿಕಾರ್ಜುನನ
ಬಸವಾಕ್ಷರತ್ರಯವ ನೆನೆ ನಿತ್ಯಪದವು. ॥ ೩೧ ॥

೩೨

ಅಚ್ಚೊತ್ತಿದಂತೆ ಒಚ್ಚತಗೊಂಡರು
ಬಸವಣ್ಣ ಮೊದಲಾದ ಪುರಾತರೆಲ್ಲ.
ಸೂರೆಗೊಂಡರಯ್ಯಾ ನಿಮ್ಮ ಪ್ರಸಾದ ಭಂಡಾರವ.
ಅಲ್ಲಿಯ ಶೇಷವೆನಗಾದರೆ ಅವರಂತೆ ಆನಪ್ಪೆನು
ಇಲ್ಲದಿದ್ದಡೆ ಮುನ್ನಿನಂತೆ ಅಯ್ಯಾ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೨ ॥

೩೩

ಅಜನ ಕಲ್ಪಿತವಲ್ಲದ ಭಕ್ತಿ
ವಿಷ್ಣುವಿನ ಕಲ್ಪಿತವಲ್ಲದ ಭಕ್ತಿ
ರುದ್ರನ ಕಲ್ಪಿತವಲ್ಲದ ಭಕ್ತಿ
ನಿನ್ನ ಕಲ್ಪಿತವಾಯಿತ್ತಯ್ಯಾ ಬಸವಾ.
ನೋಟಕಾರರ ನೋಟಕ್ಕೆ ಸಿಕ್ಕಿದ ಭಕ್ತಿ
ಕೂಟಕ್ಕೆ ಕೂಟವಾಯಿತ್ತಯ್ಯಾ ಬಸವಾ
ಈ ಬೇಟದ ಭಕ್ತಿಯ ನಿಮ್ಮಿಂದ ಕಂಡೆನಯ್ಯಾ, ಬಸವ
ಗುರುವೆ,
ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ. ॥ ೩೩ ॥

೩೪

ಅಜಲೋಕದೊಳಗಿಪ್ಪ ಬಹುಪರಿಯ ಕುಸುಮಕ್ಕೆ
ಬಂದು ಕರಂಗಳು ಬಂದು ಪೀಡಿಸುತ್ತಾ
ಬಂಡುಂಬ ತುಂಬಿಯನು ಇಂಬಪ್ಪ ಕುಸುಮವನು
ಸಂಭ್ರಮದಿ ನುಂಗಿತಾ ಜ್ಯೋತಿ ಬಂದು
ಜ್ಯೋತಿಯನು ಸೂಕ್ಷ್ಮ ಸಿದ್ಧಿಯನು
ಹಲವೆನಿಸಿ ರೀತಿಯಾದುದು ದೆಸೆಯ ಪ್ರಬಲಕಾಗಿ
ಅಜಾತನ ರೀತಿವಿಡಿದವರೆಲ್ಲಾ ನಿತ್ಯರಯ್ಯಾ
ಕಪಿಲಸಿದ್ಧಮಲ್ಲಿಕಾರ್ಜುನ. ॥ ೩೪ ॥

೩೫

ಅಜ್ಞಾನವೆನ್ನದು ಜ್ಞಾನ ನಿನ್ನದು,
ಶಿವಯೋಗಿ ಸಿದ್ಧರಾಮಯ್ಯ ತಮಂಧದಲಿ ಬಿದ್ದಿದ್ದೇನೆ
ಮುದ್ದ ಸಲಿಸೂದು ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೫ ॥

೩೬

ಅಟ್ಟಿಮುಟ್ಟಿ ಆತುರದಿಂದ ಹಿಡಿದು ಮುಟ್ಟಿ
ನಂಬಲರಿಯದ ಕಷ್ಟರನೇನೆಂಬೆನಯ್ಯಾ.
ನಿಶ್ಚಯವಿದೆ ಲಿಂಗ; ಸತ್ಯವಿದೆ ಪ್ರಸಾದ ; ಪ್ರಸಿದ್ಧವಿದೆ ಜಂಗಮ ;

ಇನಿತನರಿಯದವರ ಹೊದ್ದಿಸದಿರಯ್ಯ ಎನ್ನತ್ತಲಿ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೬ ॥

೩೭

ಅಡಿಗಡಿಗೆ ಅಮೃತದ ಕೊಡನೊಡೆಯೆ,
ನಿನ್ನಯ ನುಡಿ ಬ್ರಹ್ಮವು ತಾನು ನಿತ್ಯವಾಗಿ
ಮಾಡಿ ಒಳಗೆ ಭಕ್ತಿಯನು
ಅಡಿಯೊಳಗೆ ನಿತ್ಯವನು
ಕಡಲ ಕಂಡೆನು ಭಕ್ತಿಸಮುದ್ರದಾ,
ಕೊಡನೊಡಲು ಒಡೆದೀಗ ಕಡಲೊಳಗೆ ಬೆರಸಲ್ಕೆ
ಅಡಿಗಡಿಗೆ ದೀಕ್ಷತ್ರಯದ ಸೊಮ್ಮು.
ನಿತ್ಯ ಮೃಡನೀಗ ಕಪಿಲಸಿದ್ಧಮಲ್ಲಿಕಾರ್ಜುನಯ್ಯನ
ನುಡಿಯ ಬ್ರಹ್ಮದೊಳಗೆ ಒಡನೆ ಬ್ರಹ್ಮಾ. ॥ ೩೭ ॥

೩೮

ಅಣ್ಣಗಳು ಕೇಳಿರೆ, ಅಣ್ಣಗಳು ಕೇಳಿರೆ,
ಲೋಹಿತೇಶ್ವರದೇವರ ಮರೆ ಬಂದು ಒರಸೀತು,
ಸುವರ್ಣದ ಕಳಸ ವೆಚ್ಚವಾದೀತು,
ಜಪತಾವಡ ಮಣಿ ಹರಿದಾವು,
ಗುರುಹಿರಿಯರೆಲ್ಲಾ ಹೆಡೆಗುಡಿಯ ಕಟ್ಟಿಗೊಳಗಾದಾರು
ಕಪಿಲೆ ಬಾಣಸಕ್ಕೆ ಬಂದೀತು,
ಸೊನ್ನಲಿಗೆಯ ಪುಣ್ಯಕ್ಷೇತ್ರವಳಿದೀತು
ಇಂತೀ ಎನ್ನ ಕಪಿಲಸಿದ್ಧಮಲ್ಲಿಕಾರ್ಜುನದೇವರು
ಇಲ್ಲಿಯೂ ಇಲ್ಲ, ಅಲ್ಲಿಯೂ ಇಲ್ಲ. ॥ ೩೮ ॥

೩೯

ಅಡವಿಯಲ್ಲಿ ತಡೆಗಡಿದ ಪಶುವಿನಂತಾದೆವಾವೆಲ್ಲ ಅಯ್ಯಾ!
ಅಕ್ಕಟಾ, ಒಡೆಯರಿಲ್ಲದ ಅನಾಥರಾದೆವಾವೆಲ್ಲ ಅಯ್ಯಾ!
ಅಕ್ಕಟಾ, ನಮಗಿನ್ನು ದಿಕ್ಕಾರು, ದೆಸೆಯಾರು ?
ಅಕ್ಕಟಾ, ನಮಗಿನ್ನು ಒಡೆಯರರಾರು? ಹೇಳಾ ತಂದೆ!
ಅಯ್ಯಾ, ಶ್ರೀಮಲ್ಲಿನಾಥಲಿಂಗಾ, ಅವಧರಿಸು ಎನ್ನ ಬಿನ್ನಹವ
ಗಣಾಚಾರಕ್ಕೆ ಬುದ್ಧಿಗಲಿಸುವುದೆನ್ನ ತಂದೆ! ॥ ೩೯ ॥

೪೦

ಅತ್ತಲಿತ್ತ ಸುತ್ತಿ ಬಳಲಿ ವ್ಯರ್ಥವಪ್ಪ ಮನವ
ನಿಮ್ಮ ಚಿತ್ತದತ್ತ ಧ್ಯಾನಿಸಿ ಇರಿಸಯ್ಯ.
ಇನ್ನು ನಿಮ್ಮತ್ತಲಲ್ಲದೆ ಅತ್ತಲಿತ್ತ ಸುತ್ತಿ ಬಂದಡೆ
ವಿಚಿತ್ರಮೂಲ ನಿಮ್ಮಾಣೆಯಯ್ಯ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೦ ॥

೪೧

ಅತ್ಯತಿಷ್ಠದ್ದರ್ಶಾಂಗುಲನನರ್ಚಿಸಿ ಕಂಡೆನೆಂಬ
ಬಚ್ಚಬರಿಯ ಮರುಳ ನೀ ಕೇಳಾ.
ಅರ್ಚನೆ ಪೂಜೆಯಲ್ಲಿ ಸಿಕ್ಕುವನೆ?
ಗುರು ತೋರಿದ ಸಚ್ಚಿದಾನಂದ ಚಿನ್ಮಯ ಚರಲಿಂಗವಪ್ಪ
ಅರ್ಚಕರು ಅರ್ಚಿಸಿ ಪಡೆಯರೊ.
ಪದ ನಾಲ್ಕ ಮೀರಿದ ಪದವ
ನೀವೆಂಬುರುತರ ಪರಮ ಸೀಮೆಯವನಯ್ಯ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೧ ॥

೪೨

ಅತಿಗಳೆವೆ ವರ್ಗವನು ಮಥನಿಸುವೆ ಮುಕ್ತಿಯನು,
ಸದಮದವ ನಿಲಿಸುವೆನು
ದಿಗ್ವಳಯದಾ ಕರಣ ಸಂತತಿಗಳ ತನುಗುಣದ ಭೇದವನು,
ಮನದಲ್ಲಿ ಒಪ್ಪಿಪ್ಪ ತತ್ವಂಗಳಾ ಮನೆ ಐದರ ಭೇದ
ಮನಸಿಜನಿಂಬಿಲ್ಲ ಘನತರ ಮನೆ.
ಐದನೊಂದ ಮಾಡಿ
ತನುತ್ರಯವ ಮನತ್ರಯವ ಮಲತ್ರಯವ ಎಯ್ದದೆ
ಘನತರದ ಭೇದವನು ಅನುವಾಗಿ ಎಯ್ದಿ
ಗಮನವನಿರಿಸಿ ಮಧ್ಯಸ್ಥಾನದಲ್ಲಿ.
ಕುಶಲತೆಯ ಬಿಟ್ಟೀಗ ಎಸೆವ ಕಮಳದೊಳಗೆ
ಶಶಿಧರನ ಸಾಯುಜ್ಯ ಮಂಚದಲ್ಲಿ
ಕುಸುಮನೇತ್ರೆಯ ಕಂಡು ಪಸರಿ ಪರ್ಬಿದ ಸ್ನೇಹ
ಒಸರುತಿರ್ದುದು ಗಿರಿಯ ಕಂದರದಲಿ
ಮಧುರದೊಂದಾಳಾಪ ಒದವಿರ್ದ ಕ್ರೀಯದಲಿ
ಅಸುಮಿಷದ ಶಕ್ತಿ ಶುದ್ಧ ಪಂಚಮದಲಿ ಒದಗದೆ

ಎಯ್ದಿಪ್ಪ ಪರಶಕ್ತಿ ಮಸ್ತಕದ
ಅನುನಯದ ಬೀಜಾಕ್ಷರಂಗಳೆರಡಾ ಬಳಸುತ್ತ
ಚಿತ್ತವನು ಹರಿಯದೆ ನಿಲಿಸಿ,
ತನುವ ವೇಧಿಸುತಿರ್ದುದಾನತದಲಿ
ಶುದ್ಧ ಸಂಗಮದೊಳಗಿದ್ದು ಮೂರ್ಛೆಯನೆಯ್ದಿ
ಅರ್ಧೋದಯದಲ್ಲಿ ಆನತದಲಿ ತಾನು ತನ್ನವನರಿತು
ಭಾನುವಿನುದಯದಲಿ ತಾರೆಗಳ ತವಕದಲಿ
ವಿಯೋಗದಾ ಅಂಗಸಂಗವ ಮರೆದು,
ಲಿಂಗಸುಖಸಂಯೋಗಿ ಭಂಗವಿಲ್ಲದೆ
ಶುದ್ಧ ಧವಳತೆಯಲಿ ಅನುಗುಣವನತಿಗಳೆದು
ಮನದ ಮಲಿನವ ಕಳೆದು,
ಮನ ನಿಮ್ಮನೆಯ್ದಿತ್ತೈ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೨ ॥

೪೩

ಅತಿಮಥನವೆಂಬ ಯೋಗವೆನ್ನ ಗತಿಗೆಡಿಸಿತ್ತಯ್ಯ
ದಿತಿಗೆಟ್ಟೆ ನಾನು ಅದರಿಂದ
ಅತಿಶಯದ ತಾತ್ಪರ್ಯ ಗುರುಭಕ್ತಿಯನರಿಯದೆ
ದಿತಿಗೆಟ್ಟೆನಯ್ಯಾ ತಾತ್ಪರ್ಯವನರಿಯದೆ.
ತವಕಿಸುವ ಮನವನು ನಿಮ್ಮ ಕಡೆಗೆ ತೆಗೆದುಕೊಂಡು
ಅತಿಶಯದ ತಾತ್ಪರ್ಯ ಗುರುಭಕ್ತಿಯ ಈಯಯ್ಯಾ
ಕಪಿಲಸಿದ್ಧಮಲ್ಲಿಕಾರ್ಜುನ. ॥ ೪೩ ॥

೪೪

ಅತಿಶರಣರ ಕೂಡೆ ಮತಿವಂತ ಭಕ್ತರು ಸಂಗ ಮಾಡಲಾಗದು.
ದಾಸಿಯ ಸಂಗ ವೇಶಿಯ ಸಂಗ
ದಾಸರಲ್ಲದೆ ರಾಜರು ಮಾಡಲಾಗದು.
ಚಂಪಕಸಂಗ ಭ್ರಮರ ಮಾಡಲಾಗದು.
ಕಪಿಲಸಿದ್ಧಮಲ್ಲಿಕಾರ್ಜುನಾ,
ಅತಿ ಶರಣರ ಸಂಗ ಗುರುಭಕ್ತರು ಮಾಡಲಾಗದು. ॥ ೪೪ ॥

೪೫

ಅರ್ತಿಯಲ್ಲಿ ಮುತ್ತೈದೆ ಆರತಿವಿಡಿದು ಬಂದು
ನಿಂದೈದಾಳೆಯಯ್ಯಾ ನಿಮ್ಮ ಮುಂದೆ.

ನಿಜಶುದ್ಧ ಸಾರಸನ್ಮತವಾದ ಮುಖವಂತೆ,
ಕಪಿಲಸಿದ್ಧಮಲ್ಲಿನಾಥಯ್ಯಾ, ನಿಮ್ಮ ಮುಖವಂತೆ
ನಿಯತವ ಕಂಡಳು ಚೆನ್ನಬಸವಣ್ಣನ ಧರ್ಮದಿಂದೆ ॥ ೪೫ ॥

೪೬

ಅಧ್ಯಾತ್ಮ ಅಧ್ಯಾತ್ಮವೆಂಬಿರಿ
ಅಧ್ಯಾತ್ಮವೆಂಬುದದು ಏನು ಹೇಳಾ?
ವಾಯುಪ್ರಾಣಿಯ ಕೊಂದು, ಅಕ್ಷರವೈದರಲಿ
ಎತ್ತಿ ತೋರಿದನು ಶ್ರೀಗುರುರಾಯನು
ಬಹಳ ಲಿಂಗವ ತಂದು ಸೂಕ್ಷ್ಮವ ಮಾಡೀಗ ಕೊಟ್ಟು
ಬಳಿಕ ಯೋಗವುಂಟೆ?
ಅಟ್ಟುದನು ಮರಳಡುವ ಮಿಟ್ಟೆಯ ಭಂಡರ,
ಏನೆಂಬೆನೈ ಗುರುವಾಜ್ಞೆ ಜಡರ.
ಆನಂದರೂಪ ಕಪಿಲಸಿದ್ಧಮಲ್ಲಿಕಾರ್ಜುನನ
ಯೋಗವಾದಲ್ಲಿ ಯೋಗವುಂಟೆ? ॥ ೪೬ ॥

೪೭

ಅನಂತ ಭವ ಭವದಲ್ಲಿ ಬಂದು ನಾನು ಶಾಂತನಾದೆ ಅಯ್ಯಾ,
ನಿನ್ನ ಪ್ರಸಾದವನು ನಾನಾ ಭವದಲ್ಲಿ ಕಾಣೆ, ತಂದೆ.
ನಿನ್ನ ಪಾದೋದಕವನು ನಾನಾ ಭವದಲ್ಲಿ ಕಾಣೆ, ತಂದೆ.
ಕವಿಲೆಯ ಕಂದನಂತೆ ನಾನಿದ್ದೇನೆಂದು ಬಾರಾ,
ಶಿವನೆ, ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೭ ॥

೪೮

ಅನಿಲ ಬಂದೆನ್ನ ಮಗಳ ಹೊರೆಯಲಿದ್ದು ಒಯ್ದನವ್ವಾ;
ಅ ಅ ಅ ಅ ಅ ಅವ್ವಾ;
ಮಾಯವಾದಳೆನ್ನಲ್ಲಿ.
ಎನ್ನ ಮಗಳನೊಯ್ದು ಎಲ್ಲಿ ಮಾಯಮಾಡಿದಳೆಂದರಿಯೆ.
ಎನ್ನ ಮಗಳನೊಯ್ದು ತನ್ನ ಮಾಯದೊಳಗೆ ಅಡಗಿಸಿದ
ಕಪಿಲಸಿದ್ಧಮಲ್ಲಿನಾಥಯ್ಯನ. ॥ ೪೮ ॥

೪೯

ಅನುನಯದ ಅನ್ಯಕ್ಕೆ ತೆರಹುಗುಡದೆ ಇಪ್ಪ
ಕರುಣ ಸಾಗರದೊಳಗೆ ಮುಳುಗಾಡುವಾ
ಕರುಣಾಕರನು ಕಪಿಲಸಿದ್ಧಮಲ್ಲೇಶ್ವರನು
ತೆರಹಿಲ್ಲದೊಡಗೂಡಿ ಇಪ್ಪ ಸುಖದಿಂ. ॥ ೪೯ ॥

೫೦

ಅನುಪಮನೆ, ಅಪ್ರಮೇಯನೆ, ನಿತ್ಯತೃಪ್ತನೆ,
ಇರವು ನಿನಗೆಲ್ಲಿ ಹೇಳೆಂದು ನುಡಿದು,
ಪರೀಕ್ಷಿಸುವ ಇರವಿಲ್ಲ ಇತ್ತ ಬಾಯೆಂದು
ಲಿಂಗತ್ರಯವ ಕರದಲ್ಲಿ ಪಿಡಿದು,
ಒಳ ಹೊರಗುಯೆಂದೆನ್ನದಾನತದ ನಿಷ್ಕಲದ
ಪರಿಯರುಹಿದ ಶಿವನು ಶಿಷ್ಯ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೫೦ ॥

೫೧

ಅನ್ಯೋನ್ಯವೆಂಬುದು ತನ್ನತ್ತಲಿಲ್ಲ
ಅನ್ಯ ಬಂದಡೆ ಅಯ್ಯನತ್ತಲೆ
ಮುಖವ ಬೆರಸುವ ಭೇದ
ಅಯ್ಯನ ಮುಖವೆ ಮುಖವಾದನೊ.
ಇಂದ್ರಿಯಂಗಳೈದು ಆತನ ಇಂಬಪ್ಪ
ಮುಖವಾಗಿ ಬಂದ ಪ್ರಸಾದವ ಕೊಂಬ
ಎನ್ನ ಕಪಿಲಸಿದ್ಧಮಲ್ಲಿಕಾರ್ಜುನಯ್ಯನಲ್ಲಿ
ಗುರುಭಕ್ತ ಪ್ರಸಾದಿಯ ಪರಿಯಿಂತು. ॥ ೫೧ ॥

೫೨

ಅಪರಸ್ಥಾನದಲ್ಲಿ ಆನಂದಬ್ರಹ್ಮವ ಭೇದಿಸುವ ಪರಿಯೆಂತೋ?
ಪೂರ್ವದಕ್ಷಿಣವೆಂಬ ದಿಕ್ಕುಗಳಲ್ಲಿ ಸಮನಿಸುವ
ಆತ್ಮ ಅಂತರ್ಯಾತ್ಮ ಭೂತಾತ್ಮ ಸರ್ವಾತ್ಮ ಪರಮಾತ್ಮವೆಂಬ
ಆತ್ಮ ಪಂಚಕಗಳೆಂಬವನು
ಹಿಂದು ಮುಂದರಿಯದೆ, ಮುಂದು ಹಿಂದೆಂದರಿಯದೆ
ಸಂಯೋಗದಲಿಕ್ಕಿ ಪ್ರಯೋಗಿಸಿಹೆನೆಂಬ ಯೋಗಿ ಕೇಳಾ:

ಪೂರ್ವವಾವುದು? ದಕ್ಷಿಣವಾವುದು?
ಪೂರ್ವದಲ್ಲಿ ದಿವಾಕರರು
ಹನ್ನೆರಡರ ಆನಂದ ಪ್ರಭೆಯಲ್ಲಿ ಭವಿಸಲ್ಪಟ್ಟ
ನಯನದ ಕಿರಣದ ಕೊನೆಯ ಮೊನೆಯ ಮೇಲೆ
ದಿವ್ಯಾಂಗಯೋಗ ಸಮನಿಸುವ ಪರಿಯೆಂತು ಹೇಳಾ?
ದಕ್ಷಿಣದಲ್ಲಿ ದಿಗ್ವಳಯ ಹದಿನಾಲ್ಕರ ವ್ಯಾಪ್ತಿಯ
ಸಂಚರಿಸದೆ ಸಮನಿಸುವ ಕೋಹಂ ತತ್ವಾರ್ಥದಿಂದತ್ತ
ನಾಹಂ ಪರಮಾರ್ಥದಿಂದತ್ತ
ಸೋಹಂ ಸದ್ಭಕ್ತಿಯ ಮುಟ್ಟದ ದಾಸೋಹ
ನಿನ್ನಲ್ಲಿ ಸಂಯೋಗವ ಎಂತು ಮಾಡುವೆ ಹೇಳಾ?
ಯೋಗಿ ನೀನು
ಯೋಗಕ್ಕೆ ಹರಿವಾವುದು? ಯೋಗಕ್ಕೆ ನೆಲೆಯಾವುದು?
ಮತ್ತೆ ಪೆರತನರಿಯದೆ
ಶಾಶ್ವತವು ನೀನೆ ನೀನೆ ಎಂದೆನ್ನು,
ಸಕಲನಿಷ್ಕಲದೊಳಗೆ ನೀನೆ ನೀನೆಯೆನ್ನಾ
ತಾತ್ಪರ್ಯವರ್ಮ ಕಳೆಗಳೊಳಗೆ ನೀನೆ ನೀನೆಯೆಂದೆನ್ನಾ.
ಓಂ ಗ್ರಾಂ ಫ್ರೀಂ ಘ್ರೂಂ ಎಂಬಕ್ಷರ
ಚತುಷ್ಟಯದ ಮೇಲೆ
ಶುದ್ಧ ಸಂಯೋಗವೆಂಬ ಗದ್ದುಗೆಯಿಕ್ಕಿ
ಅಕ್ಷರದ್ವಯದ ಆನಂದರಾಜ ಕುಳ್ಳಿದ್ದೈದಾನೆ ಜಪಿಸುತ.
ಆ ಜಪವು ನಿತ್ಯ, ಅದು ಮುಕ್ತಿ, ಅದು ಸತ್ಯ.
ಅದು ಪದಕ್ಕೆ ಫಲಕ್ಕೆ ಭವಕ್ಕೆ ದೂರ,
ವರ್ಣಾಶ್ರಯವ ಮೀರಿತ್ತು ತತ್ವ ಪ್ರಾಪಂಚಿಕವ ಜರಿಯಿತ್ತು.
ಮಂತ್ರಂಗಳ ಕೈಯಿಂದ ವಂದಿಸಿಕೊಂಡಿತ್ತು.
ಮೂರರಲ್ಲಿ ಭವಿಸಿತ್ತು, ಆರರಲ್ಲಿ ಫಲವಾಯಿತ್ತು.
ಮೂವತ್ತಾರರಲ್ಲಿ ಹಣೆತಿತ್ತು
ಯೋಗಿಗಳ ನಡೆಸಿತ್ತು ತತ್ವಮಸಿ ಸಂಗಮವಾಯಿತ್ತು.
ಕಪಿಲಸಿದ್ಧಮಲ್ಲಿಕಾರ್ಜುನಯ್ಯನೆಂಬ
ನಿತ್ಯದಲ್ಲಿ ನಿತ್ಯವಾಯಿತ್ತು. ॥ ೫೨ ॥

೫೩

ಅಪ್ರಮಾಣನು ಗುರು ಅನಪ್ರಮಾಣನು ಶಿಷ್ಯ
ಅತ್ಯತಿಷ್ಠಾನಂದ ಜ್ಯೋತಿರ್ಮಯ

ಇಂತಪ್ಪ ಗುರುವಿನ ಆನಂದ ಮಠದೊಳಗೆ
ನಿಶ್ಚಿಂತನಾದ ಶಿಷ್ಯ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೫೩ ॥

೫೪

ಅಪ್ಪಿನಲಾದ ಘಟವು ಅರ್ಪಿ[ತದ]ಲೆ ಲೀಯ,
ಇಪ್ಪತ್ತೈದೆಂದು ಕುರುಹಿಡುವೆ ಏಕೆಲೆ ಮನುಜಾ.
ತಾ ಹುಟ್ಟಿ ತಮ್ಮವ್ವೆ ಬಂಜೆಯೆಂಬ ನ್ಯಾಯದಲ್ಲಿ
ಬೇರೆ ವಿವರಿಸಿ ತೋರಬಲ್ಲಡದು ಯೋಗ.
ಅಭ್ಯಾಸಸಮಾಧಿಯಿಂ ಅನುಭವಿಗಳೆಲ್ಲರಿಗೆ
ಬಯಲ ಸಮಾಧಿಯಾಗದಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೫೪ ॥

೫೫

ಅರ್ಪಿಸೇನೆಂದೆಂಬೆ? ಅರ್ಪಿತವೇತಕ್ಕೆ?
ಅರ್ಪಿತವಾರಿಗೆ? ಅರ್ಪಿತದ ಪರಿಯೆಂತುಟಯ್ಯ?
ಅರ್ಪಿತದ ಮುಖವ ಬಲ್ಲವರಾರು? ಚೆನ್ನಬಸವಣ್ಣನಲ್ಲದೆ.
ಅರ್ಪಿತವುಳ್ಳಡೆ ಕಲ್ಪಿತವೇಕಯ್ಯ ಕಾಡಿ[ಹ]ವು?
ಅರ್ಪಿಸುವ ಭೇದವ ಚೆನ್ನಬಸವಣ್ಣ ಬಲ್ಲ.
ಕಪಿಲಸಿದ್ಧಮಲ್ಲಿಕಾರ್ಜುನಯ್ಯ
ಅರ್ಪಿಸಿ ಸುಖಿ ಚೆನ್ನಬಸವಣ್ಣ, ಸಾವಧಾನಿ ನಿರಂತರಂ. ॥ ೫೫ ॥

೫೬

ಅಭ್ಯಂತರದಲಿಪ್ಪ ಗಂಡ
ಗುರುವಿನ ಅನುಮತದಿಂದ ಸರ್ವಾಂಗಕ್ಕೆ ಬಂದಾನು.
ಮನೆಯನಿಂಬುಮಾಡು ಮದವಳಿಗೆ,
ಮನವ ಶುದ್ಧವ ಮಾಡು ಮದವಳಿಗೆ,
ಮನೆಯಲಿದ್ದೆರಡನೂ ಎಬ್ಬಟ್ಟವ್ವಾ.
ಸಿದ್ಧ ಶುದ್ಧ ಪ್ರಸಿದ್ಧದಿಂದ, ದೀಕ್ಷೆ ಶಿಕ್ಷೆ ಸ್ವಾನುಭಾವದಿಂದ ಎಬ್ಬಟ್ಟಿ
ಮನೆಯ ಮಂಗಳವ ಮಾಡವ್ವಾ.
ಕಪಿಲಸಿದ್ಧಮಲ್ಲಿಕಾರ್ಜುನಯ್ಯನೆಂಬ ಗಂಡ
ಮನೆಯೊಳಕೆ ಬಂದು ಮತ್ತೊಬ್ಬರಿದ್ದಡೆ ಸೈರಿಸ. ॥ ೫೬ ॥

೫೭

ಅಭ್ಯಾಸದ ಅನುಭಾವಿಗಳಿಗೆ ಅಧಿಕಭಕ್ತಿ ಎಂತಪ್ಪುದಯ್ಯಾ?
ವಾಕ್ಯದಲ್ಲಿ ನುಡಿದು, ಕಾಯದಲ್ಲಿ ಮಾಡಲು

ಭಕ್ತಿಯಪ್ಪುದೆ ಮಾನಸವು ಮುಟ್ಟದನ್ನಕ್ಕರ?
ಮಾನಸ ಭಕ್ತಿಸಂಪನ್ನರಾದಡೆ ತಾವು ನೀನಪ್ಪುದೇನರಿದು?
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೫೭ ॥

೫೮

ಅಯ್ಯ ನಿನ್ನ ವಿಕಳತೆಯಿಂದ
ಹಲವು ಪರಿಯ ಭ್ರಮಿತನಾದೆನಯ್ಯಾ.
ಅಯ್ಯಾ ಗಿರಿಗಹ್ವರದೊಳಗೆ
ಹಲವು ಪರಿಯಲಿ ಅರಸಿ ತೊಳಲಿ ಬಳಲಿದೆನಯ್ಯಾ.
ಕಂಡೆ, ಕಂಡೆ, ನೀನಿಪ್ಪ ಠಾವ.
ನೀನು ಭಕ್ತಿ ಕಾರಣ ಪರಶಿವಮೂರ್ತಿಯಪ್ಪುದನು ಕಂಡೆ ಕಂಡೆ
ನಿನ್ನವರಲ್ಲಿ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೫೮ ॥

೫೯

ಅಯ್ಯ! ನೀ ಬಾರಯ್ಯ!
ಬಂದು ಎನ್ನ ಹೃದಯ ಮನ ಶಾಸನವ ಮಾಡಿ ನಿಲ್ಲಯ್ಯ.
ಹಾ! ಅಯ್ಯಾ! ಅಯ್ಯಾ! ನೀ ಬಾರ! ನಿನ್ನ ಧರ್ಮ!
ಕಪಿಲಸಿದ್ಧಮಲ್ಲಿನಾಥಯ್ಯ. ॥ ೫೯ ॥

೬೦

ಅಯ್ಯ ಬಂದಾನವ್ವಾ, ತನು ಚಿತ್ತ ಶುದ್ಧವಾಗಿರು.
ಅಯ್ಯ ಬಂದಾನವ್ವಾ, ಮನವ ಮಂಚವ ಮಾಡಿ ಪಚ್ಚಡಿಸಿರು.
ಅಯ್ಯ ಬಪ್ಪುದ ಕಂಡಳು ಚಿದಂಗನೆ
ಅಯ್ಯ, ಶುದ್ಧ ಸಂಗಮಕೆ ಒಬ್ಬನೆ ಬಂದನು,
ಕಪಿಲಸಿದ್ಧಮಲ್ಲಿಕಾರ್ಜುನಯ್ಯನು. ॥ ೬೦ ॥

೬೧

ಅಯ್ಯ ಬಂದಾನು ಆನಂದ ಮಂಟಪಕ್ಕೆ,
ಎಚ್ಚತ್ತಿರಿರೋ ದ್ವಾರಕಿಂಕರರು;

ಎಚ್ಚತ್ತಿರಿರೋ ಅವಸರಿಗರು.
ಅಯ್ಯ ಸುತ್ತಿಮುತ್ತಿಗೆಗೊಳಗಾದನಾದಡೆ
ಪಟ್ಟಣ ಸರ್ವಸ್ವವೂ ವಶವಹುದು,
ಕಪಿಲಸಿದ್ಧಮಲ್ಲಿಕಾರ್ಜುನಯ್ಯನು
ಹಿಡಿಗಟ್ಟಿಗೊಳಗಹನು. ॥ ೬೧ ॥

೬೨

ಅಯ್ಯ, ಮನದ ಜಡ ಮಣ್ಣ ಕಳೆದುದಯ್ಯಾ.
ಶಾಂತ ಉದಕದೊಳಗಿಕ್ಕಿ ತೊಳೆವೆ ನೋಡಯ್ಯಾ.
ಅದರುದಕವನೆ ಮಾಡಿ ಯೋಗ ಕಂಪನಿಕ್ಕಿ ಮೊರವೆ ನೋಡಯ್ಯ.
ಅದನೊಂದೆಡೆ ತೆಗೆದು ಬಂದು ಬರುಗಾಣದಲಿಕ್ಕಿ ಹಿಳಿವ
ನೋಡಯ್ಯ.
ಹಿಳಿದ ರಸದ ಕಂಪ ತೊಡೆವೆಡೆಯನೊಬ್ಬನೆ
ಕಪಿಲಸಿದ್ಧಮಲ್ಲಿಕಾರ್ಜುನ. ॥ ೬೨ ॥

೬೩

ಅಯ್ಯಯ್ಯಾ ನೀ ಬಾರಯ್ಯ ಬಾರಯ್ಯ.
ಆನಂದದಾದಿಯಲ್ಲಿ ಬಂದೆನ್ನ ಕರದಲ್ಲಿ ನಿಲ್ಲಯ್ಯ.
ಅಯ್ಯಯ್ಯಾ, ಒಯ್ಯನೆ ಕೈಯಗುಡಯ್ಯ.
ಕಂಗೆಟ್ಟ ಪಶುವಾದೆನು ಎಲೆ ಅಯ್ಯಾ
ಕಪಿಲಸಿದ್ಧಮಲ್ಲಿಕಾರ್ಜುನಯ್ಯ ಕರುಣಿಸು ನಿಮ್ಮ ಧರ್ಮ. ॥ ೬೩ ॥

೬೪

ಅಯ್ಯಾ, ಅನಂತ ಭವಂಗಳಲ್ಲಿ ಬಂದು ನಾನು ಶಾಂತನಾದೆ,
ಅಯ್ಯಾ, ನಿನ್ನ ಪ್ರಸಾದವ ನಾನಾ ಭವಂಗಳಲ್ಲಿ ಕಾಣೆ ತಂದೆ.
ನಿನ್ನ ಪಾದೋದಕವ ನಾನಾ ಭವಂಗಳಲ್ಲಿ ಕಾಣೆ ತಂದೆ.
ಇನ್ನು ನೀಂ ಕರುಣಿಸಾ ತಂದೆ, ಕವಿಲೆಯ ಕಂದನಂತಾದೆನಯ್ಯಾ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೬೪ ॥

೬೫

ಅಯ್ಯಾ, ಅನೇಕ ಪುರಾತರ ಅನುಮತದಿಂದ
ಚೆನ್ನಬಸವಣ್ಣನೆನ್ನನಾಗುಮಾಡಿದ ಪರಿಯ ಹೇಳುವೆನಯ್ಯಾ.

ಮುನ್ನಾದಿಯಲಾದ ಸ್ವಯಂಭುಜ್ಞಾನಮಂ ತಿಳುಪಿ
ಆನಂದದ ಕರದಲ್ಲಿ ಇಟ್ಟು
ಬಸವಾಕ್ಷರಸಂಯುತ ಧ್ಯಾನಮೌನಾದಿ ಸಮ್ಯಜ್ಞಾನವನರುಪಿದ
ಗುರುಕರುಣದಿಂದ ಆ ನೀನಾದೆನ್ನೈ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೬೫ ॥

೬೬

ಅಯ್ಯಾ, ಆನಂದದಾನಂದದಲ್ಲಿ ಎಂದಿಪ್ಪೆನೋ.
ಆದಿ ಅಕ್ಷರದೊಳಗೆ ಅಯ್ಯಾ,
ನಾನು ಭೇದಾದಿ ಭೇದವೆಂದರಿದೆನಯ್ಯಾ.
ಹೋದ ಹೋದ ಬಟ್ಟೆಯ ನೋಡಿ ನೋಡಿ
ಬೆರಗಾದೆನಯ್ಯಾ.
ವಿಚಿತ್ರ ಮೂಲ ಕಪಿಲಸಿದ್ಧಮಲ್ಲಿಕಾರ್ಜುನಾ,
ಎನ್ನ ಚಿತ್ತ ವಿಚಿತ್ತವ ಮಾಡದಿರು ತಂದೆ ॥ ೬೬ ॥

೬೭

ಅಯ್ಯಾ, ಎನ್ನ ಮನದಲು ನಿಮಗೀ ಒಡವೆ ಕೆರೆಯೆಂದೂ
ತಿದ್ದುವುದೆಂಬ ಚಿಂತೆಯೆನೆಗೆ ಹೋ! ವಾ!ಹಾ!
ಅಯ್ಯಾ, ಇದ ಮಾಡಿಸು ಒಡೆಯಾ,
ಕೇಳು, ಕೇಳು, ಸಿದ್ಧಮಲ್ಲಿನಾಥಯ್ಯ. ॥ ೬೭ ॥

೬೮

ಅಯ್ಯಾ, ಕರುಣ ಕಂಬನಿಯ ದೆಸೆಗೆಟ್ಟ ವಾರುಧಿಯೊಳಗೆ
ಮುಸುಕಿ ಮುಸುಕಿ ಮೋಹಿಸುತಿದ್ದೆ.
ಅಯ್ಯಾ, ದೆಸೆಗೆಟ್ಟ ಪಶುವಾನು
ಪಶುಪಾಶಮೋಚನ ಹಸುಳೆಯ
ನಿನ್ನ ವಶಕ್ಕೆ ತೆಗೆದೆತ್ತ ಬಾ ಎನ್ನ ಕರುಣಿ
ಕಪಿಲಸಿದ್ಧಮಲ್ಲಿಕಾರ್ಜುನ. ॥ ೬೮ ॥

೬೯

ಅಯ್ಯಾ, ಕಾಮ ಕಾಡಿತ್ತು
ಕ್ರೋಧ ಕೊಂದಿತ್ತು

ಆಮಿಷ ತಾಮಸಂಗಳೆಳವುತ್ತಿವೆ.
ಕರುಣಮಾಡಾ ಹರಹರಾ ಮಹಾದೇವ
ಕರುಣಮಾಡಾ ಶಿವಶಿವ ಮಹಾದೇವ
ಕರುಣಮಾಡಾ ದೆಸೆಗೆಟ್ಟ ಪಶುವಿಂಗೊಮ್ಮೆ
ಕರುಣಮಾಡಾ ವಶವಲ್ಲದ ಪಶುವಿಂಗೊಮ್ಮೆ
ಕರುಣಮಾಡಾ ನೀವಲ್ಲದೆ ಬಲ್ಲವರಿಲ್ಲ
ಕರುಣಮಾಡಾ ಅನ್ಯವ ನಾನರಿಯೆ
ನಿಮ್ಮ ಪಾದವನುರೆ ಮಚ್ಚಿದೆ,
ಎನ್ನ ಕಪಿಲಸಿದ್ಧಮಲ್ಲಿಕಾರ್ಜುನಯ್ಯ ತಂದೆ. ॥ ೬೯ ॥

೭೦

ಅಯ್ಯಾ, ಗುರುವೆಂಬ ಮಹಾಜ್ವಾಲೆಯಲ್ಲಿ ದಹನವಾದೆ
ಬಸವಾಕ್ಷರವೆಂಬ ಮರುಜೇವಣಿಯಲ್ಲಿ ಭವಿಸಿದೆ
ಉಂಡೆ ನಾನು ಶಿಶುವಾಗಿ ಶುದ್ಧ ಸಿದ್ಧ ಪ್ರಸಿದ್ಧವೆಂಬ ಪ್ರಸಾದತ್ರಯ
ಏಕೀಭವಿಸಿ ಕೊಂಡೆ ಎನಗಿನ್ನರಿದಿಲ್ಲ.
ನೀನೊಟ್ಟಿತ್ತೆ ಮಾರಿದ ಮಾರಿಂಗೆ ಸಂದೆ ಕಾಣಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥೭೦॥

೭೧

ಅಯ್ಯಾ, ಜಗತ್ಪಾವನ ನಿಮಿತ್ಯರ್ಥವಾಗಿ
ಸಾಕಾರಲೀಲೆಯ ಧರಿಸಿದ ಸ್ವಯಚರಪರಗುರುಚರಮೂರ್ತಿಗಳ
ಅರ್ಪಿತಾವಧಾನದ ನಿಲುಕಡೆಯೆಂತೆಂದಡೆ:
ಲಿಂಗಾಚಾರ ಮೊದಲಾದ ಸದ್ಭಕ್ತ ಶರಣಗಣಂಗಳಲ್ಲಿ
ಲಿಂಗಾರ್ಪಿತಭಿಕ್ಷಲೀಲೆಯ ಧರಿಸಿ ಹೋದ ವ್ಯಾಳ್ಯದೊಳು
ಆ ಭಕ್ತಗಣಂಗಳು ಶರಣುಹೊಕ್ಕು
ಸಮಸ್ತ ಆಚರಣೆಯ ಒದಗಿಸಿಕೊಟ್ಟಲ್ಲಿ
ದಶವಿಧ ಪಾದೋದಕ
ಏಕಾದಶ ಪ್ರಸಾದದಾಚರಣೆಯಾಗುವದಯ್ಯಾ.
ಇಂತು ಲಿಂಗಾಚಾರ ಭಕ್ತಗಣಂಗಳು ದೊರೆಯದಿರ್ದಡೆ
ವೇದಾಂತಿ ಸಿದ್ಧಾಂತಿ ಭಿನ್ನಯೋಗಿ ಮೊದಲಾದ ಸಮಸ್ತಮತದಿಂದ
ಏಕಶಬ್ದಭಿಕ್ಷವ ಸಪ್ತಗೃಹವ ಬೇಡಿ
ದುರ್ಗುಣಯುಕ್ತವಾದ ಅಯೋಗ್ಯದ್ರವ್ಯವನುಳಿದು

ಸದ್ಗುಣಯುಕ್ತವಾದ ಯೋಗ್ಯದ್ರವ್ಯವ ಕೈಕೊಂಡು,
ಧೂಳಪಾದಜಲದಿಂದ ಭವಿತನವ ಕಳೆದು ಭಕ್ತಪದಾರ್ಥವೆನಿಸಿ
ಅರ್ಘ್ಯಪಾದ್ಯಾಚಮನವ ಮಾಡಿ
ಧಾನ್ಯವಾದಡೆ ಪರಿಣಾಮಜಲದಿಂ ಶೋಧಿಸಿ ಪಾಕವ ಮಾಡಿ,
ಫಲಾಹಾರವಾದಡೆ ಶೋಧಿಸಿ ಪಕ್ವವ ಮಾಡಿಟ್ಟು
ಆಮೇಲೆ, ಅಯ್ಯಾ, ನಿನಗೆ ಭಕ್ತಗಣಂಗಳು ದೊರೆಯದ ಸಮಯದಲ್ಲಿ
ಚತುರ್ವಿಧ ಪಾದೋದಕವೆಂತುಟೆಂದಡೆ:
ಏಕಾಂತವಾಸದಲ್ಲಿ ಪರಿಣಾಮತರವಾದ
ಹಳ್ಳ ಹೊಳೆ ಕೆರೆ ಬಾವಿ ಮಡು ಹೊಂಡ ಚಿಲುಮೆ ಕೊಳ
ಮೊದಲಾದ ಸ್ಥಾನಕ್ಕೆ ಹೋಗಿ
ಪ್ರಥಮದಲ್ಲಿ 'ಶಿವ ಶಿವ ! ಹರಹರ! ಗುರುಬಸವಲಿಂಗ!' ಎಂಬ
ಮಂತ್ರಧ್ಯಾನದಿಂದ ಪಾದವನಿಟ್ಟು ಚರಣಸೋಂಕಿನಿಂ
ಪವಿತ್ರವಾದುದಕವೆ
ಧೂಳಪಾದೋದಕವೆನಿಸುವದಯ್ಯ;
ಆ ಮೇಲೆ ತಂಬಿಗೆಯೊಳಗೆ ಶೋಧಿಸಿ ಬಸವಾಕ್ಷರವ ಲಿಖಿಸುವದೆ
ಗುರುಪಾದೋದಕವೆನಿಸುವದಯ್ಯ;
ಆ ಮೇಲೆ ಅರ್ಚನಾಕ್ರಿಯೆಗಳ ತೀರ್ಚಿಸಿಕೊಂಡು
ನಿಚ್ಚಪ್ರಸಾದಿ ಸಂಬಂಧಾಚರಣೆಯಂತೆ ಮುಗಿದಲ್ಲಿ
ಜಂಗಮ ಪಾದೋದಕವೆನಿಸುವದಯ್ಯ.
ಇಂತು ಚತುರ್ವಿಧ ಪಾದೋದಕದೊಳಗೆ ಷಡ್ವಿಧ ಪಾದೋದಕ
ಉಂಟಯ್ಯ.
ಅದೆಂತೆಂದಡೆ:
ಹಸ್ತವಿಟ್ಟು ಸ್ಪರ್ಶನವ ಮಾಡೆ ಸ್ಪರ್ಶನೋದಕವೆನಿಸುವದಯ್ಯ;
ಲಿಂಗಕ್ಕೆ ಧಾರೆಯಿಂದ ಅಭಿಷೇಕವ ಎರೆದಲ್ಲಿ
ಅವಧಾರೋದಕವೆನಿಸುವದಯ್ಯ;
ಲಿಂಗಾರ್ಪಿತವ ಮಾಡಬೇಕೆಂಬ ಆನಂದವೆ
ಆಪ್ಯಾಯನೋದಕವೆಂದೆನಿಸುವದಯ್ಯ;
ಅರ್ಪಿತಮುಖದಲ್ಲಿ ಹಸ್ತವ ಪ್ರಕ್ಷಾಲಿಸಿ ಖಂಡಿತವ ಮಾಡಿದಲ್ಲಿಗೆ
ಹಸ್ತೋದಕವೆನಿಸುವದಯ್ಯ;
ಲಿಂಗಕ್ಕೆ ಸಂತೃಪ್ತಿಪರಿಯಂತರವು ಅರ್ಪಿತವ ಮಾಡಿ[ದಲ್ಲಿ]
ಪರಿಣಾಮೋದಕವೆನಿಸುವದಯ್ಯ;
ತಟ್ಟೆ ಬಟ್ಟಲ ಲೇಹವ ಮಾಡಿದಲ್ಲಿ ನಿರ್ನಾಮೋದಕವೆನಿಸುವದಯ್ಯ;
ಲೇಹವ ಮಾಡಿದ ಮೇಲೆ ದ್ರವ್ಯವನಾರಿಸಿ ಸರ್ವಾಂಗದಲ್ಲಿ

ಲೇಪಿಸುವದೆ ಸತ್ಯೋದಕವೆನಿಸುವದಯ್ಯ.
ಇಂತೀ ದಶವಿಧ ಪಾದೋದಕದ ವಿಚಾರವ ತಿಳಿದು
ಆ ಮೇಲೆ ನಿಚ್ಚಪ್ರಸಾದಿಯ ಸಂಬಂಧಾಚರಣೆಯಂತೆ
ಪ್ರಸಾದವ ಮುಗಿವದಯ್ಯ.
ಅವರೊಳಗೆ ಏಕಾದಶಪ್ರಸಾದವ ವಿಚಾರವೆಂತೆಂದಡೆ:
ಪ್ರಥಮದಲ್ಲಿ ಹಸ್ತಸ್ಪರ್ಶ ಮಾಡಿದಂತಹದೆ
ಗುರುಪ್ರಸಾದವೆನಿಸುವದಯ್ಯ;
ಇಷ್ಟ ಮಹಾಲಿಂಗಕ್ಕೆ ಮಂತ್ರಸ್ಮರಣೆಯಿಂದ ಮೂರು ವೇಳೆ
ರೂಪನರ್ಪಿಸಿದಲ್ಲಿಗೆ ಲಿಂಗಪ್ರಸಾದವೆನಿಸುವದಯ್ಯ;
ಎರಡುವೇಳೆ ಇಷ್ಟಮಹಾಲಿಂಗದೇವಂಗೆ
ರೂಪನರ್ಪಿಸಿ ಜಿಹ್ವೆಯಲ್ಲಿಟ್ಟಲ್ಲಿ
ಜಂಗಮ ಪ್ರಸಾದವೆನಿಸುವದಯ್ಯ ;
ಆ ಮೇಲೆ ಲಿಂಗದೇವಂಗೆ ತೋರಿ ಬೋಜೆಗಟ್ಟಿ
ಲಿಂಗದೇವಂಗೆ ತೋರಿ ಜಿಹ್ವೆಯಲ್ಲಿಟ್ಟಂತಹದೆ
ಪ್ರಸಾದಿಯ ಪ್ರಸಾದವೆನಿಸುವದಯ್ಯ ;
ಆ ಭೋಜ್ಯರೂಪಾದ ಪ್ರಸಾದಿಯ ಪ್ರಸಾದದೊಳಗೆ
ಮಧುರ ಒಗರು ಕಾರ ಆಮ್ಲ ಕಹಿ ತೃಪ್ತಿ- ಮಹಾತೃಪ್ತಿಯೆ
ಆಪ್ಯಾಯನ, ಸಮಯ, ಪಂಚೇಂದ್ರಿಯವಿರಹಿತ,
ಕರಣಚತುಷ್ಟಯವಿರಹಿತ, ಸದ್ಭಾವ, ಸಮತೆ, ಜ್ಞಾನಪ್ರಸಾದ
ಮೊದಲಾದವು ಸಪ್ತವಿಧಪ್ರಸಾದವೆನಿಸುವದಯ್ಯ.
ಇಂತು ಪರಾಧೀನತೆಯಿಂ ಭಿಕ್ಷವ ಬೇಡಲಾರದಿರ್ದಡೆ,
ಅರಣ್ಯದಲ್ಲಿ ಫಲರಸಯುಕ್ತವಾದ ಹಣ್ಣು ಕಾಯಿಗಳ
ಲಿಂಗಾರ್ಪಿತಭಿಕ್ಷೆಯೆಂದು ಆ ಫಲಾದಿಗಳ ತೆಗೆದುಕೊಂಡು ಶೋಧಿಸಿ,
ಪವಿತ್ರವ ಮಾಡಿ ಲಿಂಗಾರ್ಪಿತ ಭೋಗಿಯಾದಾತನೆ
ಸ್ವಯಂಭು ಪ್ರಸಾಧ ಭಕ್ತನಾದ ಚಿತ್ಕಲಾಪ್ರಸಾದಿ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೭೧ ॥

೭೨

ಅಯ್ಯಾ, ಜನಕ ಜನನಿಯರಿಬ್ಬ[ರಿ]ರವ ಕೇಳಾ
ಶಶಿಬಿಂಬದಂತೆ ಶಿವಶಕ್ತಿ ಕಂಡಯ್ಯ
ಇಲ್ಲಿ ಒಮ್ಮೆಯೂ ಭೇದವಿಲ್ಲ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೭೨ ॥

೭೩

ಅಯ್ಯಾ, ನಾನೆಂಬುದನು ಒಯ್ಯನೆ ಒಯ್ಯನೆ ಮರೆದೆ.
ಅಯ್ಯಾ, ನೀ ಗುರುವಾಗಿ ಕರುಣದಿಂದ ಒಯ್ಯನೆ ಬಂದೆನ್ನ
'ಅಯ್ಯೊ ಮಗನೆ' ಎಂದು ಕೈವಿಡಿದು
ತೆಗೆದೆನ್ನ ಸಲಹಿದಿರಿ ಕರುಣದಿಂದ.
ಆನೀಗ ನಿಮ್ಮ ಅವ್ಯಯದ ಪದಕಾನು ಮೂಲನಾದೆ
ಕಪಿಲಸಿದ್ಧಮಲ್ಲಿಕಾರ್ಜುನ. ॥ ೭೩ ॥

೭೪

ಅಯ್ಯಾ, ನಾನೊಂದ ಬೇಡುವೆ ನಿಮ್ಮಲ್ಲಿ
ಎನಗೊಂದು ಲೇಸ ಮಾಡಯ್ಯ.
ನಾರಿಯರುರದ ಗಾಳಿ ಸೋಂಕದಂತೆ
ಎನ್ನುವ ಮಂತ್ರಿಸಿ ರಕ್ಷಿಸಯ್ಯ.
ಎನಗಿನಿಸು ಮಾಡಿ ಬದುಕಿಸಯ್ಯ ಎನ್ನ
ಕಪಿಲಸಿದ್ಧಮಲ್ಲಿಕಾರ್ಜುನ. ॥ ೭೪ ॥

೭೫

ಅಯ್ಯಾ, ನಿತ್ಯನು ನೀನೆ;
ಆ ಸತ್ಯಶುದ್ಧ ದೇಹಿ ನೀನೆ ಕಾಣಾ, ಎಲೆ ಅಯ್ಯಾ.
ಅಯ್ಯಾ, ನೀನು ಕಾರುಣ್ಯವುಳ್ಳ ಮಹದಾಶ್ರಯ ಕಾಣಾ,
ಎಲೆ ಅಯ್ಯಾ,
ನೀನು ಭಕ್ತದೇಹಿಕ ದೇವನಾದ ಕಾರಣ ಮಚ್ಚಿದೆನಯ್ಯಾ.
ಒಲುಮೆಯ ಮಚ್ಚು ನಿಶ್ಚಯವೆಂದು ನಂಬಿದೆನಯ್ಯಾ.
ಗುರುವೇ, ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೭೫ ॥

೭೬

ಅಯ್ಯಾ, ನಿನಗೆರಗಿದವರಿಗೆ ಜನವರೆಗಿ
ಮರುಗುವದಿದೆ ಕಾರಣವಯ್ಯ.
ಅಯ್ಯಾ, ಹಾ ಹಾ, ನಾಲಗೆಯೆರಳೆಗೆ ಗುಣವೆಂಬ ತಂಪಿಗೆ
ಜನವೆರೆಗಿ ಮರುಗುವದಯ್ಯ.

ಹಾಹಾ, ಅಲ್ಲಿ ನೀನಿಪ್ಪ ಕಾರಣ ತಂಪಿನ ಸಿಂಪುಳಿಕ
ಕಪಿಲಸಿದ್ಧಮಲ್ಲಿನಾಥಯ್ಯಾ. ॥ ೭೬ ॥

೭೭

ಅಯ್ಯಾ, ನಿನ್ನ ಆಜ್ಞೆಯಲ್ಲಿ ಇರದವರಾರು?
ಬ್ರಹ್ಮೇಂದ್ರಾದಿ ದೇವತೆಗಳೆಲ್ಲ!
ಅಯ್ಯಾ, ನಿಮ್ಮಾಜ್ಞೆಯಲ್ಲಿ ಆಗದವರಾರು?
ವಿಷ್ಣು ಮೊದಲಾದ ಮನುಜರೆಲ್ಲ!
ಸರ್ವ ಚೈತನ್ಯಾತ್ಮ ಮುಖಲಿಂಗವೆ ಅವಧಾರು
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೭೭ ॥

೭೮

ಅಯ್ಯಾ, ನಿನ್ನ ಕರವೆಂಬ
ಉರುತರ ಗರ್ಭದಲ್ಲಿ ಭವಿಸಿದೆನಯ್ಯಾ.
ನಿನ್ನ ಕರುಣವೆ ಎನಗೆ ಮಹಾಕಾನನವಾಯ್ತು.
ಲೋಕದ ಪಾತಕಿಗಳು ಉಂಡಂತೆ ಉಂಡೆನಾದಡೆ,
ಬಂದಂತೆ ಬಂದೆನಾದಡೆ ನಿಜ ನಿಮ್ಮಾಣೆ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೭೮ ॥

೭೯

ಅಯ್ಯಾ, ನಿನ್ನ ಕೂಟದ ಸುಖದಲ್ಲಿ
ನೀ ನಾನೆಂಬ ಸಂದಳಿದೆ ಅಯ್ಯಾ.
ಮೇಲೆ ಬಿದ್ದ ಮಸಿಯನ್ನು ಅರಿಯದೆ
ಕೂಟದಲ್ಲಿ ತಾಮಸಿಯಾದೆನಯ್ಯಾ.
ಕಾರುಣ್ಯಕರನೆ, ಕಪಿಲಸಿದ್ಧಮಲ್ಲಿನಾಥಯ್ಯಾ,
ನಿರ್ನಾಮವಾಗಿ ನಿತ್ಯವೆಯ್ದಿದೆ ತಂದೆ. ॥ ೭೯ ॥

೮೦

ಅಯ್ಯಾ, ನಿನ್ನನೆನ್ನ ಕರದಲ್ಲಿಟ್ಟು
ಆ ಅಕಾಯದ ಕಳೆಯಿಂದತ್ತಲಿ,
ಅಯ್ಯಾ, ಜೀವ ಸಂಭೋಗನಾದೆನು.
ವಾಯಕಾಯವೆಂಬವಾ ಮೀರಿ ನೀನಾದೆ,
ಕಪಿಲಸಿದ್ಧಮಲ್ಲಿನಾಥಯ್ಯ. ॥ ೮೦ ॥

೮೧

ಅಯ್ಯಾ, ನಿನ್ನವರ ಕಂಡು ಕರಗದನ್ನಕ್ಕರ
ನಿನ್ನವರ ಕಂಡು ನೀನೆಂದೆ ಕಾಣದನ್ನಕ್ಕರ
ನಿನ್ನವರ ಮೂರ್ತಿಧ್ಯಾನದಲ್ಲಿ ಮೂರ್ಛೆವೋಗದನ್ನಕ್ಕರ
ವೇಷದ ಗೌಳೆಯರ, ಲಾಂಛನದ ಲಂಪಟರ
ಮಜ್ಜನಕ್ಕೆರೆವ ಭವಿಗಳಿಗೆ ಏಕೊಲಿವೆಯಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೮೧ ॥

೮೨

ಅಯ್ಯಾ ನಿನ್ನ ಸಂಗದಲ್ಲಿ ಸಂಗಿಯಾದೆ
ಅಯ್ಯಾ, ನಿನ್ನ ಸಂಗದಿಂದ ಕಾಕುತನವ ಬಿಟ್ಟು
ಬೇಕಾದ ಹಾಂಗೆಯಾದೆ.
ಅಯ್ಯಾ, ನಿನ್ನ ಒಲವು ಅನೇಕ ಪ್ರಕಾರದಲ್ಲಿ
ಪಸರಿ ಪರ್ಬಿತ್ತು ಎನ್ನ ಸರ್ವಾಂಗದಲ್ಲಿ.
ನಿನ್ನವರೊಲುಮೆಯ ಆನಂದವನು ಎನಗೆ ಕರುಣಿಸು
ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ ನಿಮ್ಮ ಧರ್ಮ ॥ ೮೨ ॥

೮೩

ಅಯ್ಯಾ, ನಿನ್ನ ವಿಕಳತೆಯಿಂದ ಹಾಹಾ! ಭೂತನಾದೆ.
ಅಯ್ಯಾ, ನಿನ್ನ ನೆನಹಿನ ಧ್ಯಾನದಿಂದ ಮೂರ್ಛೆಹೋದೆ.
ಅಯ್ಯಾ, ನಿನ್ನ ಭಕ್ತಿತ್ರಯದಿಂದ ಶುದ್ಧ ಮುಕ್ತನಾದೆನಯ್ಯಾ.
ತಾತ್ಪರ್ಯದಲ್ಲಿ ಶುದ್ಧಾತ್ಮನಾಗಿ ನಿನ್ನ ಭಕ್ತಿರತಿಯಲ್ಲಿ ಸಂಪನ್ನನಾದೆ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೮೩ ॥

೮೪

ಅಯ್ಯಾ, ನಿನ್ನಾಳಾಗಿ ಆರೆನಯ್ಯಾ ಕೆಲಬರ ಬೋಸರಿಸಲು.
ಅಯ್ಯಾ, ನಿನ್ನಾಳಾಗಿ ಆರೆನಯ್ಯಾ ಕೆಲಬರ ಸ್ತುತಿಯಿಸಲು.
ಅಯ್ಯಾ, ನೀ ನಿತ್ಯನೆಂದು ಮರೆವೊಕ್ಕಡೆ ಸೀಯದಂತಿಪ್ಪರೆ?
ಶಿವನೆ ನಿನ್ನ ಕಾಮ್ಯಾರ್ಥವ ಬೇಡಿ ಬಾಧೆಬಡಿಸೆ.
ನಿನಗೇನುಂಟಯ್ಯಾ, ನೀನು ನಿಃಕಾಮಿ.
ಅಂಜದಿರು, ಫಲಪದವ ಬೇಡೆ; ನೀನಿಹ ಲೋಕ ನಿನಗಿರಲಿ.

ಕಾಡದೆ ನಿನ್ನವರೊಳಗೆ ಕೂಡಿರುವ ಪದವ ಕರುಣಿಸಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೮೪ ॥

೮೫

ಅಯ್ಯಾ, ನಿಮ್ಮ ಕಂಡು ಕಂಗಳು ನೋಡಲಮ್ಮದೆ
ಬೆಚ್ಚಿ ಬೆದರಿದುವಯ್ಯಾ;
ನೀನು ಶತಕೋಟಿ ಸೂರ್ಯಪ್ರಕಾಶಕ್ಕತೀತನು!
ನಿನ್ನ ಕಂಡ ಬಳಿಕ ಕರ್ಮವುಂಟೆ?
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೮೫ ॥

೮೬

ಅಯ್ಯಾ, ನಿಮ್ಮನೆನ್ನ ಕರದಲಿ
ಆರುಕಾಯದ ಕಳೆಯಿಂದೆತ್ತಲಿ.
ಅಯ್ಯಾ, ಜೀವ ಸಂಭೋಗನಾದೆನು.
ವಾಯದ ಕಾಯವೆಂಬವ ಮೀರಿ ನೀನಾದೆ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೮೬ ॥

೮೭

ಅಯ್ಯಾ, ನಿಮ್ಮ ಮಹಾತ್ಮೆಯನಾರಿಗೆಯೂ ಉಪಮಿಸಬಾರದು.
ಹಾ ಹಾ, ಅಯ್ಯಾ, ನೀ ಮಹಾಗುರುವು ಕಂಡಯ್ಯಾ.
ನೀ ಮಹಾಮಹಾದೇವನೈ
ಎನ್ನ ಕಪಿಲಸಿದ್ಧಮಲ್ಲೇಶ್ವರ ದೇವರ ದೇವನಯ್ಯಾ. ॥ ೮೭ ॥

೮೮

ಅಯ್ಯಾ, ನಿಮ್ಮ ಮಹಾನುಭಾವರಿಂದ
ಮಹಾವಸ್ತುವಿನ ಪ್ರಮಾಣವನರಿದೆ;
ಶುದ್ಧ ಸಿದ್ಧ ಪ್ರಸಿದ್ಧವಿದೆಂದರಿದೆ;
ಪಾದೋದಕ ಪ್ರಸಾದ ಭಕ್ತಿಯೆಂಬ ನಿಶ್ಚಯವನರಿದೆ.
ನಿಮ್ಮ ಮಹಾನುಭಾವರಿಂದ ಪರತತ್ವಪ್ರಮಾಣುವನರಿದು
ಶರಣು ಶರಣೆನುತಿದ್ದೆನಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೮೮ ॥

೨೧೫

ಎರಡು ತೋಳೆರಡು ಭುಜ,
ಆ[ವಾ]ತನ ಹಿಡಿವಾಗಲಿ ಒಂದೇ ನೋಡಾ.
ಕಣ್ಣೆರಡಂಗ ಬೇರಿರೆ
ಆ[ವಾ]ತನ ಹಿಡಿವಾಗ ಒಂದೇ ನೋಡಾ.
ಇಬ್ಬರಿಗೊಬ್ಬ ಗಂಡ ಕಪಿಲಸಿದ್ಧಮಲ್ಲಿನಾಥಯ್ಯಾ. ॥ ೨೧೫ ॥

೨೧೬

ಎರಡು ಸಾದಾಖ್ಯದಲ್ಲಿ ಒದವಿದ ಬ್ರಹ್ಮವನು
ಪದಚ್ಛೇದವ ಮಾಡುತ್ತಿದ್ದಳವ್ವೆ.
ಮೂರಾರಲ್ಲಿ ಹುಟ್ಟಿ ಆರಾರನತಿಗಳೆದಳವ್ವೆ.
ಮೀರಿದಾನಂದದ ನೆಲೆಮನೆಯಾಗಿದ್ದಳವ್ವೆ.
ಕಪಿಲಸಿದ್ಧಮಲ್ಲಿನಾಥನ ಕೂಡಿ ಅವ್ವೆ. ॥ ೨೧೬ ॥

೨೧೭

ಎರಡೆಂಟನತಿಗಳೆದು ಮುನ್ನೂರ ಮೂವತ್ತು
ಕರದರ್ಪಣೆಯ ಭೇದವೊಂದು ಮಾಡಿ,
ಜಗವ ಸುತ್ತಿದ ಸೀಮೆ ಹದುಳವಿಡಬಲ್ಲರೆ
ಪರಬ್ರಹ್ಮ ಗುರು ತಾನು ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೧೭ ॥

೨೧೮

ಎರಡೆಂಟು ಗ್ರಾಮದಲಿ ಚೌಮತವ ಮನ್ನಿಸಿ
ಆನಂದದಿಂದವರು ನಿತ್ಯರಯ್ಯಾ.
ಧ್ಯಾನಸಮಾಧಿ ತಾನು ರೂಪಾದೊಡೆ
ಅವರ ನೀನು ನೀನೆಯೆಂಬೆ ಕಾಣಾ,
ಕಪಿಲಸಿದ್ಧ ಮಲ್ಲಿಕಾರ್ಜುನಾ. ॥ ೨೧೮ ॥

೨೧೯

ಎರಡೆಂಟು ಗ್ರಾಮದಲ್ಲಿ ಮಡಿದಿಪ್ಪ ಬ್ರಹ್ಮಾಂಡದತಿಶಯದ
ಕುಳ ತಾನು ಸಮತೆ ರೂಪುಯೆನ್ನು ನೀ.

ಸಮತೆಯನು, ಮುನ್ನಾದ ಸಮತೆಯನು ಮನ್ನಣೆಯ ಸಮತೆ
ದ್ವಾದಶ ಗ್ರಾಮದ ಸೀಮೆ ಸಾಹಿತ್ಯದಲಿ
ಸೋಮಪ್ರಭೆಯೊಂದರಲಿ ತಾಮಸಂವಾದಲ್ಲಿ
ತನು ತನ್ನಯ ಗ್ರಾಮಸೀಮೆಯನರಿದು
ನಿತ್ಯಸಾಯುಜ್ಯದಲಿ ಸಮತೆ ಸಾಯುಧನಾದೆನಯ್ಯ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೧೯ ॥

೩೨೦

ಎಲವೆಲವೊ ನಲ್ಲ,
ನಿನ್ನ ಕೂಡದ ಮುನ್ನ ಕಾಣೆ.
ಕೂಡಿದ ಬಳಿಕ ಮತ್ತೆ ಕಾಣೆನಯ್ಯಾ.
ನಿನ್ನ ಕೂಡಿದ ಸುಖದಿಂದ ಆನೇನೆಂದರಿಯೆನಯ್ಯಾ
ಎನ್ನ ಕಪಿಲಸಿದ್ಧಮಲ್ಲಿನಾಥಯ್ಯಾ. ॥ ೩೨೦ ॥

೩೨೧

ಎಲ್ಲರ ಎಲ್ಲ[ಂತಲ್ಲ], ನಿನ್ನ ಪರಿ ಹೊಸತು.
ಆಚೆ ಅನಾಹತ ಅಪರಸ್ಥಾನಕ್ಕೆ ಬಂದಡೆ ನೀನು ಪೂರ್ವಸ್ಥಾನಕ್ಕೆ ಬಪ್ಪಿ,
ಆಚೆ ಪೂರ್ವಸ್ಥಾನಕ್ಕೆ ಬಂದಡೆ ನೀನು ದಕ್ಷಿಣಸ್ಥಾನಕ್ಕೆ ಬಪ್ಪಿ,
ಆಚೆ ದಕ್ಷಿಣಸ್ಥಾನಕ್ಕೆ ಬಂದಡೆ ನೀನು ಪಂಚಮಸ್ಥಾನಕ್ಕೆ ಬಪ್ಪಿ,
ಆಚೆ ಅನಾಹತ ಅಪರಸ್ಥಾನವನೆಯ್ದಲಾರದೆ ಇದ್ದಡೆ
ಕೋಹಂ ನಿಚ್ಚಣಿಗೆಯನಿಕ್ಕಿಟ್ಟು,
ಸಂಗಮಸ್ಥಾನಕ್ಕೆ ಸಂಯೋಗ ಪ್ರಾಪ್ತಿಯಂ ಮಾಡಿಸಿದೆ.
ನಿನ್ನ ಸಂಯೋಗದ ಸುಖದಿಂದ ಸಂಪನ್ನೆಯಾಗಿ
ಇಹಪರವೆಂಬುದನು ಏಕವ ಮಾಡಿದಳು.
ಅವ್ವೆಯ ಕರುಣದಿಂದ ಎನಗೆ ಅರಿವಪ್ಪ ಆಧಿಕ್ಯವಿಲ್ಲ
ಕಪಿಲಸಿದ್ಧಮಲ್ಲಿಕಾರ್ಜುನಯ್ಯ ಗುರುವಿನ ಕರುಣದಿಂದ
ಸದ್ಭಕ್ತಿಯನರಿದು ಸಕಲಯೋಗಕ್ಕೆ ಮೂಲನಾದೆನು. ॥೩೨೧॥

೩೨೨

ಎಲ್ಲ ಮರಂಗಳೊಳು ಅಯ್ಯಾ ಸೊಲ್ಲಿಡಬಲ್ಲಡೆ
ಅಯ್ಯ ಬಲ್ಲತನವೆಂಬುದೇನರಿದು ಹೇಳು.

ಸಲ್ಲಿಲತವೆಂಬ ಸತ್ಯದ ನೆಲೆಯನರಿದರೆ
ಬಲ್ಲಹ ಇಹಪರಕೆ ಗುರು ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೨೨ ॥

೩೨೩

ಎಲ್ಲರ ನೆನಹಿನ ಆಯುಷ್ಯದ ಪುಂಜವೆ,
ಅವಧಾರು ಅವಧಾರು;
ಅಯ್ಯಾ ಎನ್ನ ನೆನಹಿನ ಮಂಗಳನೆ,
ಅವಧಾರು ಅವಧಾರು,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೨೩ ॥

೩೨೪

ಎಲ್ಲರ ಪರಿಯಲ್ಲ ಅವನ ಪರಿ ಹೊಸತು;
ಕಾಲಾರರಲ್ಲಿ ನಡೆವ, ಕಿವಿಯಲ್ಲಿ ಉಂಬ,
ಮೂಗಿನಲ್ಲಿ ನೋಡುವ, ಬಾಯಲ್ಲಿ ಭಾವಿಸುವ,
ಕಣ್ಣಿನಲ್ಲಿ ಮೂರ್ಛೆಹೋಹ,
ಬಂದುದನತಿಗಳೆವ, ಬಾರದುದ ತನ್ನದೆಂಬ;
ಇಂಥಾ ವಿನೋದವಿಚಿತ್ರನವ್ವಾ, ಕಪಿಲಸಿದ್ಧಮಲ್ಲಿಕಾರ್ಜುನನು.
॥ ೩೨೪ ॥

೩೨೫

ಎಲ್ಲರ ಪರಿಯಲ್ಲ ಎಮ್ಮ ಗಂಡನ ಪರಿ.
ಒಬ್ಬರು ಬಲ್ಲುದ ತಾನರಿಯ, ತಾ ಬಲ್ಲುದನೊಬ್ಬರರಿಯರು.
ತವಕ ಬಂದಲ್ಲಿ ಕೂಡುವ, ಅಲ್ಲದಡೊಲ್ಲದ ಹಾಂಗಿರ್ಪ,
ಕಪಿಲಸಿದ್ಧಮಲ್ಲಿಕಾರ್ಜುನಯ್ಯನು. ॥ ೩೨೫ ॥

೩೨೬

ಎಲ್ಲರೊಳಗಿಪ್ಪರೆ ಅಲ್ಲಲ್ಲಿ ರಚಿಸುವೊಡೆ
ಎಲ್ಲರೋಪಾದಿಯೆ ಎಲೆ ಅಯ್ಯ ನೀನು.
ಸಲ್ಲಲಿತ ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ,
ಭಕ್ತರಲ್ಲಿಯಲ್ಲದೆ ನೀನು ಸುಲಭನಲ್ಲ. ॥ ೩೨೬ ॥

೩೨೭

ಎಲ್ಲ ವಾಹಿ ಇವಗೆ ನೋಡಾ!
ನೀರೆಣ್ಣೆ ಬೆಣ್ಣೆ ಇವಗೆ ನೋಡಾ!
ಈ ವಾಹಿ ಕಿಚ್ಚು ಇವಗೆ ಸವೆದೆನವ್ವಾ!
ಎಂತುಟನು ಸರಿಮಾಡಿ ನುಂಗುವ ಕಪಿಲಸಿದ್ಧಮಲ್ಲಿನಾಥಯ್ಯ!
॥ ೩೨೭ ॥

೩೨೮

ಎಲ್ಲ ಹೆಂಗೂಸುಗಳು ಬಂದು ಮುಟ್ಟಿ ಮೂವಟ್ಟೆಯ
ನೆರೆವಳು ನಲ್ಲನ ಇವಳೈವರವರೆಲ್ಲರ
ನಾವೀ ಮೂಗನ ನೆರೆವೆವವ್ವಾ
ಉಸುರದೆ ಬಂದವನ, ಉಸುರದೆ ನೆರೆವ
ಕಪಿಲಸಿದ್ಧಮಲ್ಲಿನಾಥನ. ॥ ೩೨೮ ॥

೩೨೯

ಎಲ್ಲಿ ನೋಡಲು ತಾಯ ಕೊಂದವರೂಟ ಘನವಾಗಿದೆ.
ಈ ಗುಣ ಹರಿವ ಹಕ್ಕಿಗೆ ಸಂಬಂಧವಿಲ್ಲ.
ನಿಮ್ಮೂಟವಂ ಕಂಡವರೊಳರೆ ಚೆನ್ನಬಸವಣ್ಣನಲ್ಲದೆ.
ಕಪಿಲಸಿದ್ಧಮಲ್ಲಿನಾಥಯ್ಯಾ,
ನಿಮ್ಮ ಧರ್ಮವಿಡಿವ ಚೆನ್ನಬಸವಣ್ಣನಿಂದ ಸುಖವ ಕಂಡೆನು.
॥ ೩೨೯ ॥

೩೩೦

ಎಲೆ ಅಯ್ಯಾ, ಎನಗೆ ಜವ್ವನವೇರಿತ್ತಯ್ಯಾ, ಹರೆಯ ಹತ್ತಿತ್ತಯ್ಯಾ,
ಪ್ರಾಯ ಸಮರೂಪಿಗೆ ಬಂದಿತ್ತಯ್ಯಾ.
ಜವ್ವನಕ್ಕೆ ಜಯವಂತನಿಲ್ಲ, ಹರೆಯಕ್ಕೆ ಹರುಷಿತನಿಲ್ಲ.
ಪ್ರಾಯಕ್ಕೆ ಪ್ರೌಢಿಗನಿಲ್ಲದೆ ಭ್ರಮೆಬಡುತ್ತಿದ್ದೇನಯ್ಯಾ.
ಜವ್ವನಿಗ ಜಯವ ಮಾಡಿವಡೆ ಆನು ಬದುಕುವೆನಯ್ಯಾ,
ಕಪಿಲಸಿದ್ಧಮಲ್ಲಿನಾಥಯ್ಯಾ. ॥ ೩೩೦ ॥

೩೩೧

ಎಲೆ ಅಯ್ಯಾ, ಎಲೆ ನಲ್ಲ,
ಎನ್ನ ಮಾಯೆ ಮಕ್ಕಳು ದಂಡ ಕೇಳಾ.
ಆಹಾ! ಅಯ್ಯಾ ಎನ್ನ ಮನದ ಬೆನ್ನ ಬೆನ್ನ ಬಾರೊ.
ಬಂದು ನಿಂದು ಕೂಡಿಸಯ್ಯಾ.
ಅಯ್ಯಾ ಎನ್ನ ಮನ ಸಂಗಡ ಮನ ನಿಮ್ಮ ಕಂಡಡಿಮಾಡುವುದು,
ಕಪಿಲಸಿದ್ಧಮಲ್ಲಿನಾಥಯ್ಯನ. ॥ ೩೩೧ ॥

೩೩೨

ಎಲೆ ಅಯ್ಯಾ, ಎಲೆ ನಲ್ಲ,
ನಿನ್ನ ಕೈಯ ಬಿಲ್ಲ ಗುಣವ ಕಂಡೆ ನಾನಯ್ಯ.
ಗುರಿ ಎರಡ ಕೊಂದಂಬನೆಸುವ
ಅದ ಒಂದೆಡೆಗೆ ಬರ ಹರಿಯ ಹುಟ್ಟ ಹರಿಯಲೆಸುವ
ವಿರಿಂಚನ ಬಿಡ ! ಅಭಿನ್ನದಲೆಸುವ!
ಎನ್ನ ಕಪಿಲಸಿದ್ಧಮಲ್ಲಿನಾಥಯ್ಯನು! ॥ ೩೩೨ ॥

೩೩೩

ಎಲೆ ಅಯ್ಯಾ, ನಿನ್ನ ಬೆಳಗಿನ ಪರಿಯ ಕೇಳು ಕಂಡಾ.
ನಾನಾರೆಂಬುದ ತಿಳಿದು ನೋಡಿ
ಕಂಡು ಕಂಡು ಬೆಳಗ ಕಾಬ ಪರಿ ಎಂತು ಹೇಳಾ.
ಕಂಡುದ ಕಂಡು ಕಾಯದೊಳಗೆ ಸಂತವಿಡುವ ಪರಿ ಎಂತಯ್ಯಾ?
ಕಪಿಲಸಿದ್ಧಮಲ್ಲಿನಾಥಯ್ಯಾ,
ನೀನೆನ್ನ ಮನವ ತಿಳಿವಡೆ ಅಸಾಧ್ಯವುಂಟೆ ದೇವರ ದೇವಾ?
॥ ೩೩೩ ॥

೩೩೪

ಎಲೆ ಅಯ್ಯಾ, ನಿಮ್ಮ ಬರವಿಂಗೆ ಕಣ್ಬೇಟಗೊಂಡೆನು.
ಎಲೆ ಅಯ್ಯಾ, ನಿಮ್ಮ ಬರವಿಂಗೆ ಎನ್ನ ಮನವೆಂಬ
ಮಂಚವ ಪಚ್ಚಡಿಸಿದೆ.
ಎಲೆ ಅಯ್ಯಾ, ನಿಮ್ಮ ಬರವಿಂಗೆ ಚಿತ್ತ ಸುಯಿಥಾನಿಯಾಗಿದ್ದೇನೆ.
ಎಲೆ ಅಯ್ಯಾ, ನಿಮ್ಮ ಬರವಿಂಗೆ ಜ್ಞಾನದ

ಸೆರಗ ಹಾಸಿ ಆಸೆಬಡುತ್ತಿದ್ದೇನೆ.
ಎಲೆ ಅಯ್ಯಾ, ನೀ ಬಂದು ಪಿರತವಿಲ್ಲದೆ ಕೂಡಿ ನಿನ್ನವಳೆಂದೆನಿಸಾ,
ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ. ॥ ೩೩೪ ॥

೩೩೫

ಎಲೆ ಅಯ್ಯಾ, ಪುರದ ಮೇಲುಪ್ಪರಿಗೆಯ ಕೆಲಸವನೇನೆಂಬೆನಯ್ಯಾ!
ಮುತ್ತಿನ ಕಳಸದ ಮೇಲೆ ಒಂದು ಅರಳಿದ ಪುಷ್ಪ.
ಆ ಪುಷ್ಪದ ಪರಿವೀಧಿಯೊಳಗೆ ಅಗ್ನಿಯ ಕಂಡೆನಾಗಿ,
ಕಪಿಲಸಿದ್ಧಮಲ್ಲಿನಾಥಾ ನಿಮ್ಮ ಶರಣ
ಚೆನ್ನಬಸವಣ್ಣ ತೋರಿದ ಹಾದಿ ಸುಪಥವಾಯಿತ್ತು.
ನಾನು ಚೆನ್ನಬಸಣ್ಣಂಗೆ ನಮೋನಮೋ ಎನುತಿರ್ದೆನು. ॥ ೩೩೫ ॥

೩೩೬

ಎಲೆ ಬಸವಾ, ಎಲೆ ಚೆನ್ನಬಸವಾ,
ಸಟೆ ಏಕೋನಿಷ್ಠೆಯಾಯಿತ್ತಯ್ಯಾ,
ದಿಟ ಪುಟ ಮುಕ್ತಿಯಾಯಿತ್ತಯ್ಯಾ,
'ಮೃತಿಕಾಲನಾಶಂ' ನಮೋ ಕಪಿಲಸಿದ್ಧಮಲ್ಲಿನಾಥಯ್ಯಾ,
ಬಸವಣ್ಣನಿಂದ ಪ್ರಾಣಲಿಂಗಸಂಬಂಧವಡಗಿತ್ತು. ॥ ೩೩೬ ॥

೩೩೭

ಎಲೆ ಭವಗೇಡಿ ನಿನ್ನುವನು ತೋರದೆ ಕಾಡಿದೆ ಹಿಂದೆ.
ಅಯ್ಯಾ, ತನುಗುಣ ಸಾಹಿತ್ಯ ನೀನೆ.
ನೀನೆನ್ನ ಮನದ ಮಹೋತ್ಸವನೆ ಅಯ್ಯಯ್ಯಾ,
ಅವ್ವೆಯ ಅಯ್ಯನಾಗಿಯೆಂದಿಪ್ಪೆ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೩೭ ॥

೩೩೮

ಎಲೆ ಭ್ರಾಂತುಗೊಂಡ ಮರುಳೆ, ನೀ ಕೇಳಾ, ಹಾ! ಹಾ!
ಅಯ್ಯಾ, ಈಶ್ವರ ತಾ ಮುನ್ನ ಹರಸಿ ಕಟ್ಟಿದ ನೊಸಲಪಟ್ಟವ
ಬೇರೆ ಮತ್ತೊಬ್ಬರು ಹೆಚ್ಚಿಸಿ ಕುಂದಿಸಿ ಕಟ್ಟಬಲ್ಲರೆ?

ಅಯ್ಯಾ ಎನ್ನ ಕಪಿಲಸಿದ್ಧಮಲ್ಲಿನಾಥಯ್ಯಾ,
ತಾ ಮುನ್ನ ಹರಸಿ ಕಟ್ಟಿದಂತಹುದಯ್ಯಾ. ॥ ೩೩೮ ॥

೩೩೯

ಎಲೆಯವ್ವ, ಆತನ ಬಾಯಲ್ಲಿ ಬೆಳವುತ್ತಲಿದ್ದೆ ನಾ,
ಎಲೆಯವ್ವ, ಆತನ ಸರದೊಳಗೆ ಕೂಡಿ ಸರಹುತ್ತಿದ್ದೆ ನಾ,
ಎಲೆಯವ್ವ, ಎಲೆಯವ್ವ, ಆತನ ಗಳದೊಳಗೆ ಕೂಡಿ ಗಳಹುತ್ತಿದ್ದೆ ನಾ,
ಎಲೆಯವ್ವ, ಎಲೆಯವ್ವ, ಆತನ ಅಪ್ಪುದಪ್ಪಿನೊಳಗೆ ಹುಟ್ಟಿ
ದಪ್ಪಗೊಂಡು ಬೆಳವುತ್ತಿದ್ದೆ ನಾ,
ಕಪ್ಪು ಕಪ್ಪುಗಳನೆ ನುಂಗಿ ತನ್ನ ಕಪ್ಪ ಮೆರೆವನವ್ವಾ
ಎನ್ನ ಕಪಿಲಸಿದ್ಧಮಲ್ಲಿನಾಥ, ದೇವರ ದೇವ. ॥ ೩೩೯ ॥

೩೪೦

ಎಲೆಯವ್ವ, ಎಲೆ ಎಲೆಯವ್ವ,
ಹುಟ್ಟಿದ ಮಕ್ಕಳು ತಂದೆಗೆ ಬೇಟಗೊಂಬರೆ? ಅಯ್ಯಾ.
ಎಲೆಯವ್ವ, ಎಲೆ ಎಲೆಯವ್ವ,
ಹಡೆದ ಮಕ್ಕಳ ಕೈವಿಡಿವರೆ? ಎಲೆಯವ್ವ.
ಪಾಪವಿನಾಶಿ ನೀನಾಗಿ ನಿನಗೆ ಮೂಗಿನಳೈವ ದೆಸೆ ಕಾಣ!
ಎನ್ನ ಕಪಿಲಸಿದ್ಧಮಲ್ಲಿನಾಥಯ್ಯ. ॥ ೩೪೦ ॥

೩೪೧

ಎಸಳ ಕುಸುಮದಿಂದಲತ್ತ ಪಸರಿಸಿತು.
ಪಂಕವೆಂಬ ದೆಸೆ ಇದ್ದೆಸೆಗೆಟ್ಟರಾಡುವ
ಪರಿಯನೆನಗೆ ತೋರದಿರಯ್ಯ.
ಇದ್ದೆಸೆಯ ಮುದ್ದೆಸೆಯನೊದ್ದೆಸೆಯ ಮಾಡಿ
ಸಲಹು ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೪೧ ॥

೩೪೨

ಎಸಳ ಕುಸುಮ ನಿವಾರಿಸಲು ಅಯ್ಯಾ,
ನಾನು ನಿನ್ನ ದೆಸೆಗೆ ಕಂಬೇಟಗೊಂಡೆನಯ್ಯಾ.
ಪಶುಪಾಶಮೋಚನ ಅಯ್ಯಾ,
ನಿನ್ನ ದೆಸೆ ಇದ್ದೆಸೆಯಾಗಯ್ಯಾ.

ಶಶಿಧರಾ, ನಿಮ್ಮ ವಶಕ್ಕೆನ್ನ ತೆಗೆದುಕೊಳ್ಳಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೪೨ ॥

೩೪೩

ಎಸಳ ಮಂಟಪದಲ್ಲಿ ಕುಸುಮನಾಳದ ಭೇದ
ಶಶಿಧರನ ಮಸ್ತಕದ ಧವಳಗಿರಿಯ
ಒಸರುವ ಆನಂದ ವಿಪರೀತ ಭಾಷ್ಪವಿನ-
ಲೆಸೆದಿರ್ದುದೈದೆ ಸದ್ಭಕ್ತಿಕ್ರೀಯು.
ಶಶಿಧರ ಕಪಿಲಸಿದ್ಧಮಲ್ಲಿಕಾರ್ಜುನಯ್ಯನ
ವಶದೊಳಿರ್ಪಂಗಲ್ಲದೆ ಕಾಣಲರಿದು. ॥ ೩೪೩ ॥

೩೪೪

ಎಸಳ ಸಸಿ ಕುಸುಮಭೂಷಣನೆ
ಅಯ್ಯಾ, ದೆಸೆಯಿದ್ದೆಸೆಗೆಟ್ಟೆ ನಾನಯ್ಯಾ.
ಶಶಿಧರಾ ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ
ಎನ್ನ ವಶಕೆ ತಂದಿರಿಸು ಕಂಡಾ ಅಯ್ಯಾ. ॥ ೩೪೪ ॥

೩೪೫

ಎಸಳೆಸಳ ಸೋಹೆಯಲ್ಲಿದ್ದು ಅಟ್ಟಿ ಕರೆದಡೆ ಬಂದ
ನಾ ಅವನ ಬೆನ್ನ ಬೆನ್ನ ಹೊಗಲಿ ಹೊಗಲಿಯವ್ವಾ.
ಆ ಸುಳಿಗೊಂಡ ಸುಕ್ಷೋಣಿದ್ವಾರದೊಳಗೆ
ಲಕ್ಕದ ಮೇಲೆ ತೊಂಬತ್ತು [ಆರು] ಸಾಸಿರ ಲಿಂಗವವ್ವಾ.
ಅವನ ಬೆನ್ನ ಬೆಳಗಿನ ಆದಿಲಿಂಗ ನಾಳಪಟ್ಟಣ,
ರೂಪನಾಶನಾದ ಕಪಿಲಸಿದ್ಧಮಲ್ಲಿನಾಥನ. ॥ ೩೪೫ ॥

೩೪೬

ಎಸುಗೆ ಕಂಗಳಲ್ಲಿಕ್ಕು ಕುಸುಮದಂಬಿನ ಘಾಯ
ದೆಸೆಗೆಟ್ಟು ಹೋಹರೈ ಮೂಜಗದವರು.
ಮದೀಶ ನಿಮ್ಮ ದೆಸೆಗವನು ಹೊದ್ದನೈ
ಸಲಹು ಎನ್ನ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೪೬ ॥

೩೪೭

ಎಸೆವಡೆದ ಮೃಗದಂತೆ ಎನ್ನ ಮನ ಶಂಭುವೆ
ಕಲ್ಲೆನ್ನದು ಮುಳ್ಳೆನ್ನದು.
ಭಕ್ತಿಯೆಂಬ ಸಂಕಲೆಯನಿಕ್ಕೆನ್ನ ಮನಕ್ಕೆ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೪೭ ॥

೩೪೮

ಏಕೆನ್ನ ಸಿರಿಗಳು ಕೆರೆಗಳು ಮರಗಳು ಫಲಗಳು
ಬೀಯದ ಮುನ್ನ ಒಯ್ಯನೆ ಮಾಡಿ ಭೋ,
ಹಾಲುಳ್ಳಲ್ಲಿ ಹಬ್ಬವನು.
ಎನ್ನ ಭಕ್ತಿ-ಮುಕ್ತಿ ಸವೆಯದ ಮುನ್ನ
ಲಿಂಗವೆ ಜಂಗಮವೆಂದು ಮಾಡಿ ಭೋ.
ಸ್ವಾತಂತ್ರ್ಯ ತನ್ನನೀವ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೪೮ ॥

೩೪೯

ಏಕೈಕನೆಂ...........
ಅನೇಕ ವಿಧ ಸದ್ಭಕ್ತಿ ಪದವನರಿದು
ಆ ಗುರುವಿನಾ ಮನದ ಮತಿಯ ಬೆಳಗುವ
ನಿರ್ಮಳಾಂಗನು ಶಿಷ್ಯ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೪೯ ॥

೩೫೦

ಏಕೋದೇವಾಯೆಂದು ಮನೆಮನೆದಪ್ಪದೆ
ಗಿರಿಯ ತಡಿಯ ಕಡಲ ಮುಡಿಯ ಜಡೆಯನೆಂಬರು.
ಅಯ್ಯಾ, ಎಂದಡಾನು ನಗುತ್ತಲಿರ್ದೆ,
ಆದಿ ಆಧಾರದಲ್ಲಿ ರೂಪುಯೆಂಟು ಇಲ್ಲದಂದು
ಹೆಸರು ನಿನಗೇನು ಹೇಳಾ?
ಕಪಿಲಸಿದ್ಧಮಲ್ಲಿಕಾರ್ಜುನಾ
ನೀನು ಆದಿಮುಖಶೂನ್ಯ ಕಾಣಾ. ॥ ೩೫೦ ॥

೩೫೧

ಏನಯ್ಯಾ, ಏನಯ್ಯಾ! ಮಕ್ಕಳಿಗೆ ಜನಕರು ಕಾಡುವರೊ?
ನಾನು ಗುರುಸ್ಥಲಕ್ಕೆ ಯೋಗ್ಯನಲ್ಲ, ಲಿಂಗಸ್ಥಲಕ್ಕೆ ಯೋಗ್ಯನಲ್ಲ,
ಜಂಗಮಸ್ಥಲಕ್ಕೆ ಯೋಗ್ಯನಲ್ಲ,
ನಾ ನಿಮ್ಮ ರಾಜಾಂಗಣದ ಕೂಲಿಕಾರ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೫೧ ॥

೩೫೨

ಏನೆಂದೆನಲಿಲ್ಲದ ಅಖಂಡ ಪರಿಪೂರ್ಣ ಪರಮಾನಂದ ಪರಬ್ರಹ್ಮವು
ತಾನೆಂಬ ಅರಿವಿನ ಬಲದ ಅಹಂಕಾರವಿಲ್ಲವಾಗಿ, ಅದ್ವೈತಿಯಲ್ಲ;
ಉಭಯವಿಟ್ಟರಸುವ ಗಜೆಬಜೆಯಲ್ಲಿ ಸಿಲುಕನಾಗಿ, ದ್ವೈತಿಯಲ್ಲ.
ಇಂತೀ ದ್ವೈತಾದ್ವೈತವೆಂಬ ಉಭಯನಾಮ
ನಷ್ಟವಾದ ಅಭೇದ್ಯಮಹಿಮನ
ಕಪಿಲಸಿದ್ಧಮಲ್ಲಿಕಾರ್ಜುನಾ, ನಿಮ್ಮ ಶರಣರೆ ಬಲ್ಲರು.
॥ ೩೫೨ ॥

೩೫೩

ಏನೆಂದೆನಿಸದ ವಸ್ತು, ಅಪ್ರಮಾಣಮೂರ್ತಿ
ಬಸವ ಎಂಬ ಪದಕ್ಕೆ ನಿಂದಿತ್ತಯ್ಯಾ ನಿಮ್ಮ ಪ್ರಸಾದ.
ಅರಿಯಬಾರದ ಬಸವನೆಂಬ ವಸ್ತುವನರುಹಿತ್ತಯ್ಯಾ ನಿಮ್ಮ
ಪ್ರಸಾದ.
ಬಸವನೆಂಬ ನಿಜವ ನಿಮ್ಮಲ್ಲಿ ನಿಲಿಸಿತ್ತಯ್ಯಾ ನಿಮ್ಮ ಪ್ರಸಾದ.
ಕಪಿಲಸಿದ್ಧಮಲ್ಲಿನಾಥಯ್ಯಾ,
ನಿಮ್ಮ ಅರ್ಪಿತ ಅನರ್ಪಿತವಾಯಿತ್ತಯ್ಯಾ,
ನಿಮ್ಮ ಬಸವವಿಡಿದು. ॥ ೩೫೩ ॥

೩೫೪

ಏನೋ ಏನೋ ಗಂಡಾ,
ನಿಮ್ಮ ತಂದೆ ಬಂದೈದಾನೆ;
ನಾನೇನುವನರಿಯೆನ್ನೈ.
ನೀನೆ ನಿಮ್ಮ ತಂದೆಯ ಸಂತೈಸಿ,

ಎನಗವರ ಕರುಣವ ಪಾಲಿಸಯ್ಯಾ.
ಕಪಿಲಸಿದ್ಧಮಲ್ಲಿನಾಥಯ್ಯಾ. ॥ ೩೫೪ ॥

೩೫೫

ಏರಿಯನೇರಿ ಬರುವಲ್ಲಿ
ಮೂವತ್ತಾರು ಮಂಟಪದ ಮಣಿಯ ತುಂಬಿ
ಕೇರಿ ಕೇರಿಯ ತುದಿಯ ತಿರುಗಲು,
ಸುಂಕಿಗರಿನ್ನೂರ ಹದಿನಾರು ಮಂದಿ
ಮೂವತ್ತಾರು ಮಂಟಪದಲ್ಲಡಗಿದರಯ್ಯಾ.
ಏರಿ ಬರುವ ಪುರುಷ ಮೂವರು ತಳವಾರರ ಕೂಡಿಕೊಂಡು,
ಮೂವತ್ತಾರು ಮಂಟಪದಲ್ಲಿ ಅಡಗಿದ
ಇನ್ನೂರ ಹದಿನಾರು ಸುಂಕಿಗರನರಸಲು
ಮೂವರು ತಳವಾರರು ತನ್ನ ನುಂಗಿದರಯ್ಯಾ,
ಕಪಿಲಸಿದ್ಧಮಲ್ಲಿನಾಥಯ್ಯಾ. ॥ ೩೫೫ ॥

೩೫೬

ಏಳೆಂಟು ಠಾವಿನಲಿ ಮಠವ ಶುದ್ಧವ ಮಾಡಿ
ಧಾರುಣೆಯ ಸುದ್ದಿಯನು ಹದುಳಮಾಡಿ
ಆರೈದು ಸಕಲ ನಿಷ್ಕಲದೊಳಗೆ ವೇದ್ಯ
ಗೊಟ್ಟಾತ ಗುರು ಕಪಿಲಸಿದ್ಧಮಲ್ಲಿಕಾರ್ಜುನ. ॥ ೩೫೬ ॥

೩೫೭

ಏಳು ಸೀಮೆಯನು ದಾಟಿಪ್ಪಳವ್ಯಯದ
ಸೋಮ ಕುಂಭವನು ಹೊತ್ತು ನಿತ್ಯತ್ವದಾ
ಸ್ವಾನುಭೂತ್ಯೈಕ್ಯದಲಿ ತಾನು ಸಂಗಮವಾಗೆ
ಸೋಮ ಕೊಡ [ನೊಡೆ]ದುದ್ದೈ ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೩೫೭ ॥

೩೫೮

ಐಕ್ಯನೆಂಬಾತ ಅನ್ಯವನರಿಯ ತನ್ನುವನರಿಯ;
ಸಕಲವನರಿಯ ನಿಷ್ಕಲವನರಿಯ.

ಸರ್ವಸ್ವವೂ ಲಿಂಗವಾದಾತನಾಗಿ
ತನ್ನ ಮೀರಿದ ಪರತತ್ವ ಒಂದೂ ಇಲ್ಲವಾಗಿ,
ಎಲ್ಲಾ ತತ್ವಂಗಳಿಗೂ ಮಾತೃಸ್ಥಾನವಾದಾತನು.
ಲಿಂಗವನವಗ್ರಹಿಸಿಕೊಂಡಿಪ್ಪ ಪರಮ ಸೀಮೆ ತಾನಾಗಿ,
ಕಪಿಲಸಿದ್ಧಮಲ್ಲಿಕಾರ್ಜುನನ ಕೂಡಿ
ಕಳೆಗಳ ಲಿಂಗಕಳೆಗಳ ಮಾಡಿದ ಲಿಂಗೈಕ್ಯನು. ॥ ೩೫೮ ॥

೩೫೯

ಐಗ್ರಾಮ ಚೌಗ್ರಾಮ ಅಯ್ಯ ನಿನ್ನಯ ಸೀಮೆ.
ಅತ್ಯೋನ್ನತದ ಫಲಕ್ಕೊಸರುತಿಹದು
ಒಸರುತಿಹ ಲಿಂಗವನು ವಶಕೆ ತಂದು ಶಿಷ್ಯಂಗೆ
ಹೆಸರಿಟ್ಟು ಕೊಟ್ಟಾತ ಗುರು ಕಪಿಲಸಿದ್ಧಮಲ್ಲಿಕಾರ್ಜುನ.
॥ ೩೫೯ ॥

೩೬೦

ಐವಕ್ಷರ ಆದಿಯಾದ, ಇಪ್ಪತ್ತೈದಕ್ಷರ ಸಂಯೋಗದ
ಮೂವತ್ತಾರಕ್ಷರವಾನಂದದ
ಆನಂದ ಸಾನಂದ ಶೂನ್ಯ ತನ್ನಯ ಅಂಗ
ಭಾನುವಿನ ಪ್ರಭೆಯಲಿಪ್ಪ
ಹೇಮ ಕಲಶಕ್ಕೆಲಸದಿಂದ ಮೇಲೆ
ಆದಿಯಾಧಾರ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೬೦ ॥

೩೬೧

ಐದಾರು ಏಳೆಂಟೆಂದೆಂಬ ಬಲೆಯಲ್ಲಿ ಸಿಲಿಕಿ
ಎಯ್ದೆ ಗಾರಾಗುತ್ತಲಿದ್ದೇನೆ.
ಮೀರಲಾರೆನು ಕರ್ಮಂಗಳನು
ಹಾರು ಮಾಡಿಹವು ಎನ್ನ ಬೇರೆ ಮತ್ತೊಂದು ಉಳ್ಳಡೆ ತೋರಾ.
ಸಾರುವ ಶ್ರುತಿಗಳಿಗಿಂದತ್ತಲಾದ ಮಹಾಘನ ನೀನು ನೀರ
ಕಪಿಲಸಿದ್ಧಮಲ್ಲಿಕಾರ್ಜುನಯ್ಯ ತಂದೆ. ॥ ೩೬೧ ॥

೩೬೨

ಐದು ಪುರದ ಪಟ್ಟಣದ ಪಾದಘಾತದ ಆ ಅಯ್ಯಾ
ಹಾವಸಿ ಕುಂದದಲ್ಲಾ! ಬಾವಿಯ ಹಾವಸಿ ಕುಂದದಲ್ಲಾ.
ಬಾವಿಯ ಕಟ್ಟಿದ ಕಲ್ಲೆಲ್ಲಾ ಬರೆಯ ಹಾವಸೆ ನೋಡಾ ಅಯ್ಯಾ.
ಹಾವಸೆ ಕುಂದದಲ್ಲಾ !
ಶಿಖರದ ಮೇಲಣ ಒರತೆ ಕುಂದದೇನು ಕಾರಣ
ಕಪಿಲಸಿದ್ಧಮಲ್ಲಿನಾಥಯ್ಯನೊ ಅಯ್ಯಾ. ॥ ೩೬೨ ॥

೩೬೩

ಐದೆ ಬಿನ್ನಾಣಿಕೆ ಬಿನ್ನಾಣಿಯ ಬಸುರಲ್ಲಿ ಹುಟ್ಟಿದವಳು
ಬಾಯಲ್ಲಿ ಬಳೆದೊಟ್ಟವಳು; ಬಾಯಲ್ಲಿ ತಲೆಯಾದವಳು;
ತಲೆಯೊಳಗೆ ಮೊಲೆಯಾದವಳು; ಮೊಲೆಯೊಳಗೆ
ನಾಭಿಯಾದವಳು;
ನಾಭಿಯೊಳಗೆ ಬಸುರಾದವಳು; ಬಸುರೊಳಗೆ ಬೆನ್ನಾದವಳು;
ಬೆನ್ನೊಳಗೆ ಕಾಲಾದವಳು;
ಗಂಡಂಗೆ ಕೈಯೆಂದು ಬಾಯಲ್ಲಿ ಹಿಡಿದು ಹರಿದವಳು
ಕಪಿಲಸಿದ್ಧಮಲ್ಲಿನಾಥನ ಬಾಯಲ್ಲಿ ಭೋಗಿಯಾದವಳು.
ಇಂತಪ್ಪ ವಿದ್ಯದ ಬೇಟದ ಮಾತಿನ ಕೊಂಬ ಹೇಳಿದಡೆ, ಅಲ್ಲಿಗೆ
ಬಂದಡೆ
ತಾ ಕಂಡಯ್ಯಾ, ಐದೆ ಬಿನ್ನಾಣಿಕೆ! ॥ ೩೬೩ ॥

೩೬೪

ಐನಾಯೆಂಬ ಅಕ್ಷರದ ಭೇದವನರಿತಡೆ
ಅಪ್ಪುದರಿದೊಂದೂ ಇಲ್ಲ.
ಸೀಮೆಯ ಮೀರಿದ ಸಂಬಂಧ
ಸಂಬಂಧವ ಮೀರಿದ ಸೀಮೆ, ಅನುಮತವ ಮೀರಿದ ಆಧಿಕ್ಯ
ಅಕ್ಷರವೆರಡರ ಅಧಿಕಾರ
ಕಪಿಲಸಿದ್ಧಮಲ್ಲಿಕಾರ್ಜುನನ ಸಂಯೋಗ. ॥ ೩೬೪ ॥

೩೬೫

ಐ ಬ್ರಹ್ಮದಿಂದತ್ತಲಾದ ಸೀಮೆಯ,
ಆ ಸೀಮೆಯ ಮೀಱಿದ ಸಂಬಂಧ,
ಆ ಸಂಬಂಧ ಅಯ್ಯನ ರೂಪು,

ಆ ಅಯ್ಯ ವಾಙ್ಮನಕಗೋಚರನೆಂಬರು.
ಆ ಅಯ್ಯ ಭಕ್ತ ಕಾರಣ ಪರಶಿವಮೂರ್ತಿಯೆಂದೆಂಬರು.
ಆವುದು ಹುಸಿ? ಆವುದು ದಿಟ?
ಈ ಉಭಯದ ಸಂಸಿದ್ಧವ ನಿನ್ನವರು ನೀವು ಬಲ್ಲಿರಿ,
ಆನೇಕೆಂದರಿಯೆ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೬೫ ॥

೩೬೬

ಐವರ ಎನ್ನ ದುಃಖ,
ನಿನ್ನ ಅಡಿಮಸ್ತಕದಲೆ ಇದ್ದಲ್ಲಿ
ಹುಟ್ಟು ಹೊಂದಿಲ್ಲದೆ ಹೋಗು.
ಅಯ್ಯ, ನಿನ್ನ ದೆಸೆಗಳಿಸುತ್ತಲಿದ್ದೇನೆ
ಕವಿಲೆಯ ಕಂದನಂತೆ.
ನಾನಿದ್ದೇನೆಂದು ಬಾರಾ ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೩೬೬ ॥

೩೬೭

ಐವರ ಸಂಗಡ ಉದಯದಲ್ಲಿ ಹೊರವಂಟಿರಾದಡೆ, ಕೇಳಿರಣ್ಣಾ,
ಮಧ್ಯಾಹ್ನಕ್ಕೆ ಬಂದಿರಾದಡೆ,
ಕಳೆಯಳಿದು ಕಳೆಯ ತಪ್ಪದೆ ನಿಂದಿರಾದಡೆ,
ಬಟ್ಟೆ ಸರಿಸ ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿಗೆ ಹೋಯಿತ್ತು.
॥ ೩೬೭ ॥

೩೬೮

ಒಂದ ತೋರಿದಡದರ ಹಿಂದು ಮುಂದರಿದನ್ನೆ
ಸಂದುಗೆಟ್ಟಾನಂದ ಸಕಲನಿಷ್ಕಲದಲ್ಲಿ.
ಮುಂದಿಪ್ಪ ಬ್ರಹ್ಮಾಂಡದಂತರವನು ಅರಿದಾತ
ಆನಂದಮಯ ಶಿಷ್ಯನ್ಯೆ ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೩೬೮ ॥

೩೬೯

ಒಂದರಲ್ಲಿ ಓಂಕಾರ ಭವಿಸಿತ್ತು.
ಎರಡರಲ್ಲಿ ವ್ಯಾಪ್ತಿ ಭವಿಸಿತ್ತು.

ಮೂರರಲ್ಲಿ ಮುಕ್ತ್ಯಂಗನೆಯ ಸಂಗ ಸಮನಿಸಿತ್ತು.
ನಾಲ್ಕರಲ್ಲಿ ಆ ಎಂಬ ಅಕ್ಷರದಂತುವನರಿದೆ.
ಅಯ್ದರಲ್ಲಿ ಆ ಬ್ರಹ್ಮತಾತ್ಪರ್ಯಶುದ್ಧವ ನಿರೀಕ್ಷಿಸಿದೆ.
ಆರರಲ್ಲಿ ಅವ್ಯಯ ಅನಿಮಿಷಸ್ಥಾನವ ಕಂಡೆ.
ಮೀರಿದೆ ಮೂವತ್ತಾರ,
ಕಪಿಲಸಿದ್ಧಮಲ್ಲಿಕಾರ್ಜುನನೆಂಬ 'ತತ್ವಮಸಿ'
ಸಂಗಮದಲ್ಲಿ ಸಂಯೋಗಿಯಾದೆ. ॥ ೩೬೯ ॥

೩೭೦

ಒಂದು ಕೋಳಿ ಕೂಗುತ್ತದೆ ಇರುಳು ಹಗಲೆನ್ನದೆ;
ಅದನರಿಯರಲ್ಲಾ ಮರ್ತ್ಯದ ಗಣಂಗಳು
ಅರಿದಡೆ ಭವಬಂಧವಿಲ್ಲ, ಮರೆದಡೆ ಜನನ ಮರಣಕ್ಕಳವಿಲ್ಲ!
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೭೦ ॥

೩೭೧

ಒಂದು ಮೂಲಸ್ತಂಭವಿಡಿದ ದೇವಾಲಯದಲ್ಲಿ
ಚಂದಚಂದದ ಬಾಗಿಲು ಮೂವತ್ತಾರು.
ಒಂದೊಂದು ಎಂಟೆಂಟೆಂಬ ಘನಕ್ಕೆ ಘನ ಸಂತಸ ಸುಖವಾಯಿತ್ತಯ್ಯಾ.
ಇಂದ್ರಿಯಾರ್ಪಣ ಸುಖಗೋಷ್ಠಿ ಸಾಧ್ಯವಾಯಿತ್ತಯ್ಯಾ.
ನಿಮ್ಮದಯದಿಂದ ಕಪಿಲಸಿದ್ಧಮಲ್ಲಿನಾಥಯ್ಯಾ. ॥ ೩೭೧ ॥

೩೭೨

ಒಂದೂ ಅಲ್ಲದ ನೆಲನ ಸುರಿವುದ ಒಲೆಯ ಸುರಿವುದ ಕೇಳಿರಣ್ಣಾ.
ಒರಟಂಗೆ ಶಿಕ್ಷೆ ದೀಕ್ಷೆಯ ಮಾಡುವುದ ಸುಡುವುದಯ್ಯಾ.
ಒಂದೂ ಅಲ್ಲದವಂಗೆ ಕೊಟ್ಟು ದೀಕ್ಷೆಯ
ಸುಟ್ಟ ಫಲವೆಂದ ಕಪಿಲಸಿದ್ಧಮಲ್ಲಿನಾಥದೇವರ ದೇವ. ॥ ೩೭೨ ॥

೩೭೩

ಒಂದೊಂದು ಪರಿಯ ಬೊಂಬೆಗಳು ಬಂದು
ಬಂದಾಡಲ್ಕೆ ಕಂಡು ಕಂಡು ನೊಂದೆನಯ್ಯಾ.
ಅದರ ದಂದ ಹೊದ್ದಿಹಿದೆಂದು,
ಒಬ್ಬಳು ಹೆಂಗೂಸಿಗೆ ಗಂಡರು ನಾಲ್ವರು.

ಆಕೆ ಗರ್ಭಿಣಿಯಾಗದ ಮುನ್ನವೆ ಪ್ರಸೂತೆಯಾದಳು ನೋಡಾ.
ಗಂಭೀರಸ್ಥಳಕ್ಕೆ ನೀವು ಹೋದಿರಾದಡೆ,
ಬಂಜೆಯ ಮಕ್ಕಳು ಮೂವರೈದಾರೆ.
ಆರು ಗೃಹಂಗಳಂ ಕಟ್ಟಿಕೊಂಡು
ಮೂವತ್ತಾರನೆಯ ಮಂಟಪದಲ್ಲಿ
ಪರಮಸೀಮೆಯಂ ಮೀರಿದ
ಅವರ ಹಿಂದು ಮುಂದರಿತು
ಅವು ಪಡುವ ನಿಗ್ರಹಂಗಳಂ ಕಂಡು,
ಈ ಮಂದಮತಿಗಯಪ್ಪ ಬೊಂಬೆಗಳ ಹಿಂದು ಮುಂದ ನಾಶವಂ ಮಾಡಿ,
ತಂದೆ ನಿಮ್ಮ ಅಂದವ ತೋರಯ್ಯಾ
ಕಪಿಲಸಿದ್ಧ ಮಲ್ಲಿಕಾರ್ಜುನಾ. ॥ ೩೭೩ ॥

೩೭೪

ಒಪ್ಪಿಪ್ಪ ಭೇದವನು, ಅಪ್ಪು ರೂಪಾದುದನು,
ತಪ್ಪದೆ ತ್ವಮಸಿಯೆನಿಸುವ ಭೇದವ,
ಗುರುವಿನ ಒಪ್ಪದಲಿ ಕಂಡೆ ಕಾಣಾ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೭೪ ॥

೩೭೫

ಒಲಿವೆ ನಿನ್ನವರ ನೀನೆಂದಡೆ.
ಒಲಿವೆ ನಿನ್ನವರ ಮೂರ್ತಿಧ್ಯಾನದಲ್ಲಿ ಮೂರ್ಛೆವೋದರೆ.
ಒಲಿವೆ ವಿಭೂತಿ ರುದ್ರಾಕ್ಷಿ ಲಾಂಛನಧಾರಿಯ.
ಮಾನಸ ವಾಚಕ ಕಾಯಕದಲ್ಲಿ ನೀನೆಂದಡೆ ಒಲಿವೆ,
ಅಲ್ಲದಿದ್ದಡೆ ವೈತಾಳಿಕರ ಸಂಯೋಗದ ಹಾಂಗೆ
ವೈಶಿಕವ ಬಳಸಿದಡೆ ಏಕೊಲಿವೆಯಯ್ಯಾ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೭೫ ॥

೩೭೬

ಒಂದೊಂದು ಪರಿಯ ಪ್ರಕೃತಿಯ ಬೊಂಬೆಗಳಾದಲಿಕೆ
ಕಂಡೂ ಕಾಣದಂತೆ ಸೀಯ್ಯರವರು.
ಗಂಡುಗಲಿ ಕಾಮನನು ಭಂಡುಮಾಡಿಯೆ ತಗುಳ್ದ
ಗಂಡುಗಲಿ ಶರಣರಾಳಯ್ಯಾ ನಾನು.

ಕಾಮಹರ ನಿಸ್ಸೀಮ ಕಪಿಲಸಿದ್ಧಮಲ್ಲೇಶಾ
ಶರಣು ಶರಣೆಂಬೆನಯ್ಯಾ ನಿಮ್ಮವರ ಶ್ರೀಚರಣಕ್ಕೆ. ॥ ೩೭೬ ॥

೩೭೭

ಒಂದೊಂದು ಮಠದಲ್ಲಿ
ತುಂಬಿ ಒಂಬತ್ತರಾಳಾಪ
ಸಂಭ್ರಮದಿ ಮೊರೆವುತದೆ ಅಯ್ಯಾ.
ಅನತದ ಮೀರಿಪ್ಪ
ಮೇಣು ಆದಿಯ ಆಧಾರದಿಂದತ್ತಲಿ
ತುಂಬಿದಾ ಕೊಡದಲಿ ಒಂದು ಬಿಂದು ಭವಿಸಲು
ಸಂದುದಖಿಳ ಬ್ರಹ್ಮಾಂಡವು.
ಎನ್ನ ತಂದೆ, ಕಪಿಲಸಿದ್ಧಮಲ್ಲಿಕಾರ್ಜುನಯ್ಯ
ನಿಮ್ಮ ಭಕ್ತಿಯಾದಂದ ವಾರುಧಿಯ ಪರಿಯಾಯ. ॥ ೩೭೭ ॥

೩೭೮

ಒಂದೊಂದು ವೇಷ ದುರ್ವೇಷದಲ್ಲಿ ಬಂದುದ
ಮಾಡಿತ ಮೇಲೆ ಕಂಡ! ಓಓ! ಅಯ್ಯಾ.
ಪೂರ್ವಾಚಾರಿಯ ಮರೆಯದಿರಾ, ಹಾ! ಹಾ! ಅಯ್ಯಾ.
ಅಲ್ಲಿ ಭಕುತಿ ವಿಕೃತಿಗಳ ಮಾಡುವರೆ?
ಕಪಿಲಸಿದ್ಧಮಲ್ಲೇಶ್ವರನನು ಕಂಡಾ! ॥ ೩೭೮ ॥

೩೭೯

ಒಡಗೂಡಿದ ಒಚ್ಚತನವ ಬಿಡುಮನರು ಬಲ್ಲರೆ,
ಮೃಡ ನಿಮ್ಮ ಶರಣರಲ್ಲದೆ?
ಕಡಲೊಳಗಣ ಮುತ್ತಿಪ್ಪ ಕಡು ಪೂತದ ಭೇದವನು
ಜಡಜೀವಿಗಳು ಬಲ್ಲರೆ, ಮೃಡ ನಿಮ್ಮ ಶರಣರಲ್ಲದೆ?
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೭೯ ॥

೩೮೦

ಒಡಲು ಪ್ರಾಣವನ್ನು ಇಕ್ಕಿ ಒಡಗೂಡಿದ
ಶರಣರ ಒಡಗೂಡಿರಿಸಾ ಎನ್ನನು.
ನುಡಿಯ ಬ್ರಹ್ಮಾಕ್ಕಾನಾರೆನು ಅಯ್ಯಾ ಎನ್ನ.

ಅಡಿಗಡಿಗೆ ಎನ್ನ ಜರಿಯದೆ.
ಎಲೆ ಮೃಡನೆ, ಶೂನ್ಯ ತಾನಾದ ಕರುಣನಾಗು
ಕಪಿಲಸಿದ್ಧಮಲ್ಲಿನಾಥಯ್ಯ. ॥ ೩೮೦ ॥

೩೮೧

ಒಪ್ಪು ಮೂರಾರರಲಿ.
ಅಪ್ಪು ತಾನೆಂಟರಲಿ.
ತಪ್ಪದೆ ತುರಿಯದನುಮಿಷವನಾದಾ.
ತತ್ವ ತ್ವಮಸಿಯಪ್ಪ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೮೧ ॥

೩೮೨

ಒಬ್ಬರ ಮನವ ನೋಯಿಸಿ,
ಒಬ್ಬರ ಮನವ ಘಾತವ ಮಾಡಿ,
ಗಂಗೆಯ ಮುಳುಗಿದಡೇನಾಗುವುದಯ್ಯಾ?
ಚಂದ್ರನು ಗಂಗೆಯ ತಡಿಯಲ್ಲಿದ್ದಡೇನು? ಕಲಂಕ ಬಿಡದಾಯಿತ್ತಯ್ಯಾ.
ಅದು ಕಾರಣ, ಮನವ ನೋಯಿಸಿದವನೆ, ಒಬ್ಬರ ಘಾತವ
ಮಾಡಿದವನೆ,
ಪರಮಪಾವನ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ. ॥೩೮೨॥

೩೮೩

ಒಬ್ಬರಸು ಮೋಹಿತನಾಗಿ, ಅಂದೇ ಲಗ್ನವಾಗಿ,
ಅಂದೇ ರತಿಯಾಗಿ ಅಂದೇ ಪತಿ ಮೃತಿಯಾದ
ದರಿದ್ರ ನಾರಿಯ ತೆರನಾಯಿತ್ತೆನ್ನ ಮನ.
ಒಬ್ಬರಸು ಭೂಪ್ರದಕ್ಷಿಣೆ ಮಾಡಿ
ಭೂದೇವಿಯ ಮಗನ ಜನನ ವಾರ್ತೆಯನಂದೇ ಕೇಳಿ,
ಅಂದೇ ಮಗನ ಮೃತಿಯಾದರಸನ ಮನವಾದ ತೆರನಾಯಿತ್ತೆನ್ನ ಮನ.
ತನ್ನ ಕೊಟ್ಟು ತಾ ಹೋದಡೆ ಗುರುಸ್ಥಲ ಹೋಯಿತ್ತು,
ಲಿಂಗಸ್ಥಲ ಹೋಯಿತ್ತು, ಜಂಗಮಸ್ಥಲ ಮೊದಲೆ ಹೋಯಿತ್ತು.
ಇನ್ನಾರ ಪಾದವಿಡಿವೆ? ಕಪಿಲಸಿದ್ಧಮಲ್ಲಿಕಾರ್ಜುನ
ಚೆನ್ನಬಸವ ಮಹಾಪ್ರಭುವೆ. ॥೩೮೩॥

೩೮೪

ಒಬ್ಬ ಸಿದ್ಧಸಾಧಕ ಚಿಗರಿಯ ಸಾಕುತಲಿದ್ದಾನೆ;
ಮತ್ತೊಬ್ಬ ಸಿದ್ಧಸಾಧಕ ಚಿಗರಿಯ ಮರಿಯ ಸಾಕುತಲಿದ್ದಾನೆ.
ಆ ಸಿದ್ಧಸಾಧಕನ ನುಂಗಲು ಬರುತ್ತವೆ ಚತುರ್ದಶ ವ್ಯಾಘ್ರಂಗಳು.
ನುಂಗಲು ಬಂದ ವ್ಯಾಘ್ರಂಗಳ ಚಿಗರಿಯು, ಚಿಗರಿಯ ಮರಿಯು
ಹೊಡೆದುದ ಕಂಡು ನಾನಂಜಿ ಸಾಗರವ ಹೊಕ್ಕೆ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೮೪ ॥

೩೮೫

ಒಲುಮೆಯ ನಲ್ಲನನು
ಒಲಿಸಿ ನೆರೆದೆನೆಂಬ ಮರುಳತನವನೇನೆಂಬೆನಯ್ಯಾ.
ಒಲಿಸಲೇಕೆ? ತಾನೆ ಒಲಿದಾನು.
ನಿನ್ನಲ್ಲಿ ದೃಢಕೆ ಸಂಬಂಧ ಸಮನಿಸಲುಳ್ಳಡೆ
ತಾನೆ ಒಲಿದಾನು.
ನಿನ್ನಲ್ಲಿ ದೀಕ್ಷಾತ್ರಯ ಸಂಪನ್ನತೆಯುಳ್ಳಡೆ
ತಾನೆ ಒಲಿದಾನು.
ಒಲಿದಾನು. ಒಲಿಸದೊಡೊಲಿವನೆ, ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೩೮೫ ॥

೩೮೬

ಒಳಗಣವರೈವರ ಎನ್ನ ಕಣ್ಣಿಂಗೆ ತಳವೆಳಗು ಮಾಡಯ್ಯಾ.
ಬೆಳವಿಗೆಯ ಬೀಜವ ಬಿತ್ತಿ,
ಆ ಫಲದ ರುಚಿಯನುಂಡುಕೊಳ್ಳಯ್ಯಾ
ಕಪಿಲಸಿದ್ಧಮಲ್ಲಿನಾಥಯ್ಯಾ. ॥ ೩೮೬ ॥

೩೮೭

ಒಳಗೆಯೆಂದಡೆ ಹೊರಗೆ ಹತ್ತುವೆ.
ಹೊರಗೆಯೆಂದಡೆ ಒಳಗೆ ಹತ್ತುವೆ.
ಅಯ್ಯಾ, ಹಾ! ಅಯ್ಯಾ ; ಹಿಡಹಿಡಿಯೊಳಗೊಂಬತ್ತೆಡೆಯ
ತಿರುಗಿ ಹೋದೆಯಯ್ಯಾ.

ಹಾ! ಅಯ್ಯಾ, ಕಣ್ಣೀರ ಕಣ್ಣೊಳಗಡಗುವೆ
ಕಪಿಲಸಿದ್ಧಮಲ್ಲಿನಾಥಯ್ಯ. ॥ ೩೮೭ ॥

೩೮೮

ಓಂ ಜಯ ಪರಮೇಶ್ವರಂ ಪರಮಾತ್ಮಂ
ಈಶ್ವರನುರ್ವಿಪರ್ವಿ ಅಡಗಿಕೊಂಡಿಪ್ಪನು.
ಒಬ್ಬಣಿಗೆಯಾಗಿ ಯೋಗಿಗಳ ಮನದ
ಸಂಸಾರ ತೆಪ್ಪದೊಳಗೆ ಆಸೀಗ ಅದ್ದು ಅಳಲುತಿಪ್ಪೆನಯ್ಯಾ,
ಬೇಗ ಬಾರ ಬಾರಯ್ಯಾ ಬಾರಾ.
ವಜ್ರಲೇಪದಲಿ ಬಿದ್ದಿದ್ದೇನೆ,
ಬೇಗ ಬಂದೆತ್ತಯ್ಯಾ ಎತ್ತಯ್ಯಾ ಕಪಿಲಸಿದ್ಧಮಲ್ಲಿನಾಥಯ್ಯಾ.
॥ ೩೮೮ ॥

೩೮೯

ಓರಂತೆ ಮಾಡಯ್ಯಾ ನಿನ್ನವರೊಳಗೆ
ಮನ್ನಣೆಯಿಂದ ಮಚ್ಚಿಸಯ್ಯಾ
ನಿನ್ನವರ ಪಾದೋದಕವ ನಚ್ಚಿಸಯ್ಯಾ,
ನಿನ್ನವರ ಪ್ರಸಾದವ ನಚ್ಚಿಸಿ ಮಚ್ಚಿಸಿ
ಮನಕ್ಕೆ ನೀನೇ ಮಂಗಳವಾಗಿ
ಅಚ್ಚಿಗಬಡಿಸದಂತಿರಿಸಾ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೮೯ ॥

೩೯೦

ಕಂಗಳಂಗಳದಲಿಹ ಮಂಗಳಾಂಗನ ಬೆಳಗು
ಹಿಂಗದಂತಾದುದೈ ಸಕಲದೊಳಗೆ.
ಮಂಗಳಮಯನೆ ಕಪಿಲಸಿದ್ಧಮಲ್ಲೇಶ್ವರಾ
ಲಿಂಗ ನಿಮ್ಮಿಂದರಿದು ಧನ್ಯನಾದೆ. ॥ ೩೯೦ ॥

೩೯೧

ಕಂಗಳ ಬೇಟೆಯನಾಡುವ ಕಾಮನ ಸಂಗಕ್ಕೆನ್ನ ಸಲಿಸದೆ,
ಮಂಗಳಮಯವಪ್ಪ ಉರುತರ ಭಕ್ತಿಯ ಸಂಗಕ್ಕೆನ್ನ ಸಲಿಸಯ್ಯಾ,
ಅನಂಗವಿದಾರಣ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೯೧ ॥

೩೯೨

ಕಂಜಕರ್ಣಿಕೆ ನಿನ್ನ ಅಂಜನದ ನೇತ್ರವನು
ಕುಂಜರನ ಮಸ್ತಕದ ಸುಧೆಯ ಕೂಪ
ಭುಂಜಿಸುವ ಮಧುಕರನ ಕಂಜನಾಳದ ಸುದ್ದಿ
ಅಜಲೋಕದಾರೈದ ಸುದ್ದಿಯನು
ಓರಂತೆ ಅರಿದಾತ ತಾನು ನೀನಪ್ಪನೈ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೯೨ ॥

೩೯೩

ಕಂಜಕರ್ಣಿಕೆ ನಿನ್ನ ರಂಜನೆಯ ಪರಿ ಹೊಸತು,
ಭಂಜಿಸುತ್ತದೆ ಲೋಕವೀರೇಳನು
ಕಂಜನಾಳದ ಒಳಗೆ ಕುಂಜರನ ಗಮನದಲಿ
ರಂಜಿಸುತ್ತದೆ ಸ್ಥೂಲಸೂಕ್ಷ್ಮದಲ್ಲಿ.
ಆಯಂಜನಾನಾಯೆಂಬ ಅಕ್ಷರದ ಹತ್ತಾರ
ರಂಜಿಸಲ್ಕೆ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೯೩ ॥

೩೯೪

ಕಂಜದೊಳಗಣ ಹಳದಿ ರಂಜಿಸುವ ಭೇದಕ್ಕೆ
ಅಂಜುತೈದಾರೆ ಸಕಲ ಯೋಗಿಗಳೆಲ್ಲ ಧಾತುಗೆಟ್ಟು
ಹಳದಿರಿತಿ ಧಾತುವ ನುಂಗಿದಾತ ಶಿವಯೋಗಿ.
ಈ ಯೋಗಿಯನಿತೀ ನಿಜ ನಿಷ್ಪತಿಯ
ಓತೊಮ್ಮೆ ಅರಿದಡೆ, ಆತನೆ ಶಿವಯೋಗಿ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೯೪ ॥

೩೯೫

ಕಂಠಪ್ರಮಾಣ ಜಲವ ಹೊಕ್ಕು
ಪದುಮಾಸನವ ಕೊಂಡು ಇದ್ದೆನವ್ವಾ.
ಮುಖ ಮುಗಿದು ಆತನ ಧ್ಯಾನಿಸುತ್ತಿರ್ದೆನವ್ವಾ.
ಆತ ಬಂದು ಮುಟ್ಟಲೊಡನೆ ಮುಖವರಳ್ದು ಹಿಡಿವೆನು,
ಕಪಿಲಸಿದ್ಧಮಲ್ಲಿಕಾರ್ಜುನನ. ॥ ೩೯೫ ॥

೩೯೬

ಕಂಡಲ್ಲಿ ಕರೆಯೆ ಮಾಯ, ನಿಂದಲ್ಲಿ ನಿರಾಮಯ.
ಇವಗೆ ಕೂತು ವಿಕಳಾವಸ್ಥೆಗೊಂಡೆನವ್ವಾ.
ಮತ್ತೆ ಮುಂದೆ ನಿಂದವರ ಸಾರೆಂಬೆನು, ಹಿಂದುಗಳೆವೆನು.
ಮುಂದಕ್ಕೆ ಸಾರಿದವರ ನೋಡುತ್ತಿದ್ದೆನವ್ವಾ.
ಕಂಡವರ ಸಾರೆಂಬೆ; ನಿಂದ ಬಯಲ ನೆರೆವೆ.
ಎನ್ನ ಕಪಿಲಸಿದ್ಧಮಲ್ಲಿನಾಥಯ್ಯನವ್ವಾ. ॥ ೩೯೬ ॥

೩೯೭

ಕಂಡು ಕಂಟಣೆಸಿ ಓಸರಿಸದಿಪ್ಪಳು ನೋಡಾ,
ಆಕೆಯಂತಿರಬೇಡವೆ ಹಿರಿಯರು?
ಆ ಮನ ವಿಚ್ಛಂದವಾಗದೊಂದೆಯಂದದಲಿಪ್ಪ
ನಿಮ್ಮದೊಂದು ಸಮತಾಗುಣ
ಎನ್ನನೆಂದು ಬಂದು ಪೊದ್ದಿಪ್ಪುದು ಹೇಳಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೯೭ ॥

೩೯೮

ಕಂಡೆನಯ್ಯಾ, ನೀನೊಡ್ಡಿದೊಡ್ಡಣೆಯ,
ಕಿರಿಕಿರಿದಾಗಿ ತರಿದಡೆ ಹಿರಿಹಿರಿದಾಗಿ ನೆನೆವೆನು;
ಕಾಯವ ಬೇಡಿದಡೀವೆನು.
ಪ್ರಾಣ ನಿಮ್ಮದಾಗಿ, ಉಳಿದ ಹಂಗು ನಮಗಿಲ್ಲ,
ಕಪಿಲಸಿದ್ಧಮಲ್ಲಿನಾಥಯ್ಯಾ. ॥ ೩೯೮ ॥

೩೯೯

ಕಂಡೆನು ಎಂದೆಂಬೆ, ಉಂಡುಂಡು ಕಾಬಡೆ
ಖಂಡಜ್ಞಾನಿಗಳಾದ ಪಾಪವೇನು?
ಮಂಡಳದ ಸುದ್ದಿಯನು ಕಂಡ ಶಿಶುಲೋಕಕ್ಕೆ
ಉಂಡುತಿಲ್ಲದೆ ಎಯ್ದಿತಾನಂದದ
ಖಂಡೇಂದುಶೇಖರನ ಕಂಡಿದ್ದ ಕೂಟವನು
ಕಂಡವರು ಹೇಳಿರೈ ಕಪಿಲಸಿದ್ಧಮಲ್ಲೇಶ್ವರನ. ॥ ೩೯೯ ॥

೪೦೦

ಕಂಬುವಿನ ಭೇದದಲಿ ಅಂಬಿತ್ತು ಅಜಕೋಟಿ,
ಕಂಬುವಿಂ ಭವಿಸಿತ್ತು ಜಗವೆಲ್ಲವು.
ಆ ಕಂಬುಯೋಗಕ್ಕೆ ತಾನಿಂಬಪ್ಪ ತಾತ್ಪರ್ಯ
ಶಂಭು ನೀನಹೆ ಶುದ್ಧ ನೆಲೆ ತಾನದು.
ಸಂಭ್ರಮದ ಬಿಂಬದಿಂದೊಂಬತ್ತು ನಾಳದಲಿ
ತುಂಬಿಯಾಳಾಪದಾ ಮಧು ಪುಷ್ಪದ
ಸಂಭ್ರಮದ ಖೇಚರದ ಆನಂದರಚನೆಯ
ಶಂಭು ನೀನಾದೆ, ಕಪಿಲಸಿದ್ಧಮಲ್ಲೇಶ್ವರಾ. ॥ ೪೦೦ ॥

೪೦೧

ಕಡದ ಕಂಬದ ನಡುವೆ
ಮೃಡ ನಿನ್ನ ಒಡಲಾಗಿ ಕಂಬ ನೀರಾಯಿತಯ್ಯಾ.
ಅಯ್ಯಾ, ಸಾಕಲ್ಯವ ನಿಃಕರಿಸಿ
ಅನೇಕ ನಿರವಯವನೆಯ್ದಿ,
ಆಕಾರಕ ಸಿದ್ಧ ದೇವರ ದೇವನೆ ಕೇಳು
ಕಪಿಲಸಿದ್ಧಮಲ್ಲಿನಾಥಯ್ಯಾ. ॥ ೪೦೧ ॥

೪೦೨

ಕಣ್ಬೇಟವೆಂಬ ಕಾನನದಲ್ಲಿ ಅರಸುತ್ತಿದ್ದೇನೆ.
ಭಕ್ತಿಯೆಂಬ ಹೊಮ್ಮಿಗವ ಸೋವುತ್ತಿದ್ದೇನೆ.
ಲಿಂಗತ್ರಯವೆಂಬ ಬಲೆಗಾಗಿ ಮಿಗ ಸಿಕ್ಕಿ ಬಲೆ ಹರಿದೊಂದಾದಡೆ,
ಎಯ್ದಿದೆನಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನನೆಂಬ
ಪರಮ ಮುಕ್ತಿರಾಜ್ಯವನು. ॥ ೪೦೨ ॥

೪೦೩

ಕತ್ತಲೆಯ ಕಾನನದಿ ಇತ್ತರದ ಮಧ್ಯದಲಿ
ಸುತ್ತಿಪ್ಪುದದು ಅಖಿಲಲೋಕಕಾಗಿ.
ಬೇರು ನಾಶವು ಆಗಿ, ದೀಪ್ತಿ ಅತಿ ಪ್ರಜ್ವಲ್ಯ
ಮೂಲಾಧಾರಕ್ಕೆ ಮುನ್ನ ಬಸವಣ್ಣನು,
ಬಸವಣ್ಣನ ಕರುಣ ಸದಮಲಜ್ಞಾನಕ್ಕೆ
ದೆಸೆ ನಾನು ಆದೆನ್ನೈ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೦೩ ॥

೪೦೪

ಕತ್ತಲೆಯೊಳಗಡಗಿದ ನೆಳಲಿನ ಬೀಜ
ಬಿತ್ತದ ಮುನ್ನ ಮಾಮರನಾಯಿತ್ತು.
ತನ್ನ ನೆಳಲೆಲ್ಲಾ ಬೆಳದಿಂಗಳು.
ನೋಡ ಹೋದವರ ಕಣ್ಣೆಲ್ಲಾ ಒಡೆದವು.
ಉಲುಹಿದ್ದೂ ಉಲುಹಿಲ್ಲ ; ಕಪಿಲಸಿದ್ಧಮಲ್ಲಿಕಾರ್ಜುನಯ್ಯ,
ಆ ಮರದ ಹೋಟೆಯೊಳಗಣ ಮಧುವಿನಂತಿದ್ದನು. ॥ ೪೦೪ ॥

೪೦೫

ಕಥನ ಬ್ರಹ್ಮಾಂಡದಲ್ಲಿ ಮಥನಿಸುವ ಭೇದವನು
ಸುಚಿತ್ತದಿಂದವೆ ಕಂಡೆ.
ಸಾಕ್ಷಾತ್ ಉರುತರ ಕೈವಲ್ಯ ಪರಮ ಸೀಮೆಯ ಮೀರಿ
ಒಡಲಿಪ್ಪುದದು ನಿತ್ಯ ಸಾನಂದದಾ ಆನಂದಸ್ಥಾನದಲ್ಲಿ.
ಆನಿಪ್ಪ ಲೋಕದಲ್ಲಿ ತಾನಿಪ್ಪ
ನಿಷ್ಕಳದ ಪುಷ್ಕರದಲ್ಲಿ ಸ್ವಾನುಭಾವ ದೀಕ್ಷೆ
ನಾನಿಪ್ಪ ಸಂಯೋಗ ಮೂಱಱ ಮೇಲಿಪ್ಪ
ಮುಕ್ತ್ಯಾಂಗನೆಯರ ಕೂಟ
ನೀನು ನಾನಾದೆ ಕಪಿಲಸಿದ್ಧಮಲ್ಲೇಶ್ವರ. ॥ ೪೦೫ ॥

೪೦೬

ಕನಕದಗಿರಿಗೆ ಕಾಂತಿಯಿಟ್ಟಿತು ಪ್ರಭೆ
ವಿನಯದ ಅನುಭಾವಕ್ಕೆ ಚಿನ್ನದ ವರ್ಣವನೇಕೀಕರಿಸಲು
ಅನುವಾಯಿತ್ತು ನಾಲ್ಕೆಸಳಪೀಠ
ಆ ಪೀಠದಲ್ಲಿ ದಾಸ ನಿಂದು ಆಚಾರವಿಡಿದು ನಡೆಯಲು
ಭೂಮಿಯ ಕಳೆದುಕೊಂಡನಯ್ಯಾ ನಿಮ್ಮ ಶರಣ ಚೆನ್ನಬಸವಣ್ಣನು.
ಕಪಿಲಸಿದ್ಧಮಲ್ಲಿನಾಥಯ್ಯಾ, ಚೆನ್ನಬಸವಣ್ಣನಿಂದ ಬದುಕಿದೆನಯ್ಯಾ.
॥ ೪೦೬ ॥

೪೦೭

ಕಪ್ಪಿನ ಬಣ್ಣದಾಕೆ ಇಪ್ಪಿರವನರಿಯರು,
ಆಬೆಯ ಕೈಯೊಳಗಾದರು,

ಕೋಟಿ ಹರಿವಿರಂಚಾದಿಗಳು.
ಗುರುವಾಜ್ಞೆಯಿಂದ ಅಯ್ಯನಪ್ಪ ಅಕ್ಷರದ್ವಯವನರಿದಡೆ
ಆಬೆಯ ಕೈಗೆ ತಾವು ಹೊರಗಪ್ಪರು
ಕಪಿಲಸಿದ್ಧಮಲ್ಲಿಕಾರ್ಜುನನ ಕಾಬರು. ॥ ೪೦೭ ॥

೪೦೮

ಕಬ್ಬುನ ಪರುಷವ ಮುಟ್ಟಿ
ಪರುಷವಾಗದೊಡಾ ಪರುಷಕ್ಕೆ ಕೊರತೆಯಲ್ಲವೆ?
ಅಯ್ಯಾ, ನಿಮ್ಮ ಪೂಜಿಸಿ ನೀವೆಯಾಗದೊಡೆ
ನಿಮ್ಮ ದೇವತ್ವಕ್ಕೆ ಹಾನಿಯಲ್ಲವೆ!
ಅಯ್ಯಾ ನಿಮ್ಮ ದೇವತ್ವಕ್ಕೆ ಹಾನಿಯಾಗದಂತೆ ಮಾಡಾ
ಎನ್ನ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೦೮ ॥

೪೦೯

ಕಮಲ ಸಿಂಹಾಸನದ ವಿಮಲಾತ್ಮನನು ಮಾಡಿ
ಸುಮನ ಗುರುಲಿಂಗ ಜಂಗಮವನೊಂದುಮಾಡಿ
ಪರಮ ಜ್ಞಾನೋದಯದ ಚೇತನದೊಳಿಟ್ಟ
ಶ್ರೀಗುರು ಚೆನ್ನಬಸವಣ್ಣ ಪರಂಜ್ಯೋತಿರ್ಮಯನಯ್ಯ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೦೯ ॥

೪೧೦

ಕರ ಕಂಗಳನು ಮನೆಯ ತೆರಹು ಮಾಡಿಯೆ
ಶ್ರೋತ್ರ ಕರದೊಳಗೆ ಶಿವಲಿಂಗ ಸ್ಥಾಪ್ಯಗೊಳಿಸಿ
ನೆನಹುಗೆಟ್ಟಾ ಸೀಮೆ ನಿಷ್ಕಳದ ಪದವುವನು
ಅರಿಹಿದಾತ ಗುರು ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೧೦ ॥

೪೧೧

ಕರಗಳಾನತವಾಗೆ ಮುಖಗಳು ಪಲವಾಗೆ
ತನುಪ್ರಾಣಯಿಪ್ಪಕೆ ತನ್ನ ರೂಪೆ
ಆನೀ ನೆನಹಿನ ಹಲವ ನುಂಗಿ ಬೆಳಗ ನೆಲೆಯ
ತೋರಬಲ್ಲಡೆ ಗುರು ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೧೧ ॥

೪೧೨

ಕರಣಂಗಳ ಕಳೆದು ಇರವಿನ ಬ್ರಹ್ಮ ನಿಜದಲ್ಲಿ ನಿಂದಿತ್ತಯ್ಯಾ.
ಆತ್ಮಸಂಗ ಸಂಯೋಗದ ಇರವು ನಿಮ್ಮಲ್ಲಿ ನಿಜವಾಯಿತ್ತಯ್ಯಾ.
ಕಪಿಲಸಿದ್ಧಮಲ್ಲಿನಾಥಯ್ಯಾ,
ನಿಮ್ಮ ಚೆನ್ನಬಸವಣ್ಣನ ಕೃಪೆ ನಿಮ್ಮಿಂದ
ಸಾಧ್ಯವಾಯಿತ್ತಯ್ಯಾ ಪ್ರಭುವೆ. ॥ ೪೧೨ ॥

೪೧೩

ಕರಣಂಗಳೆಲ್ಲವನು ಹದುಳದಿಂದವೆ ಬೆಳಗಿ
ಕರುಣದಿಂದಿರಿಸಿದನು ತೂಗಿ ತೂಗಿ.
ಕರಣಹರಣುಪಕರಣವಾಗಿಪ್ಪ ಗಿರ್ವಾಣ ಪದವ
ಸರಿದಾತ ಶ್ರೀ ಗುರು ಕಪಿಲಸಿದ್ಧಮಲ್ಲಿಕಾರ್ಜುನ. ॥ ೪೧೩ ॥

೪೧೪

ಕರಣ ಕಂದೆರವುದನು ಆರಯ್ಯ ಅರಿವರು?
ಕರಣೇಂದ್ರಿಯಂಗಳರತ ನಿತ್ಯರಲ್ಲದೆ.
ನೆನಹಿನ ಬ್ರಹ್ಮಾಂಡವೊಳಕೊಂಡ ಸೀಮೆಯನು
ತನು ಮಧ್ಯಕರದಲಿ ಕಂಡೆ.
ಪ್ರಸಾದ ತ್ರೈಲಿಂಗವ ಮರಳಿ ಸಕಲಕ್ಕಾನೆ ನಿಷ್ಕಲಕೆ ನಿತ್ಯನೈ
ಅಜಾತರೂಪ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೧೪ ॥

೪೧೫

ಕರಣಾದಿ ಗುಣಗಳನು ಕಳೆಯಲೀಯದೆ ಕಳೆದು,
ಹದುಳವಿರಿಸಿದ ಮನದ ಮಧ್ಯದಲ್ಲಿ.
ತನುತ್ರಯದ ಮಲತ್ರಯವ ಅಜಲೋಕದಲು ಸುಟ್ಟು,
ಹದುಳವಿರಿಸಿದ ಸಮತೆ ಸಂಗಮದಲಿ.
ಕರುಣಾಕರನೆ ಕಪಿಲಸಿದ್ಧಮಲ್ಲೇಶ್ವರನ
ನೆನಪ ತೋರುವ ಮುಕುರ ಸಮತೆ ರೂಪು. ॥ ೪೧೫ ॥

೪೧೬

ಕರದ ಮಹಾತ್ಮೆಯನು ಪೊಗಳುವರೆ ಎನ್ನಳವೆ?
ಕರುಣಾಕರನೆ ಬಲ್ಲ ಗುರುರಾಯನು.
ಹಲವು ಬ್ರಹ್ಮಾಂಡವನು ಒಳಗಿಟ್ಟ ಘನವನು
ಧರಿಸಿಪ್ಪುದದು ಭಕ್ತಿಕರವು ನೋಡಾ.
ಆ ಶರಣರ ಕರವನು ಹೊಗಳುವವು ವೇದಂಗಳಯ್ಯ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೧೬ ॥

೪೧೭

ಕರದಲ್ಲಿ ಲಿಂಗವನು ಗುರು ಕುಡಲಿಕಾನಂದ
ತನುವಿನೊಳು ಭೇದಿಸುವ ಪರಿಯ ನೋಡಾ.
ಉರುತರವು ಕೈವಲ್ಯಪದ ದೀಕ್ಷತ್ರಯದಿ
ಭವಿಸುವಾತನು ತಾನು ಪರಮಜ್ಞಾನಿ ಶಿಷ್ಯನು
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೧೭ ॥

೪೧೮

ಕರದಲ್ಲಿ ಶಿವಲಿಂಗ
ಉದರದಲ್ಲಿ ಅಗ್ನಿ ಪರಿಯಂತೆ ಪ್ರಸಾದಲಿಂಗ ಭವಿಸಿ,
ತನುಮಲತ್ರಯವನು, ಘನಪಾಶವರ್ಗವನು,
ನೆನಹಿಂದ ಸುಟ್ಟುದದು ಪರಿಯಂತರವುಯೆಯ್ದಿ.
ಸಕಲವನು ತೋರುವಾ ಅಪ್ರಮಾಣ ಪ್ರಸಾದಲಿಂಗ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೧೮ ॥

೪೧೯

ಕರಮನದಲ್ಲಿ ತನುವಾದೆ ಅಯ್ಯ,
ಮನದ ಮಧ್ಯಸ್ಥಾನ ನೀನು.
ತನು ಪ್ರಾಣ ಇಷ್ಟವಾದೆ.
ಮನದ ಮಂಗಳನೆ ಅವಧಾರು
ತನುಗುಣದೂರನೆ ನಮೋ, ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೪೧೯ ॥

೪೨೦

ಕರವೆ ಭಾಂಡವಾಗಿ ಜಿಹ್ವೆಯೆ ಕರವಾಗಿ,
ಇಂದ್ರಿಯಂಗಳ್ಳೆ ಮುಖವಾಗಿಪ್ಪ ಪ್ರಸಾದಿಯ ಪರಿಯಿನ್ನೆಂತೋ ?
ಆನಂದವಲ್ಲಿ ಸಾನಂದವನರ್ಪಿಸಿ ಸಾನಂದವಲ್ಲಿ ನಯವಾಗಿಪ್ಪ
ಪ್ರಸಾದಿಯ ಪರಿಯಿನ್ನೆಂತೊ ?
ತನುತ್ರಯಂಗಳ ಮೀರಿ ಮನತ್ರಯಂಗಳ ದಾಂಟಿಪ್ಪ
ಪ್ರಸಾದಿಗೆ ಆವುದ ಸರಿಯೆಂಬೆ ?
ಬಂದುದನತಿಗಳೆಯೆ, ಬಾರದುದ ಬಯಸೆ.
ತನುಮುಖವೆಲ್ಲ ಲಿಂಗಮುಖ, ಸ್ವಾದಿಸುವವೆಲ್ಲ ಲಿಂಗಾರ್ಪಿತ;
ಜಾಗ್ರ ಸ್ವಪ್ನ ಸುಷುಪ್ತಿಯಲ್ಲಿ
ಲಿಂಗಾರ್ಪಿತವಲ್ಲದೆ ಅನರ್ಪಿತವ ನೋಡ ;
ತಟ್ಟುವ ಮುಟ್ಟುವ ಭೇದಂಗಳೆಲ್ಲವು ಸರ್ವಾರ್ಪಿತ.
ಆ ತನುರುತರ ಸಮ್ಯಕ್‌ಜ್ಞಾನಿಯಾದ ಕಾರಣ ಪ್ರಸನ್ನತೆಯಾಯಿತ್ತು.
ಪ್ರಸನ್ನ ಪ್ರಸಾದತೆಯಲ್ಲಿ ಸಿತ್ಯನಪ್ಪಾತ ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ
ಉರುತರ ಮಹಾಜ್ಯೋತಿರ್ಮಯನು. ॥ ೪೨೦ ॥

೪೨೧

ಕರಸ್ಥಲಕೆ ಲಿಂಗ ಬರೆ
ಕರಣೇಂದ್ರಿಯಂಗಳಾ ಕರಗಳೆ ಅಯ್ಯನಾ ಪರಿಯಾದವೈ.
ಪರಿಯ ಪರಿಯಾ ಒರೆದು ನೋಡುವ ಲೀಲೆ
ಪರೀಕ್ಷಿಸುವದೆಲ್ಲವದು ಶುದ್ಧಸಿದ್ಧ ಪ್ರಸಿದ್ಧ
ಪರಿಣಾಮವನರಿವಡೆಯು ತವಕಿಗಳಿಗದು ದೂರ.
ಗುರುಕರುಣವುಳ್ಳವರ ಹೊಲಬು ತಾನು
ಕರುಣೆ ಮಹಾದಾನಿ ಕಪಿಲಸಿದ್ಧಮಲ್ಲಿಕಾರ್ಜುನನ ಜ್ಞಾನ,
ಕರಣೇಂದ್ರಿಯವು ಶುದ್ಧ. ॥ ೪೨೧ ॥

೪೨೨

ಕರ್ಪರದ ಕರದಲ್ಲಿ ಇದ್ದ ಮೂಜಗವೆಲ್ಲವು
ತಪ್ಪದತಿ ಸಿದ್ಧಾಂತವನು ಭೇದಿಸಿ,
ಶಬ್ದಬ್ರಹ್ಮವು ಮೀರಿದತ್ತ ಬ್ರಹ್ಮಾಂಡವು
ಇತ್ತೆರವು ಕಂಡೊಳಲು ಮೂಲೋಕಕೆ.

ಅಯ್ಯ ಕೇಳಯ್ಯ, ನಿನ್ನಮೃತಹಸ್ತವನೊಮ್ಮೆ
ಒಯ್ಯನೆ ನೀಡಿ ಪರಮಪದದಲ್ಲಿ
ಕೈಯೈದರಲ್ಲಿ ಮುಖವು, ನಯನದಲ್ಲಿ ಜಿಹ್ವೆ
ತಾನುಣುತಿಪ್ಪ ಕರಮುಖದಲ್ಲಿ
ಚೋದ್ಯವ ಬೆಳಗಿನಲ್ಲಿ ಗುರುಕರಣವಿಡಿದಿಪ್ಪ
ಭಾವ ಸಜ್ಜನ ಶುದ್ಧ ಸದ್ಭಕ್ತರ
ಇಂದ್ರಿಯಂ ಐದು ನಿನ್ನುಂಬ ಜಿಹ್ವೆಯಾಗಿ
ಸಂದಣಿಪ ಕರಣ ನಿನ್ನಯ ಚೇತನ.
ಇಂತು ಭಕ್ತಂಗೆ ಪ್ರಾಣವು ಶೂನ್ಯ ನಿನಗೀಗ
ಅಂತರಿಪ ಕಾಯವಿಲ್ಲದ ಪರಿಯನು,
ಇಂತು ವಿಚಾರಿಸುವಡೆ ಭಕ್ತ ಕಾರಣ ಪರಶಿವನು
ಸಂತತಂ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೨೨ ॥

೪೨೩

ಕರ್ಮಜಸವೆಂಬ ಹಮ್ಮಿನ ತೇಜದಲಿ
ನಿರ್ಮಳಜ್ಞಾನಿ ನಿಮ್ಮನರಿಯೆನಯ್ಯಾ, ಕರ್ಮಕ್ಕೊಳಗಾದೆನು,
ಮೋಹವೊಲನ ಬಲೆಗೆ ಗುರಿಯಾದೆನು.
ಕಾಯಯ್ಯಾ ಕರುಣಿ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೨೩ ॥

೪೨೪

ಕರ್ಮದ ಗಡಣ ಹಿಂಗಿಸು ; ಪಾಪದ ರಾಶಿಯ ತೊಲಗಿಸು ;
ಸಂಸಾರದಾಶೆಯ ಬೆಂದ ಮನದ ಕಾಟವ ಮಾಣಿಸು.
ಮಾಯದ ತಲೆಯನರಿದು ಮರಳಿ ಬಾರಾ ಎನ್ನ ಕರಕ್ಕೆ, ನಿಮ್ಮ ಧರ್ಮ.
ನಿಮಗಾಣೆ ಗುರುವೆ, ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೨೪ ॥

೪೨೫

ಕರ್ಮವನರಿತೆನ್ನ ನಿಃಕರ್ಮಿಯ ಮಾಡಯ್ಯಾ ಗುರುವೆ.
ಈ ಕರ್ಮಕ್ಕಾನಾರೆನು ತಂದೆ.
ಅಯ್ಯಾ, ಎನ್ನ ನಿಃಕರ್ಮಿಯ ಮಾಡಯ್ಯಾ ಗುರುವೆ.
ಅನತ ಘನಗುರುವೆ ಕಪಿಲಸಿದ್ಧಮಲ್ಲಿನಾಥಾ,
ಎನ್ನ ನಿನ್ನವರಂತೆ ಮಾಡಾ, ನಿಮ್ಮ ಧರ್ಮ. ॥ ೪೨೫ ॥

೪೨೬

ಕರ್ಮಿಗಳು ಶಿವಪಥಕ್ಕೆ ಬಪ್ಪಾಗಳವರ
ಕರ್ಮ ಬೆಂಬತ್ತಿ ಕಾಡುವದಯ್ಯಾ.
ಲಿಂಗಾರಾಧನೆಯ ಮಾಡಲೀಯದು.
ಸಂದೇಹವನೆ ತೋರಿಸಿ ಕೆಡಿಸುವದಯ್ಯಾ.
ಏಕೆ ? ಅವರು ಮಾಡಿದ ಕರ್ಮವನುಣಬೇಕಾಗಿ !
ಇದನರಿದು ನಿಮ್ಮ ನೆರೆನಂಬಿ ಪೂಜಿಸೆ ಹರಿವುದು ಕರ್ಮ,
ಕಪಿಲಸಿದ್ಧಮಲ್ಲಿಕಾರ್ಜುನಾ, ದೇವರ ದೇವಾ. ॥ ೪೨೬ ॥

೪೨೭

ಕರಣ ಕಾನನದೊಳಗಾನು ಹೊಲಬುಗೆಟ್ಟೆನಯ್ಯಾ ;
ನೆನಹೆಂಬ ಮಠದೊಳಗೆ ನಿರ್ಮಳನಾದೆನಯ್ಯಾ ;
ಘನತರ ಸಂಯೋಗದಲ್ಲಿ ನೀನು ನಾನಾದೆ.
ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ,
ಸಂದು ಸವೆದು ಒಂದಾದೆ. ॥ ೪೨೭ ॥

೪೨೮

ಕರುಣ ಕಂಬನಿಯ ದೆಸೆದೆಸೆಗೆಟ್ಟ
ವಾರುಧಿಯೊಳಗೆ ಮುಸುಕಿ ಮುಸುಕಿ
ಮೋಹಿಸುತ್ತಿರ್ದೆಯಯ್ಯಾ.
ದೆಸೆಗೆಟ್ಟ ಪಶುವಾನಿದ್ದ
ಪಶು ಪಾಶಮೋಚನನು ನೀನಾದೆ.
ಈ ಹಸುಳೆಯ ತೆಗೆದು ನಿನ್ನ ವಶಕ್ಕೆ
ಇತ್ತ ಬಾಯೆಂದೆ,
ಕರುಣೆ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೨೮ ॥

೪೨೯

ಕರುಣರಸ ಹರಿವಲ್ಲಿ
ಮಹಾಕಾರುಣ್ಯ ಸುಧಾಪ್ರವಾಹವಪ್ಪಲ್ಲಿ
ಆರಯ್ಯಾ ನಿನ್ನನರಿವವರು ?

ಲೋಕಾದಿಲೋಕಂಗಳಿಗೆ ಏಕೋದೇವ ನೀನು
ಅನಾದಿಮೂಲಕ್ಕೆ ಮೂಲಸ್ವಾಮಿ ನೀನೆ ಕಾಣಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೨೯ ॥

೪೩೦

ಕರುಣಾಕರ, ಕರತಳಾಮಳಕ ಎಂದಪ್ಪುದಯ್ಯಾ ?
ನಿನ್ನ ನೆನಹಿನ ಮಹಾಸಮುದ್ರದೊಳಗದ್ದಿ ಎಂದಾಳ್ವೆಸಯ್ಯಾ?
ಬಂದುದು ಬಾರದೆಂಬ ಸಂದೇಹವನೆಂದು ಸವೆವೆನಯ್ಯಾ ?
ಅನಂಗವಿದಾರಣ ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ,
ಎಂದಯ್ಯಾ ಕರುಣ ಕಂದರೆವುದು ? ॥ ೪೩೦ ॥

೪೩೧

ಕರುಣಾಕರನೆ ಎಂದು ಹೊಗಳುತ್ತೈದಾವೆ ಶ್ರುತಿಯು ;
ಐದಿದಡೆ ಹಾನಿ ಬಿರಿದಿಂಗೆ.
ಅಯ್ಯಾ, ಅಯ್ಯಾ, ಕರುಣಾಕರ ಕಪಿಲಸಿದ್ಧಮಲ್ಲೇಶ್ವರಾ,
ಓರಂತೆ ಮಾಡಿ ಸಲಹಯ್ಯಾ ಎನ್ನನು. ॥ ೪೩೧ ॥

೪೩೨

ಕರುಣಾಕರನೆ, ಎನ್ನ ದೆಸೆಗೆಟ್ಟ ಪಶುವನು
ಹಸಗೆಡಿಸೂದು ನಿನಗುಚಿತವೆ ಹೇಳಾ !
ಸಕಲ ಸಾನಂದನೆ ಆನಂದರೂಪನೆ
ವಿಕಲವನು ಮಾಣಿಸಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೩೨ ॥

೪೩೩

ಕರುಣಾಕರನೆ, ನಿನ್ನ ವಸವಾದಪ್ಪುದಯ್ಯಾ,
ಸಕಲ ಬ್ರಹ್ಮಾಂಡವು-ನಾನು ಸಹಿತವಾಗಿ.
ವಸುಧೀಶ ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ,
ನಿನ್ನ ಕರುಣ ಕಾನನದೊಳಗೆ ಲೀಯವಾದೆ. ॥ ೪೩೩ ॥

೪೩೪

ಕರುಣೆ ಬಸವಾ, ಕಾಲಹರ ಬಸವಾ, ಕರ್ಮಹರ ಬಸವಾ,
ನಿರ್ಮಳ ಬಸವಾ, ಶಿವಜ್ಞಾನಿ ಬಸವಾ,
ನಿಮ್ಮ ಧರ್ಮವಯ್ಯಾ, ಈ ಭಕ್ತಿಯ ಪದವು.
ಕರುಣೆ ಕಪಿಲಸಿದ್ಧಮಲ್ಲಿನಾಥಯ್ಯಾ,
ನಿಮಗೂ ಎನಗೂ ಬಸವಣ್ಣನ ಧರ್ಮವಯ್ಯಾ. ॥ ೪೩೪ ॥

೪೩೫

ಕರುಣೆ, ಮಹಾದಾನಿ,
ನಿನ್ನವರಿಗೆ ನೀನು ಕರುಣ ಕಂದೆರೆವ ಭೇದವ,
ಅವರ ಮನದ ಮಸ್ತಕದಲ್ಲಿ
ನಿನ್ನ ಮಹಾಜ್ಯೋತಿ ಬೆಳಗುವ ಭೇದವ,
ಅರಿಯಬಹುದೆ ಎಲ್ಲರಿಗೆ,
ಅನಂಗವಿದಾರಣ ಕಪಿಲಸಿದ್ಧಮಲ್ಲಿಕಾರ್ಜುನಲಿಂಗವೆ,
ನಿನ್ನ ಕರುಣವುಳ್ಳವರಿಗಲ್ಲದೆ ? ॥ ೪೩೫ ॥

೪೩೬

ಕರುಣೆಯೆಂದು ಮರೆವೊಕ್ಕಡೆ ನಿಃಕರುಣೆಯಪ್ಪೆ.
ಎಲೆ ಅಯ್ಯಾ, ಅರಿಯದೆ ಕಿರಿದು ಮಾಡಿದಡೆ
ದಾನಿಯೆಂದು ಭವಕ್ಕೆ ಗುರಿಮಾಡುವರೆ ?
ಎಲೆ ಅಯ್ಯಾ, ಮರಳಿ ಬಾರದಂತೆ ಮಾಡಯ್ಯಾ, ನಿಮ್ಮ ಧರ್ಮ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೩೬ ॥

೪೩೭

ಕಸವ ಕೊಂಡು ಹೊಸ ಧಾನ್ಯವ ಕೊಟ್ಟಡೆ, ಒಲ್ಲೆಂಬ ಚಮರರಾರು ?
ಜಲವ ಕೊಂಡು ಅಮೃತವ ಕೊಟ್ಟಡೆ, ಒಲ್ಲೆಂಬ ಭಾಷೆಯವಾರಮು ?
ಎನ್ನಂತರಂಗದ ಜ್ಞಾನವ ಕೊಂಡು
ಸುಜ್ಞಾನವಪ್ಪ ನಿಮ್ಮ ಕರತೇಜವ ಕೊಟ್ಟಡೆ,
ಒಲ್ಲೆನೆಂಬ ಪಾತಕಿ ಯಾರು ?
ಕಪಿಲಸಿದ್ಧಮಲ್ಲಿಕಾರ್ಜುನ ಮಡಿವಾಳ ತಂದೆ. ॥ ೪೩೭ ॥

೪೩೮

ಕಳವಳದ ಕಂದೆರವಿಗೊಳಗು ಮಾಡಿದಿರಿ.
ಹಾ ! ಹಾ ! ಎಲೆ ಅಯ್ಯಾ,
ಎನ್ನ ವಿಕಾರದಲ್ಲಿ ಗುರಿ ಮಾಡಿದಿರಯ್ಯಾ.
ಕೋಪದ ಕಾಡುಗಿಚ್ಚಿಗೆ ಅಡವಿಯ ಗುರಿಮಾಡಿದಿರಿ
ಎನ್ನ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೩೮ ॥

೪೩೯

ಕಳೆಯೊಳಗಣ ಭೇದ, ಕಳೆ ನಾದದ ಭೇದ
ಕಳಾವಿದರಿಗಲ್ಲದೆ ವೇದ್ಯವಲ್ಲ.
ಮಧುಕರನುಂಡಿಪ್ಪ ಸದಮದದ ಪರಿಮಳವ
ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ, ನಿಮ್ಮ ಶರಣ ಬಲ್ಲ.॥ ೪೩೯ ॥

೪೪೦

ಕಾಡದೆ ಎನ್ನ ಮನದಿಚ್ಛೆಯ ಮಾಡಯ್ಯಾ, ನಿಮ್ಮ ಧರ್ಮ!
ಕಾಡುವುದುಚಿತವೆ ಅಯ್ಯಾ, ನಿಮ್ಮ ಕರುಣದ ಕಂದ ನಾನು!
ನಿಮ್ಮ ಕರುಣದ ಕಂದ ನಾನಯ್ಯಾ !
ಎಂದುತನಕ ಕಾಡುವಿರಿ ಅಂದುತನಕ ನೋಡುವೆನು.
ಹಿಂದುಮುಂದುಗೆಟ್ಟವನೆಂದು ಏಡಿಸಿದಡೆ
ತಂದೆ ! ನಾ ನಿಮ್ಮನೇಕೆ ಬಿಡುವೆ.
ಕರುಣಿಸು ಎನ್ನ ಪರಮಗುರುವೆ ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೪೪೦ ॥

೪೪೧

ಕಾಣಬಹುದು ಕೈಗೆ ಸಿಲುಕದು ;
ಅರಿಯಬಹುದು ಕುರುಹಿಡಬಾರದು ;
ಭಾವಿಸಬಹುದು ಬೆರಸಬಾರದು.
ಇಂತೀ ಉಪಮಿಸಬಾರದ ಮಹಾಘನವ
ಕಪಿಲಸಿದ್ಧಮಲ್ಲಿಕಾರ್ಜುನಾ, ನಿಮ್ಮ ಶರಣನೇ ಬಲ್ಲ. ॥ ೪೪೧ ॥

೪೪೨

ಕಾತ ವೃಕ್ಷವವ್ವಾ ನೀನು,
ಪಕ್ಷಿಗಳು ಹಲವಾಗಿ ಬಂದು
ಹಣ್ಣ ಮೆಲಿಯಲ್ಕೆ ನಲಿನಲಿದಾಡುವೆ.
ಪಕ್ಷಿ ವೃಕ್ಷವ ನುಂಗಿದಡೆ ಎಂತು ಸೈರಿಸಲಹುದೌ,
ಎನ್ನ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೪೨ ॥

೪೪೩

ಕಾಮ ಕಾಡಿತು, ಕ್ರೋಧ ಕೊಂದಿತು,
ಆಮಿಷವೆನ್ನನೆಳೆವುತ್ತಿದೆ.
ಕರುಣಮಾಡಾ ಹರಹರ ಮಹಾದೇವಾ,
ಕರುಣ ಮಾಡಾ ಶಿವಶಿವ ಮಹಾದೇವಾ.
ಕರುಣ ಮಾಡಾ ದೆಸೆಗೆಟ್ಟ ಪಶುವಿನೊಮ್ಮೆ,
ಕರುಣ ಮಾಡಾ ವಶವಲ್ಲದ ಶಿಶುವಿಂಗೊಮ್ಮೆ.
ಕರುಣ ಮಾಡಾ ಅನ್ಯವನ್ನು ನಾನರಿಯೆ.
ನಿಮ್ಮ ಪಾದವನುರೆ ಮಚ್ಚಿದೆನು,
ಎನ್ನ ಕಪಿಲಸಿದ್ಧಮಲ್ಲಿನಾಥಯ್ಯ ತಂದೆ. ॥ ೪೪೩ ॥

೪೪೪

ಕಾಮನನು ನೋಡಿದ ಕಂಗಳಲ್ಲಿ ನೋಡದೆ
ಸೋಮನಯನದಿ ನೋಡಿ ಸಲಹು ತಂದೆ
ಕಾಮಾರಿಯಯ್ಯ ನೀನು, ಕಾಮಂಗೆ ಒಪ್ಪಿಸದಿರು ಎನ್ನ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೪೪ ॥

೪೪೫

ಕಾಮವಿಕಾರಕ್ಕೆ ಕಳವಳಿಸಿ ಮನವು
ಹೇಮದಿಚ್ಛೆಗೆ ಹೆಚ್ಚಿ ಹೆಚ್ಚಿ
ಕಾಮಾರಿ ನಿಮ್ಮುವ ನೆನೆಯದೀಮನವು
ಓರಂತೆ ನರಕಕ್ಕಿಳಿದೆನೆಂಬುದು.
ಕಾರುಣ್ಯಾಕರ ಎನ್ನುವನಾರೈದು ಓರಂತೆ ಮಾಡು,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೪೫ ॥

೪೪೬

ಕಾಮಸಂಗವನಳಿದು ಹೇಮದಿಚ್ಛೆಯ ತೊರೆದು,
ನಿಮ್ಮ ನಾಮ ನೆಲೆಯಾಗಿಪ್ಪವರ ತೋರಾ, ಅಯ್ಯಾ ನಿಮ್ಮ ಧರ್ಮ
ಕಪಿಲಸಿದ್ಧಮಲ್ಲಿಕಾರ್ಜುನಾ,
ಅವರ ಪಾದವ ತೋರಿ ಬದುಕಿಸಯ್ಯಾ. ॥ ೪೪೬ ॥

೪೪೭

ಕಾಮಿನಿಯೆಂಬಾಯಕನ ಕರದಲ್ಲಿ ಒಪ್ಪಿಹ
ಲೋಕಂಗಳು ಹಲವು ಕಂಡಾ, ಅವ್ವ.
ಶೂಲದಾಕೃತಿಯಲ್ಲಿ ಮುನ್ನೂರು ದಳದಲ್ಲಿ
ಮೋಹಿಸುತ್ತಿರ್ದವು ಕಂಡಾ,
ನಾಮ ನಾಮವೆಂಬುದರೊಳಗೆ ನಿರ್ನಾಮವಾಗಿದ್ದ
ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ. ॥ ೪೪೭ ॥

೪೪೮

ಕಾಮಿಸಿದೆನಯ್ಯಾ ಬಸವಣ್ಣನ ಭಕ್ತಿಗೆ;
ಕಾಮಿಸಿದೆನಯ್ಯಾ ಬಸವಣ್ಣನ ಯುಕ್ತಿಗೆ;
ಕಾಮಿಸಿದ ಕಾಮವೆ ಕೈಸಾರಿತ್ತಯ್ಯಾ, ಬಸವಣ್ಣನ ಕರುಣದಿಂದ,
ಕಪಿಲಸಿದ್ಧಮಲ್ಲಿನಾಥಯ್ಯಾ. ॥ ೪೪೮ ॥

೪೪೯

ಕಾಮುಖವಳಿದು ಕರಣಂಗಳು ದಮೆ ಒಂದಾಯಿತ್ತಯ್ಯಾ.
ವ್ಯೋಮಪ್ರಸಾದಿ ಸಮಯವಾಯಿತ್ತಯ್ಯಾ ನಿಮ್ಮಿಂದ.
ಇನಿತಾದ ಸುಖ ತಾನೊಂದೆ ಲಿಂಗಭಾವವಾಯಿತ್ತಯ್ಯಾ.
ಕಪಿಲಸಿದ್ಧಮಲ್ಲಿನಾಥಯ್ಯಾ,
ನಿಮ್ಮ ದಯದಿಂದ ಚೆನ್ನಬಸವಣ್ಣನ ಪ್ರಸಾದವಾಯಿತ್ತು. ॥ ೪೪೯ ॥

೪೫೦

ಕಾಯದ ಕರಸ್ಥಳದಲ್ಲಿ ನೀನು ಶೂನ್ಯನಾಗಿಪ್ಪೆಯಲ್ಲಾ, ಎಲೆ ಅಯ್ಯಾ.
ಆನಂದಸ್ಥಾನದಲ್ಲಿ ಅನಿಮಿಷನಾಗಿಪ್ಪೆ ಅಯ್ಯಾ.
ಆದಿಯಾಧಾರ ನಿನಗೆ ತಥ್ಯವಾಗಿಪ್ಪುದಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ. ॥ ೪೫೦ ॥

೪೫೧

ಕಾಯದ ಹೊರಕಣ್ಣ ಮುಚ್ಚಿ
ಮನ ಭಾವದರಿವಿನೊಳಕಣ್ಣ ತೆರೆದು
ಬಂದಾನೆಂಬ ಪರವಶಕ್ಕೆ ಕಿವಿಯಾಂತು ಕೇಳುತ್ತಿದ್ದೇನೆ.
ಅದೆತ್ತಣಿಂದ ಸುಳಿದನೆಂದರಿಯೆನಯ್ಯಾ.
ಅರುಹಿನ ನೇತ್ರಕ್ಕೆ ಸರ್ವಜ್ಞನ ಪ್ರತಿಬಿಂಬ ಸೂಚಿಸಿ ಹೊಳೆವಡೆ
ಕಣ್ದುಂಬಿ ನೋಡಿದೆ ಮನದುಂಬಿ ನೆನೆದೆ,
ಆ ಪ್ರತಿಬಿಂಬವಿಡಿದು ಕಪಿಲಸಿದ್ಧಮಲ್ಲಿಕಾರ್ಜುನನ ಕೂಡುವೆನು.
॥ ೪೫೧ ॥

೪೫೨

ಕಾಯ ಲಿಂಗವೊ ಕಾಯದಲಿ ಸಾರಿಪ್ಪ ಲಿಂಗ ಲಿಂಗವೊ?
ಪ್ರಾಣ ಲಿಂಗವೊ ಪ್ರಾಣದಲ್ಲಿ ಸಾರಿಪ್ಪ ಲಿಂಗ ಲಿಂಗವೊ?
ಜ್ಞಾನ ಲಿಂಗವೊ ಜ್ಞಾನದ ಮೊನೆಯ ಮೇಲೆ ತೋರುವ ಬೆಳಗು
ಲಿಂಗವೊ?
ಲಿಂಗ ಪ್ರಾಣ ಪ್ರಾಣಲಿಂಗವೆಂಬುದನೆಂತೆಂದರಿಯೆನು.
ನಿಮ್ಮ ಕಾಯದ ಕರಸ್ಥಲವ ಸಾರಿದ ಲಿಂಗ
ಪ್ರಾಣದೊಳು ವೇದ್ಯವಾದ ಪರಿಯ ಹೇಳಾ ಪ್ರಭುವೆ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೫೨ ॥

೪೫೩

ಕಾಯವ ನಿಶ್ಚೈಸಲಿಲ್ಲ, ಜೀವವ ನಿಶ್ಚೈಸಲಿಲ್ಲ;
ಕಾಯ ಜೀವ ಎರಡಕ್ಕೂ ನೆಲೆಯಿಲ್ಲವಯ್ಯಾ.
ಸುಖವ ನಿಶ್ಚೈಸಲಿಲ್ಲ, ದುಃಖವ ನಿಶ್ಚೈಸಲಿಲ್ಲ;
ಸುಖ-ದುಃಖ ಎರಡಕ್ಕೂ ನೆಲೆಯಿಲ್ಲವಯ್ಯಾ.
ರಾಜ್ಯವ ನಿಶ್ಚೈಸಲಿಲ್ಲ, ಲಕ್ಷ್ಮಿಯ ನಿಶ್ಚೈಸಲಿಲ್ಲ;
[ರಾಜ್ಯ-ಲಕ್ಷ್ಮಿ ಎರಡಕ್ಕೂ ನೆಲೆಯಿಲ್ಲವಯ್ಯಾ]
ಅಭ್ರಚ್ಛಾಯೆ, ಮರೀಚಿಕಾಜಲ, ಮಹೇಂದ್ರಜಾಲವಯ್ಯಾ ನಮ್ಮ.
ಮನೆ ನನ್ನದು, ಧನ ನನ್ನದು ಎಂಬ ಮರುಳ ಕೇಳಾ-
ಕನಸಿನ ಸುಖ ಕಣ್ದೆರೆದಲ್ಲಿ ಹೋಯಿತ್ತು.
ಹಾಲುಳ್ಳಲ್ಲಿ ಹಬ್ಬವ ಮಾಡಿ, ಗಾಳಿಯುಳ್ಳಲ್ಲಿ ತೂರಿಕೊಳ್ಳಿರಿ:
ಬಳಿಕಲರಸಿದರುಂಟೆ? ಪರಮ ಸುಖವು.

ನಿಜಗುರು ಕಪಿಲಸಿದ್ಧಮಲ್ಲಿಕಾರ್ಜುನನ
ಹರಿಗೋಲುಳ್ಳಲ್ಲಿ ತೊರೆಯ ದಾಂಟಿದೆ. ॥ ೪೫೩ ॥

೪೫೪

ಕಾಯವಿರೆ ಗುರುವ ನೆರೆವೆನೆಂಬವಂಗೆ ಹೇಳುವೆನಯ್ಯಾ.
ತನುವೊಂದೆ ತನುವಾಗಿ, ಧನವೊಂದೆ ಧನವಾಗಿ,
ಮನವೊಂದೆ ಮನವಾಗಿ,
ಹಿಡಿವ ಗತಿ ಒಂದಾದ ಭಕ್ತಿಯ ಶಿವಕೂಟ ಒಂದೆ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೫೪ ॥

೪೫೫

ಕಾಲಕರ್ಣಿಕೆಯನ್ನು ಮೀರಿಪ್ಪನೆಮ್ಮ ನಲ್ಲ
ತೋರಿ ಬಿಡನಾಕೆಯ ಸಂಗಂಗಳಾ.
ಕ್ರೀಗಳನು ನೀಕರಿಸಿ ನಿಃಕ್ರಿಯೆ ನೆಲೆಗೊಳಿಸಿ,
ಆರು ವರ್ಗದಲಾತನೈಕ್ಯನಾಗಿ,
ಸಂಬಂಧ ಸಮನಿಸಿಯು ಕರ್ಮವನು ಅತಿಗಳೆದು
ಸೊಮ್ಮಾತ್ರನಿಹತತಾ ಪರತತ್ವದಾ ನಿಃಕರ್ಮಿ
ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೆಂಬ
ಕರ್ಮದೊಳಗೆ ತಾ ಕರ್ಮಿಯಾದ. ॥ ೪೫೫ ॥

೪೫೬

ಕಾಲಜ್ಞಾನಿ, ಕರ್ಮವಿದೂರ, ನಿತ್ಯತೃಪ್ತನೆ,
ನಿಮ್ಮ ಭೇದಿಸುವರಾರು ಹೇಳಾ ಎಲೆ ಅಯ್ಯಾ.
ಎನ್ನ ಭವಕರ್ಮವು ಕಳೆಯಲಿಕೆ ಏಕರೂಪವಾಗಿ ಬಂದೆಯಯ್ಯಾ.
ನಿಮ್ಮ ಪದಂಗಳೆ ಲಿಂಗವಾಗಿ, ನಿಮ್ಮ ಕರಣಂಗಳೆ ಶ್ರೀಗುರುವಾಗಿ,
ನಿಮ್ಮುರುತರಮಪ್ಪ ಜಿಹ್ವೆಯ ಜಂಗಮವಾಗಿ ಬಂದೆಯಯ್ಯಾ.
ನೀನು ಶಿಷ್ಯ ಕಾರಣ ಪರಶಿವಮೂರ್ತಿಯಾದುದನು
ನಾನಿಂದು ಕಂಡೆ ಕಾಣಾ,
ಎನ್ನ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೫೬ ॥

೪೫೭

ಕಾಲವೇಕೆ ಬಾರದಯ್ಯಾ ಇಂದಿನ ಅವಸ್ಥೆಗೆ?
ಲಿಖಿತವೇಕೆ ತೊಡೆಯದಯ್ಯಾ ಇಂದಿನ ಅವಸ್ಥೆಗೆ?

ಇಂದಿನಿಸು ಬಾರದೇಕಯ್ಯಾ, ಎನ್ನ ದೇವ ಕಪಿಲಸಿದ್ಧಮಲ್ಲಿಕಾರ್ಜುನಾ,
ನಿಮಗೆ ಕೂರ್ತ ಅವಸ್ಥೆಯೊಳಗೆ?
ಲಿಖಿತ ತೊಡೆಯದು, ಪ್ರಾಣ ಬಿಡದು,
ಇಂತಿರಿಸದಿರಾ, ಎನ್ನ ದೇವರ ದೇವಾ. ॥ ೪೫೭ ॥

೪೫೮

ಕಾಲಿನಿಯೆಂಬ ಮಾನಿನಿ
ಕಾನನ ಕಂಬನಿಯೊಳಗಾಳುತ್ತ ಮುಳುಗುತ್ತೈದಾಳೆ,
ತನ್ನೊಳಗೆ ಆಳುತ್ತ ಮುಳುಗುತ್ತೈದಾಳೆ.
ಆರೂಢದಾ ಕೂಟದಲ್ಲಿ ಲೀಯವರಿತು
ಬತ್ತಿದಡೆ ಆನು ನೀನಪ್ಪೆ ಕಂಡಾ.
ಎನ್ನ ದೇವ ಕಪಿಲಸಿದ್ಧಮಲ್ಲಿಕಾರ್ಜುನ
ಕಾಲಿನಿಯ ಪರಿ ವಿಪರೀತ. ॥ ೪೫೮ ॥

೪೫೯

ಕಾಲಿಲ್ಲದವಂಗೆ ಕಾಲ ಕೊಟ್ಟೆ ಬಸವಾ;
ಕಣ್ಣಿಲ್ಲದವಂಗೆ ಕಣ್ಣ ಕೊಟ್ಟೆ ಬಸವಾ;
ಎನ್ನ ಕಣ್ಣು ಕಾಲಿಂಗೆ ನೀನೆಯಯ್ಯಾ ಬಸವಾ,
ಕಪಿಲಸಿದ್ಧಮಲ್ಲಿನಾಥಯ್ಯಾ. ॥ ೪೫೯ ॥

೪೬೦

ಕಾಳರಾಕ್ಷಸಿ[ಯಾಗಿ] ಕುತ್ತಿಗೆ ಪಿಡಿದು ಕೊಯ್ದು ತಿನ್ನುತ್ತಿರಲಿ.
ತಿನ್ನಲೊಲ್ಲದೆಚ್ಚ ಭರದಿಂದ ಕನ್ನಿಕೆಯಾಗಿ ತೆಗೆದಪ್ಪಿ[ಕೊಳ್ಳಲಿ]
ಕೊಂಡಡೆ, ಮನವಿಚ್ಛಂದವಾಗದೊಂದೆಯಂದವಲ್ಲಿಪ್ಪಂತಪ್ಪ
ನಿಮ್ಮದೊಂದು ಸಮತಾಗುಣ ಎನ್ನನೆಂದು ಬಂದು ಪೊದ್ದಿಪ್ಪುದು
ಹೇಳಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೬೦ ॥

೪೬೧

ಕುಂಕುಮದ ಗಿರಿ ಕೊನೆಯೇರಿ ಬೆಳೆಯೆ, ಆಯತವಿಡಿದು
ಸುಖವ ಕಂಡು

ಅನುಭವದವಳಿಗೆ [ಪಚ್ಚವರ್ಣ] ಸುಖವನೇಕೀಕರಿಸಿ ನೋಡಲು
ಆಯತವಾಯಿತ್ತಯ್ಯಾ ಕುಂಕುಮದ [ಹನ್ನೆರಡಸಳ] ಪೀಠ.
ಆ ಪೀಠದಲ್ಲಿ ವೀರಭೃತ್ಯನೆಂಬವ ನಿಂದು,
ಜಂಗಮವಿಡಿದು ನಡೆಯೆ,
ಅನಿಲಗುಣ ಕೆಟ್ಟು ನೆಲೆಗೊಂಡನಯ್ಯಾ ನಿಮ್ಮ ಶರಣ
ಚೆನ್ನಬಸವಣ್ಣನು,
ಕಪಿಲಸಿದ್ಧಮಲ್ಲಿನಾಥಯ್ಯಾ,
ಚೆನ್ನಬಸವಣ್ಣನಿಂದ ಬದುಕಿದೆನಯ್ಯಾ. ॥ ೪೬೧ ॥

೪೬೨

ಕುಂಡಲಿ ಭ್ರೂಮಧ್ಯವನೊಂದಿ ನಿಂದು, ಪೂರ್ವ ಹೃದಯವ ಪೂರೈಸಿ,
ಮಧ್ಯ ಹೃದಯವನವಗ್ರಹಿಸಿ, ಊರ್ಧ್ವ ಹೃದಯವನೊಡಗೂಡಿ,
ಪಶ್ಚಿಮಚಕ್ರದಲ್ಲಿ ಪ್ರಾಣನಿವಾಸಿಯಾಗಿಪ್ಪನಾ ಶರಣ.
ಓಂ ಮೂಲದ ಆ [ಪಶ್ಚಿಮ] ಶಿಖಾಚಕ್ರದಲ್ಲಿ ಮನೋಭಾವವಡಗಿ,
ಸಹಸ್ರದಳ ಕಮಲದ ಬಯಲೊಳಗೆ ಬಯಲಾಗಿ,
ನೀನು ತಾನಾದ ಚೆನ್ನಬಸವಣ್ಣನ ಶ್ರೀಪಾದಕ್ಕೆ
ಶರಣೆಂದು ಬದುಕಿದೆನು ಕಾಣಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೬೨ ॥

೪೬೩

ಕುಂಜರ ಬಂದು ಮೇಲುವಾಯ್ದು ಸೀಳ್ದಿಡುಕ್ಕುಗೆಯಾ,
ಮೇಣು ಎತ್ತಿಕೊಂಗೆಯಾ.
ಎತ್ತಿಕೊಂಡಡೆ, ಮನವಿಚ್ಛಂದವಾಗದೆ
ಒಂದೆಯಂದದಿ ಇಪ್ಪಂತಪ್ಪ ನಿಮ್ಮದೊಂದು ಸಮತಾಗುಣ
ಎನ್ನನೆಂದು ಪೊಂದಿಪ್ಪುದು ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೬೩ ॥

೪೬೪

ಕುಡಿ ನಿಮಿರ್ದ ದಾಡೆಗಳ
ಅಸುರಗಣದೃಷ್ಟಿಯ ಹರಹು ಮಂಡೆಯ
ಕೆಲಬಲದೊಂದು ದಾಡೆ ಆಕಾಶವನಳ್ಳಿರಿವುದು,
ಒಂದು ದಾಡೆ ಭೂಮಿಯನುತ್ತರಿಸುವುದು.
ಭೂಮಿ ಭೂತಕೋಟಿಯಾಗಿ ಸುತ್ತಿವಡೆ ಉದ್ದಂಡ.

ಭೂತ ತೊಂಡಾಣೆಯ ಮಾಣಿಸಯ್ಯಾ,
ಎಲೆ ಕಪಿಲಸಿದ್ಧಮಲ್ಲಿನಾಥಾ,
ನೀ ಸದ್ಧರ್ಮಿಯಾದಡೆ ಅಯ್ಯಾ. ॥ ೪೬೪ ॥

೪೬೫

ಕುರುಡು ಸೂಳೆಗೆ ಕುಂಟ ಬೊಜಗನು
ಕೋಲ ಹಿಡಿದು ನಡೆವಂತೆ ಸೂಳೆತನಗಳ ಮಾಡುಪಿರಿ;
ಮೊಲೆ ಮುಡಿಗಳ ತೋರುವಿರಯ್ಯಾ.
ಶಿವಭಕ್ತ ಮರುಳ ಪ್ರಪಂಚುರಹಿತನು
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೬೫ ॥

೪೬೬

ಕುಲಜ ಅಕ್ಕುಲಜರು ಜಾತ್ಯಜಾತರು ಬಂದು
ಕರಂಗಳ ಮುಗಿಯಲೊಡನೆ ಕರಗಳ ಮುಗಿವುತಿಪ್ಪಡೆ
ಮನವಿಚ್ಛಂದವಾಗದೊಂದೆಯಂದದಲ್ಲಿಪ್ಪಂತಪ್ಪ
ನಿಮ್ಮದೊಂದು ಸಮತಾಗುಣ ಎನ್ನನೆಂದು ಬಂದು ಪೊದ್ದಿಪ್ಪುದು ಹೇಳಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥೪೬೬॥

೪೬೭

ಕುಲಜನಾಗಿ ನಾನೇವೆನಯ್ಯಾ?
ಕುಲದ ಬಳಿಯ ದೇವನಲ್ಲ, ಮನದ ಬಳಿಯ ದೇವನೈಸೆ.
ಆವ ಯೋನಿಜನಾದಡೇನು?
ನೀನೊಲಿದವನೆ ಕುಲಜನಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೬೭ ॥

೪೬೮

ಕೂಟದ ತುರೀಯದಲಿ ಬೇಟ ಮತ್ತೆರಡಾಗಿ,
ಆಟವನು ಆಡಿದೆನು ಚಿತ್ರತರದ.
ಕೂಟವೂ ಬೇಟವೂ ಆಟ ಮತ್ತೊಂದಾಗಿ,
ನೋಟಂಗಳನಿಮಿಷದ ದೃಷ್ಟಿ ನಟ್ಟು,
ತಾನು ತಾನಾಗೀಗ ಸಾನಂದ ಸಂಬಂಧ.

ಆನಂದ ಮುಕ್ತ್ಯಂಗನೈಕ್ಯವಾಗಿ
ಲೋಕದೊಳಗಿದ್ದು ಲೌಕಿಕನು ತಾನಲ್ಲದೆ
ಏಕೈಕನಾದೆ ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ. ॥ ೪೬೮ ॥

೪೬೯

ಕೂಟದ ರಚನೆಯ ಸಂದಳಿದು ನೋಟ ನಿಮ್ಮಲ್ಲಿ ನಟ್ಟು
ಸಮಕಳೆ ಎಂದಪ್ಪುದಯ್ಯಾ, ಸಮರತಿ ಎಂದಪ್ಪುದಯ್ಯಾ.
ಹಂಗ ಹರಿದು, ದಂದುಗ ಉಡುಗಿ
ಎನ್ನನೆಂದಿಂಗೆ ಒಳಕೊಂಬೆಯೊ ಗುರುವೆ,
ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ. ॥ ೪೬೯ ॥

೪೭೦

ಕೂಟದ ಸುಖದಲ್ಲಿ ತನ್ನ ಮರೆಯದ
ಕೂಟವೇತಕಯ್ಯಾ?
ಪ್ರಾಣಲಿಂಗದ ಸಂಬಂಧದಲ್ಲಿ ಕರಣಂಗಳನರಿಯದ
ಪ್ರಾಣಲಿಂಗ ಸಂಬಂಧವೇತರದಯ್ಯಾ?
ಹಂಗುಳ್ಳನ್ನಬರ ಶರಣನಲ್ಲ.
ವ್ಯಾಕುಳದ ಹಂಗು ಹರಿದಡೆ ಆತ ಲಿಂಗೈಕ್ಯ
ಕಪಿಲಸಿದ್ಧಮಲ್ಲಿಕಾರ್ಜುನ ಸಹಗಮನಿ. ॥ ೪೭೦ ॥

೪೭೧

ಕೂಟದ ಸುಖದಲ್ಲಿ ನೋಟ ಕಂಬೆಳಗಾಗೆ
ಬೇಟ ಬೇರುಂಟೆ ಹೇಳಾ? ಅವ್ವಾ.
ನೋಡಿದ ದೃಷ್ಟಿ ಎವೆ ಕುಂದದಡೆ
ಮೋಹದ ಪರಿಯೆಂತುಟು ಹೇಳಾ?
ನೋಟ ಬೇಟ ಕೂಟ
ಸಮಸುಖ ಸಮರತಿಯಾದರೆ ಕಪಿಲಸಿದ್ಧಮಲ್ಲಿನಾಥಯ್ಯ
ಬೇರಿಲ್ಲವವ್ವಾ. ॥ ೪೭೧ ॥

೪೭೨

ಕೂಟದ ಸುಖದಲ್ಲಿ ನೋಟ ಕಂಬೆಳಗಾಗೆ,
ಬೇಟದಿಂ ದೆಸೆದೆಸೆವರಿದಳವ್ವೆ.

ಅವನಿಪ್ಪ ಗೂಢವನು ನೀನಿರ್ದಾಡಿಸುತ್ತಲವೊ
ನಿನ್ನನೆನ್ನಂಗದಲಿ ಕೊಲ್ಲದಿರ್ದಡೆ,
ಕಪಿಲಸಿದ್ಧಮಲ್ಲಿಕಾರ್ಜುನನಹೆ. ॥ ೪೭೨ ॥

೪೭೩

ಕೆರೆಯ ಕಟ್ಟಿಸುವವನೆ ಕರ್ಮಿ?
ಅಗ್ರವನೆತ್ತಿಸುವವನೆ ಪಾತಕಿ?
ಶಿವಾಲಯವ ಕಟ್ಟಿಸುವವನೆ ದ್ರೋಹಿ?
ಗುರುಹಿರಿಯರ ಕಂಡರೆ ನಮಿಸಿದಾತನೆ ಚಾಂಡಾಲ
ಸತ್ಕ್ರೀಯಿಂದ ಶಿವಾರ್ಚನೆಯ ಮಾಡುವಾತನೆ ಅನಾಚಾರಿ
ಇಂತೀ ಐವರನೊಳಗೊಂಬನೆ?
ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೭೩ ॥

೪೭೪

ಕೇಳವ್ವಾ ಕೆಳದಿ, ನಾನಿದ್ದ ಪರಿಗಳ ಹೇಳುವೆ ನಿನಗೆ;
ಶಿಲೆಯ ಮೇಲೆ ಸ್ವೈರಗಾಗಿ ತಲೆಯ ಬಿಟ್ಟಿದ್ದ ಪರಿಯ;
ವಾಯುಭಕ್ಷಕಳಾಗಿದ್ದ ಪರಿಗಳ ನೋಡವ್ವಾ.
ಆನಿದ್ದ ಪರಿಗಳ ಕಂಡು ಕರುಣಿಸಿ ಗಂಡನಾದನು
ಎನ್ನ ಕಪಿಲಸಿದ್ಧಮಲ್ಲಿನಾಥದೇವರ ದೇವ ನೋಡವ್ವಾ. ॥ ೪೭೪ ॥

೪೭೫

ಕೇಳವ್ವಾ, ಕೆಳದಿ, ಹೋಗೆಲಗವ್ವಾ, ನೋಡವ್ವಾ ಕೆಳದಿ;
ಅವನಿಪ್ಪ ಠಾವಿನ ನೆಲೆಯೆನಗೆ ತೋರೆಲಗವ್ವಾ;
ಅವನಿಬ್ಬಟ್ಟೆಗಾರನು, ಇಬ್ಬೀಡಲಿಪ್ಪನು;
ಕಪಿಲಸಿದ್ಧಮಲ್ಲಿಕಾರ್ಜುನಯ್ಯನ ಕಂಡೆನು, ಬಾರಾ. ॥ ೪೭೫ ॥

೪೭೬

ಕೇಳವ್ವಾ , ಕೇಳವ್ವಾ ಕೆಳದಿ ಹೇಳುವೆ ನಿನಗೆ:
ಆಹಾ! ಕಂಗಳಲ್ಲಿ ಕಾಬೆ, ಮತ್ತೆ ಕಾಣೆ!
ಮನದಲ್ಲಿ ಹಿಡಿವೆ, ಹಿಡಿದು ಮತ್ತೆ ಕಾಣೆನವ್ವಾ!
ಮಿಂಚಿನ ರವೆರವೆಯಂತೆ ತೋರುವನಡಗುವ,
ನಮ್ಮ ಕಪಿಲಸಿದ್ಧಮಲ್ಲಿನಾಥದೇವನು! ॥ ೪೭೬ ॥

೪೭೭

ಕೇಳು ಕೇಳಾ, ಎಲೆ ಅಯ್ಯಾ,
ಬಸವಣ್ಣನು ಅನಿಮಿಷಂಗೆ ಲಿಂಗವ ಕೊಟ್ಟ ಕಾರಣ ಮರ್ತ್ಯಕ್ಕೆ
ಬಂದನೆಂಬರು.
ಸಟೆ ಸಟೆ ! ಆ ನುಡಿಯ ಕೇಳಲಾಗದು, ಅದೇನು ಕಾರಣವೆಂದಡೆ
ಜೈನ ಚಾರ್ವಾಕ ಕಾಳಾಮುಖ ಎನಿಸುವ ಷಡ್ದರ್ಶನಾದಿಗಳು ಹೆಚ್ಚಿ,
ವಿಭೂತಿ ರುದ್ರಾಕ್ಷಿ ಪಂಚಾಕ್ಷರವನರಿಯದೆ
ನರಕಕ್ಕೆ ಭಾಜನವಾಗಿ ಪೋಪರೆಂದು,
ದೇವರು ನಂದಿಕೇಶ್ವರನ ಮುಖವ ನೋಡಲು,
ಆ ಪ್ರಶ್ನೆಯಿಂದ ಬಂದನಯ್ಯಾ ಬಸವಣ್ಣ ಪರಹಿತಾರ್ಥನಾಗಿ.
ದೇವರು ದೇವಿಯರಿಗೆ ಪ್ರಣವಾರ್ಥವ ಬೋಧಿಸುವಾಗ
ದೇವಿಯರ ಮುಡಿಯಲ್ಲಿ ಹೊನ್ನ ತುಂಬಿಯಾಗಿ
ಷಣ್ಮುಖ ಕೇಳಿದ ಪ್ರಶ್ನೆಯಿಂದ ಬಂದನೆಂಬರಯ್ಯಾ, ಚೆನ್ನಬಸವಣ್ಣನು.
ಸಟೆ ಸಟೆ ! ಆ ನುಡಿಯ ಕೇಳಲಾಗದು . ಅದೇನು ಕಾರಣವೆಂದಡೆ:
ಷಡ್ವಿಧಸ್ಥಲಕ್ಕೆ ಸ್ಥಾಪನಾಚಾರ್ಯನಾಗಿ
ಸಕಲ ಪ್ರಮಥರ್ಗೆ ವೀರಶೈವವ ಪ್ರತಿಷ್ಠೆಯ ಮಾಡಲೋಸ್ಕರ
ಬಂದನಯ್ಯಾ ಚೆನ್ನಬಸವಣ್ಣನು.
ದೇವರ ಸಭೆಯಲ್ಲಿ ನಿರಂಜನನೆಂಬ ಗಣೇಶ್ವರನು
ಮಾಯಾಕೋಳಾಹಳನೆಂದು ಹೊಗಳಿಸಿಕೊಂಡು ಬರಲಾಗಿ
ಆ ಸಮಯದಲ್ಲಿ ದೇವಿಯರು ದೇವರ
ಮಾಯಾಕೋಳಾಹಳನಾದ ಪರಿಯಾವುದೆಂದು ಬೆಸಗೊಳಲು,
ಆ ಪ್ರಶ್ನೆಯಿಂದ ಪ್ರಭುದೇವರು ಮರ್ತ್ಯಕ್ಕೆ ಬಂದರೆಂಬರಯ್ಯಾ.
ಸಟೆ ಸಟೆ ! ಆ ನುಡಿಯ ಕೇಳಲಾಗದು, ಅದೇನು ಕಾರಣವೆಂದಡೆ:
ಸುಜ್ಞಾನಿ ನಿರಹಂಕಾರರ ಭಕ್ತಿಗೋಸ್ಕರ ಪ್ರತ್ಯಕ್ಷವಾಗಿ
ಬಸವಾದಿ ಪ್ರಮಥರ್ಗೆ ಬೋಧಿಸಿ,
ತನ್ನ ನಿಜಪದವ ತೋರಬಂದರಯ್ಯಾ ಪ್ರಭುದೇವರು.
ದಕ್ಷಸಂಹಾರದಿಂದ ಬರುವಾಗ ಗುಪ್ತಗಣೇಶ್ವರನ ನಿರಿ ಸೋಂಕಲು,
ಆ ಪ್ರಶ್ನೆಯಿಂದ ಬಂದನೆಂಬರಯ್ಯಾ ಮಡಿವಾಳನು.
ಸಟೆ ಸಟೆ ! ಆ ನುಡಿಯ ಕೇಳಲಾಗದು, ಅದೇನು
ಕಾರಣವೆಂದಡೆ:
ಬಿಜ್ಜಳ ಪರವಾದಿಗಳ ಸಂಹರಿಸಲೋಸ್ಕರ
ಬಸವಣ್ಣನ ನಿಮಿತ್ತವಾಗಿ ಬಂದನಯ್ಯಾ ಮಡಿವಾಳ ಮಾಚಯ್ಯಗಳು.

ಇಂತಿವರು ಮುಖ್ಯವಾದ ಏಳುನೂರು ಎಪ್ಪತ್ತು ಅಮರಗಣಂಗಳಿಗೆ
ವಾಸನಾಧರ್ಮವೆಂದಡೆ ಅಘೋರ ನರಕ ತಪ್ಪದಯ್ಯಾ.
ಇವರು ಮುಖ್ಯವಾದ ಪ್ರಮಥಗಣಂಗಳಿಗೆ ಶಾಪವೆಂದು ಕಲ್ಪಿಸಿದಡೆ,
ನಾಯಕನರಕ ತಪ್ಪದು, ಎಲೆ ಶಿವನೆ
ಕಪಿಲಸಿದ್ಧಮಲ್ಲಿಕಾರ್ಜುನಾ, ನಿಮ್ಮಾಣೆ. ॥೪೭೭॥

೪೭೮

ಕೇಳು ಕೇಳೆನ್ನ ಭಾಷೆ, ಅರಿದು ಕಂಡಾ ಅವ್ವಾ,
ನಲ್ಲನೊಮ್ಮೆ ತೋರಿದಡೆ ಎನ್ನ ಸರಿಹರಿ ನೋಡಿದೆ ಅವ್ವಾ.
ಕಪಿಲಸಿದ್ಧಮಲ್ಲಿನಾಥ ರೂಪಂಬಿಟ್ಟು ಅಗಮ್ಯನಾದಡೆ
ಅಗಮ್ಯ ರೂಪಂಬಿಡಿಸಿ ಹಿಡಿವೆನೆ ಅವ್ವಾ. ॥ ೪೭೮ ॥

೪೭೯

ಕೋಗಿಲ ಶಬ್ದ ಕಿವಿಗೆ ಕೂಗಿ ಹೋಯಿತ್ತು
ಕಂಡ ಕಂಡ ಪುರುಷನನಪ್ಪಲು
ಅಪ್ಪಿನ ಸುಖ ಸಂತಾನವಾಯಿತ್ತೆನಗೆ.
ಅಪ್ಪಿನ ಸುಖದ ಸಂತಾನದ ಬಗೆಯ ಕೇಳಲು
ಕರಣಿಕ ಹೇಳಿದನಯ್ಯಾ ಮೂವತ್ತಾರು ಕುಮಾರರನು.
ಆ ಕುಮಾರನ ಕೂಟದಲ್ಲಿರಲು, ಹೆತ್ತ ಮಕ್ಕಳ ಕೂಟವೆಂದಡೆ,
ಹುಟ್ಟಿದರಯ್ಯಾ, ಇನ್ನೂರ ಹದಿನಾರು ರಾಜಕುಮಾರರು.
ಆ ಕುಮಾರರ ಚೆಲುವಿಕೆಯ ಕಂಡು,
ಆ ಚೆಲುವಿಕೆಯ ಮಕ್ಕಳ ನೆರೆಯಲು
ಪತಿವ್ರತೆಯೆನಿಸಿಕೊಂಡು, ಒಬ್ಬನೆ ಪುರುಷನೆಂದಳಯ್ಯಾ
ಕಪಿಲಸಿದ್ಧಮಲ್ಲಿನಾಥಯ್ಯಾ, ನಿಮ್ಮ ಹೆಂಡತಿ. ॥ ೪೭೯ ॥

೪೮೦

ಕ್ರೀಯಲ್ಲಿ ಮಗ್ನವಾದ ಬಳಿಕ ಐಕ್ಯದ ವಿಚಾರ ಬೇಕಿಲ್ಲ ;
ಗುರುವಿನ ಗದ್ದುಗೆ ಬೇಕಿಲ್ಲ ;
ಗಣಸಮ್ಮೇಳನದ ಪೂಜೆ ಮೊದಲೆ ಬೇಕಿಲ್ಲ ;
ಕಪಿಲಸಿದ್ಧಮಲ್ಲಿಕಾರ್ಜುನಂಗೆ ನಿನಗೆ ಭೇದವಿಲ್ಲೆಂಬುವುದು
ಈಗಳೆ ಬೇಕಿಲ್ಲ, ಕೇಳಾ ಪ್ರಭುವೆ. ॥ ೪೮೦ ॥

೪೮೧

ಕ್ಲುಪ್ತವ ಮಾಡಿ ತನಗೆ ಬೇಕೆನ್ನ ಪ್ರಸಾದಿ ಬಸವಣ್ಣ.
ಬಂದುಪನತಿಗಳೆದು 'ಅಲ್ಲ ಒಲ್ಲೆ' ಎನ್ನ ಪ್ರಸಾದಿ ಬಸವಣ್ಣ.
ತಾನೆಂಬ ರೂಪ ಅಯ್ಯನೆಂಬ ರೂಪಿನಲ್ಲಿ ಲೋಪಮಾಡಿದ
ಪ್ರಸನ್ನ ಪ್ರಸಾದಿ ಕಾಣಾ, ಬಸವಣ್ಣ,
ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ. ॥ ೪೮೧ ॥

೪೮೨

ಖರಕರ ಕೋಟಿ ಪ್ರಭೆ
ಪ್ರಭೆಯಂ ಮೀರಿಪ್ಪ ತೆರಹುಗೆಟ್ಟ ಸೀಮೆಯಲ್ಲಿ
ಬಿಂದು ಭೇದವಾದ
ಅಯ್ಯದಂದವನಾರು ಬಲ್ಲರು?
ಆನಂದ ಸಚ್ಚಿದಾನಂದ ಸ್ಥಾನದಲ್ಲಿ
ಶೂನ್ಯ ಕಾನನದೊಳಪ್ಪಿರವ್ವಾ
ಅರಿವ ನಿನ್ನುವನು
ಎಲೆ ಕುರುಹಿಲ್ಲದ ಸೀಮನೆ,
ಕಪಿಲಸಿದ್ಧಮಲ್ಲಿಕಾರ್ಜುನನ
ನೆನಹಿನ ಬ್ರಹ್ಮಾಂಡವಡಗುವವೆ ಅಯ್ಯಾ. ॥ ೪೮೨ ॥

೪೮೩

ಗಂಗೆಯೆ ಘನ ಮುಟ್ಟಿದ ಪ್ರಾಣಿಗಳೆಲ್ಲಾ ದೇವತೆಗಳೆಂದಡೆ,
ಗಂಗೆಯ ಸಂಚಾರ ಸಾವಿರಾರು ಗಾವುದ.
ಅದರಲ್ಲಿಯ ಪ್ರಾಣಿಗಳು ಅನಂತಾನಂತ.
ಇಷ್ಟು ಜೀವಿಗಳೆಲ್ಲಾ ದೇವರಾದಡೆ,
ಸ್ವರ್ಗದಲ್ಲಿ ನಿಯಮಿತ ದೇವತೆಗಳೆಂಬುದು ಅಪ್ರಸಿದ್ಧ ನೋಡಾ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೮೩ ॥

೪೮೪

ಗಂಗೆಯ ಮುಳುಗಿ ಬಂದವರೆಲ್ಲಾ ಪಾಪವ ಮಾಡಿ ಸತ್ತಡೆ,
ಅವರಿಗೆ ಪುಣ್ಯದ ಪದವಿಯುಂಟಾದಡೆ, ಗಂಗೆ ಘನವೆಂಬೆ.
ಮುಳುಗಿ ಪಾಪವ ಮಾಡದೆ ಸತ್ತು ಹೋದಡೆ,

ಪುಣ್ಯದ ಪದವಿಯವರಿಗುಂಟಾದಡೆ ಘನವೆಂಬೆ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೮೪ ॥

೪೮೫

ಗಂಡನ ಕಂಡ ಹೆಂಡತಿ ಭಂಡಾದಳು;
ನಕ್ಕರು ನಾಣುಗೆಟ್ಟರೈವತ್ತು ಕೋಟಿ ಮಂದಿ.
ಉಂಡವರುಪವಾಸಿಗಳಾದರು
ಕಪಿಲಸಿದ್ಧಮಲ್ಲಿನಾಥಯ್ಯಾ. ॥ ೪೮೫ ॥

೪೮೬

ಗಂಡ ಬಾರನು ಎನ್ನ ತವರೂರಿಗೆ ಹೋಗುವೆನೆನಲು,
ನೋಡೆ, ನೋಡೆಲಗವ್ವಾ
ಬೇಟೆಯನಾಡುವ ನಾಯತಲೆಯ ಕೊಯ್ದಿಟ್ಟು,
ತಾ ಬೇರೆ ಬೇಟಕಾರನಾದ.
ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನ ನೆಲೆಯಲ್ಲಿ ನಿಲವ ಕೊಂಡನು;
ಹುಚ್ಚನ ಸಂಗ ನಿಶ್ಚಯವಾಯಿತು. ॥ ೪೮೬ ॥

೪೮೭

ಗಡಣ ಸಂಗಮದಲ್ಲಿ ಮೃಡನನರ್ಚಿಸ ಬಂದೆ
ಮೃಡ ಸಿಲುಕುವನುವಲ್ಲ ನಿನ್ನ ಕರದ.
ಕರ ಕರದ ಸಂಬಂಧ ಸಿಲುಕುವನ
ಸಾಯುಜ್ಯ ಕರದಿಂದ ಮೇಲೆ ತಾ
ಮಂಗಳಾಂಗ ಬೆಳಗುವಂ ದೀಪ್ತಿಯಲಿ.
ನೆನಹು ಅಕ್ಷರದ್ವಯದ ಅನುಮಿಷದ ಸಿದ್ಧ ಆದ್ಯಂತ
ಶೂನ್ಯ ಕಪಿಲಸಿದ್ಧಮಲ್ಲಿಕಾರ್ಜುನನ
ಭೇದ ಭೇದಿಗೆ ಅಲ್ಲದೆ ವೇದ್ಯವಲ್ಲ. ॥ ೪೮೭ ॥

೪೮೮

ಗರ್ಭದಾದಿ ಅಂತ್ಯದಲಿ ಒಬ್ಬನೆಯಿದ್ದ
ಅಯ್ಯಾ , ಸರ್ಬಗತ ನೀನೆ ಕಂಡಾ ಅಯ್ಯಾ.

ಒಂದೊಂದು ಪರಿಯಲ್ಲಿ
ಆಡುವಾನಂದ ಗುಣವ ನೋಡಯ್ಯಾ.
ಶೂನ್ಯ ಶೂನ್ಯ ಕಾಯನಾ
ಕರಸ್ಥಲಕೆ ದೇವನಾದೆ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೮೮ ॥

೪೮೯

ಗಮನವರಿತು ಸುಳಿಯಬಲ್ಲಡೆ
ಆಪ್ಯಾಯನವರಿತು ಉಣಬಲ್ಲಡೆ
ಇಚ್ಛೆಯರಿತು ಬೇಡಬಲ್ಲಡೆ
ಈ ತ್ರಿವಿಧ ಗುಣದ ಅನುವ ಬಲ್ಲವರು
ದೇವರಿಗೆ ದೇವರಾಗಿಪ್ಪರು ಕಾಣಾ,
ಕಪಿಲಸಿದ್ಧಮಲ್ಲಿಕಾರ್ಜುನ ದೇವರ ದೇವಾ. ॥ ೪೮೯ ॥

೪೯೦

ಗಾರಪ್ಪ ವರ್ಗವನು ತೋರಬಲ್ಲಡೆ ಯೋಗಿ
ತೋರಿ ತೋರಿಯೆ ಮೀರಿ ಸಾದಾಖ್ಯದ
ದೇಹ ಪ್ರಪಂಚುವಯೆಯ್ದಿಯೆಯ್ದದ ಆತ
ಆನಂದ ಶಿವಯೋಗಿ ಕಪಿಲಸಿದ್ಧ ಮಲ್ಲಿಕಾರ್ಜುನಾ. ॥ ೪೯೦ ॥

೪೯೧

ಗಿರಗಹ್ವರದೊಳಗರಸಿ ತೊಳಲಿ ಬಳಲಿದೆನವ್ವಾ.
ನೋಡಿ ನೋಡಿ ಕಣ್ಣು ನಟ್ಟಾಲಿ ಬಿದ್ದವವ್ವಾ.
ನೀನು ಗುರುವಾಗಿ ಬಂದು ಎನ್ನ ಭವವ ಹರಿದೆ.
ನೀನು ಭಕ್ತ ಕಾರಣ ಪರಶಿವಮೂರ್ತಿಯೆಂದರಿದೆ ಕಾಣಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೯೧ ॥

೪೯೨

ಗುರು ಆಜ್ಞೆಯ ಮೀರಿದೆನಾದಡೆ
ಎನ್ನ ಸುಕೃತವೆಲ್ಲ ಕಿಲ್ಬಿಷವಾಗಲಿ ದೇವಾ.

ಗುರುಸಂಜ್ಞೆಯ ಅರಿಯೆನಾದಡೆ,
ಎನ್ನ ಬ್ರಹ್ಮಸಂಜ್ಞೆ ಬತ್ತಿಹೋಗಲಿ ದೇವಾ.
ಗುರುದ್ವಾರವ ಕಾಯದಿದ್ದೆನಾದಡೆ
ಎನ್ನ ಪಶ್ಚಿಮದ್ವಾರ ಸಿಗದೆ ಹೋಗಲಿ ದೇವಾ.
ಗುರುಪುತ್ರರ ಗುರುವೆನ್ನದಿದ್ದನಾದಡೆ, ಯಮಗುಂಡು ನನಗಿರಲಿ,
ಕಪಿಲಸಿದ್ಧಮಲ್ಲಿಕಾರ್ಜುನದೇವಾ. ॥ ೪೯೨ ॥

೪೯೩

ಗುರುಗದ್ದಿಗೆಯ ಏರಿವಲ್ಲಿ ಭೇದವಿಲ್ಲೆಂಬರಿವು ಅಚ್ಚೊತ್ತಿದಡೆ,
ಹೇಳುವೆ ಕೇಳಯ್ಯಾ;
ಗುರುಗದ್ದಿಗೆಯಲ್ಲಿ ಹರಿವ ಮಶಕ ತಿಗುಣೆಗಳಿಗೆ ಅಭೇದವೊ
ಭೇದವೊ?
ಅಲ್ಲಿ ಭೇದಾಭೇದವೆಂಬ ಜ್ಞಾನವಿಲ್ಲ.
ಇದು ಕಪಿಲಸಿದ್ಧಮಲ್ಲಿಕಾರ್ಜುನ ಶರಣನ ಮನಕ್ಕೆ ಸೊಗಸದು,
ಕೇಳಾಪ್ರಭುವೆ. ॥ ೪೯೩ ॥

೪೯೪

ಗುರು ತೋರಿದನು ಲಿಂಗ- ಜಂಗಮವ.
ಪಾದೋದಕ-ಪ್ರಸಾದವ ಕೊಳಹೇಳಿದನಲ್ಲದೆ
ಇವ ತೊರೆಯ ಹೇಳಿದನೆ?
ಅಹಮ್ಮೆಂದು ಪ್ರಸಾದದ್ರೋಹಿಗಳಾಗಿ,
ನಾನೆ ಎಂದು ಲಿಂಗದ್ರೋಹಿಗಳಾಗಿ,
ವಿಭೂತಿ- ರುದ್ರಾಕ್ಷಿ ಸಾಕ್ಷಾತ್ ಶಿವನೆಂದರಿಯದೆ,
ಅವರಾಚರಣೆಯ ನೋಡಿ ನಿಂದಿಸಿ
ಜಂಗಮದ್ರೋಹಿಗಳಾಗ ಹೇಳಿದನೆ?
ಜಂಗಮದಲ್ಲಿ ಜಾತಿಯ, ಪ್ರಸಾದದಲ್ಲಿ ರುಚಿಯ,
ಲಿಂಗದಲ್ಲಿ ಮೃದುವನರಸುವ, ಸಮಯದಲ್ಲಿ ವಿಶ್ವಾಸವಿಲ್ಲದ
ಮಿಟ್ಟೆಯ ಭಂಡರ ತೋರದಿರಯ್ಯಾ ಎನಗೆ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೯೪ ॥

೪೯೫

ಗುರುಪಾದುಕೆಯ ಮೆಟ್ಟಿ
ಅಮರಗುಂಡದ ಮಲ್ಲಿಕಾರ್ಜುನಭೃತ್ಯ ಭಂಗಬಟ್ಟು
ಗುರುಕರುಣವ ಪಡೆಯಲಿಲ್ಲವೆ?
ಗುರುಪಾದುಕೆಯ ಮೆಟ್ಟಿ
ಅಮರಶೇಖರನೆಂಬರಸು ಪಾದವ ಕಡಿಸಲಿಲ್ಲವೆ?
ಗುರುಪಾದುಕೆಯ ಮೆಟ್ಟಿ
ರಾಜೇಂದ್ರಚೋಳ ತನ್ನ ರಾಣಿಯ ಸಂಗ ಬಿಡಲಿಲ್ಲವೆ?
ಗುರುಪಾದುಕೆಯ ಮೆಟ್ಟಿ
ಸಿಂಹಚೋಳ ಪಂಡಿತರ ಪಾದ ತುಂಡಿಸಲಿಲ್ಲವೆ?
ಇದು ಕಾರಣ,
ಗುರುಪಾದುಕೆ ಶ್ರೀಗುರು ಕಪಿಲಸಿದ್ಧಮಲ್ಲಿಕಾರ್ಜುನನ
ಪೂಜೆಯ ಚಮ್ಮಾವುಗೆಂದು ನಂಬಿದೆ.
ಹುಸಿಯಾದಡೆ, ಪ್ರಮಥಸಂಕುಲದಲ್ಲಿ ಗುರು ಕೊಟ್ಟ
ಗುರುಮೂರ್ತಿ ಇಲ್ಲದಂತೆ ಮಾಡಾ ಪ್ರಭುವೆ. ॥ ೪೯೫ ॥

೪೯೬

ಗುರುಪಾದೋದಕದಿಂದ ಲಿಂಗಮಜ್ಜನ ಮಾಡಬಹುದಲ್ಲದೆ,
ಬರಿಯುದಕದಿಂದೆರೆಯಬಹುದೆ ಕರಸ್ಥಲದ ತೇಜವ?
ಮೀರಿದ ಮೀರಿದ ಮಾರ್ಗ ಹೇಳಿದರಯ್ಯಾ, ಎನ್ನ ಗುರುಗಳು.
ಅನ್ಯಜಲವನೆರೆದೆನಾದಡೆ, ತಲೆ-ತಲೆದಂಡ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೯೬ ॥

೪೯೭

ಗುರುಪಾದೋದಕದಿಂದ ಲಿಂಗಮಜ್ಜನ
ಮಾಡುವೆನೆಂಬ ಭಾಷೆ ಎನ್ನದಯ್ಯಾ.
ಗುರುಪಾದೋದಕದಿಂದ ಸ್ವಯಂಪಾಕರಚನೆ
ಎಂಬ ಭಾಷೆ ಎನ್ನದಯ್ಯಾ.
ಗುರುಪಾದೋದಕದಿಂದ ಶಿರಃಸ್ನಾನ, ಅಂಗಸ್ನಾನ, ಮುಖಸ್ನಾನ
ಎಂಬ ಭಾಷೆ ಎನ್ನದಯ್ಯಾ.
ಗುರುಪಾದೋದಕದಿಂದ ಸರ್ವಶುದ್ಧ

ಎಂಬ ಭಾಷೆ ಎನ್ನದಯ್ಯಾ.
ಇದು ಕಾರಣ, ಗುರುವೆ ಘನವೆಂದು,
ಗುರುಪಾದೋದಕವೆ ಎನ್ನ ಮೋಕ್ಷದ ಬೀಡೆಂದು ಡಂಗುರ ಹೊಯ್ವೆ.
ಇದು ಕಿಂಚಿತ್‌ಹುಸಿಯಾದಡೆ ಕಪಿಲಸಿದ್ಧಮಲ್ಲಿಕಾರ್ಜುನ
ನಾಯಕನರಕದಲ್ಲಿಕ್ಕದೆ ಮಾಣ್ಬನೆ? ಮಡಿವಾಳ ತಂದೆ. ॥ ೪೯೭ ॥

೪೯೮

ಗುರುಪಾದೋದಕದಿಂದ ಸ್ಥೂಲ ದೇಹಶುದ್ಧಿ ;
ಕ್ರಿಯಾಪಾದೋದಕದಿಂದ ಸೂಕ್ಷ್ಮ ದೇಹಶುದ್ಧಿ ;
ಜ್ಞಾನಪಾದೋದಕದಿಂದ ಕಾರಣ ದೇಹಶುದ್ಧಿ ;
ಗುರುಪಾದೋದಕದಲ್ಲಿ ಇಷ್ಟಲಿಂಗ ಸಂಬಂಧ;
ಕ್ರಿಯಾಪಾದೋದಕಲ್ಲಿ ಪ್ರಾಣಲಿಂಗ ಸಂಬಂಧ;
ಜ್ಞಾನಪಾದೋದಕದಲ್ಲಿ ಭಾವಲಿಂಗ ಸಂಬಂಧ.
ಅದು ಕಾರಣ, ಪಾದೋದಕವೆ ಪ್ರತ್ಯಕ್ಷ ಪರಬ್ರಹ್ಮ ನೋಡಾ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೯೮ ॥

೪೯೯

ಗುರುಪಾದೋದಕವಿಲ್ಲದಲ್ಲಿ, ಜಂಗಮಪಾದೋದಕವಿಲ್ಲದಲ್ಲಿ,
ಪ್ರಣವೋದಕದಿಂದಂಗಸ್ನಾನ ಮಾಳ್ಪುದಯ್ಯಾ.
ಪ್ರಣವೋದಕದಿಂದ ಲಿಂಗಸ್ನಾನ ಲಿಂಗಾಭಿಷೇಕ ಮಾಳ್ಪುದಯ್ಯಾ.
ಗುರುವಿನಲ್ಲಿ ಗುರುಪಾದೋದಕವುಂಟು,
ಲಿಂಗಪಾದೋದಕವುಂಟು, ಜಂಗಮಪಾದೋದಕವುಂಟು.
ಲಿಂಗದಲ್ಲಿ ಗುರುಪಾದೋದಕವಿಲ್ಲ, ಜಂಗಮ ಪಾದೋದಕವಿಲ್ಲದ ನಿಮಿತ್ತ
ಜಂಗಮವ ಬರಿಸಿಕೊಂಡು ಕ್ರೀಯ ಮಾಳ್ಪ ಭಕ್ತನ ಪಾದಕ್ಕೆ
ನಮೋ ನಮೋ ಎಂಬೆ, ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೯೯ ॥

೫೦೦

ಗುರುಪಾದೋದಕವೆಂದು, ಕ್ರಿಯಾಪಾದೋದಕವೆಂದು.
ಜ್ಞಾನಪಾದೋದಕವೆಂದು ಮೂರು ತೆರನುಂಟು.
ಗುರುಪಾದೋದಕವೆಂದಡೆ,

ಅಯ್ಯಗಳ ಪಾದಗಳ ಎರಡಂಗುಲಿಗಳಲ್ಲಿ,
ಪಾದಗಳೆರಡರ ಮೂಲಾಂಗುಲಿ ಹಿಮ್ಮಡಗಳ ಅಗ್ರದಲ್ಲಿ
ತನ್ನ ಪಂಚಾಂಗುಲಿಯಿಂದ ಉದಕವನದ್ದಿ,
ಮಂತ್ರವಳಹುವುದೆ ಗುರುಪಾದೋದಕ.
ಕ್ರಿಯಾಪಾದೋದಕವೆಂದಡೆ,
ಪಾದದ್ವಯದ ಅಂಗುಲಿಗಳಲ್ಲಿ ಶಿವನ ಶಕ್ತಿಯ ಪ್ರಣವವ ಬರೆದು,
ಭಸ್ಮವ ಧರಿಸಿ, ನೇತ್ರದಳಗಳ ಅರ್ಪಣಂಗೈದು,
ತನ್ನ ತರ್ಜನಿಯ, ಮೂರು ವೇಳೆ ಪ್ರಣವಸಹಿತ
ಪಂಚಾಕ್ಷರೀಮಂತ್ರದಿಂ
ಗುರುಪಾದೋದಕವನೆದ್ದಿ ಎಳೆಯುವುದೆ ಕ್ರಿಯಾಪಾದೋದಕ.
ಜ್ಞಾನಪಾದೋದಕವೆಂದಡೆ,
ದಶಾಂಗುಲಿಗಳಲ್ಲಿ ದಶಪ್ರಣವ ಮಂತ್ರದಿಂದ ಭಸ್ಮದಿಂ ಲಿಖಿಸಿ,
ಷೋಡಶೋಪಚಾರದಿಂ ಪೂಜೆಯ ಮಾಡಿ,
ಎರಡಂಗುಲಿ ಮಧ್ಯದಲ್ಲಿ ಮೂರು ಸ್ಥಾನಂಗಳಲ್ಲಿ,
ಪಂಚಾಕ್ಷರೀಮಂತ್ರದಿಂದ ಎರೆಯುವುದೆ ಜ್ಞಾನಪಾದೋದಕ.
ಇಂತಪ್ಪ ಪಾದೋದಕತ್ರಯಂಗಳ ಸೇವಿಸಿ ಸುಖಿಸಬಲ್ಲಡೆ
ಆತನೆ ಪರಾತ್ಪರವಸ್ತು, ಕಪಿಲಸಿದ್ಧಮಲ್ಲಿಕಾರ್ಜುನದೇವಾ.
॥ ೫೦೦ ॥

೫೦೧

ಗುರುಪಾದೋದಕ ಸಕಲಕ್ರಿಯೆಗಳಿಗೆ ಬರುವುದು.
ಕ್ರಿಯಾಪಾದೋದಕ ಭಸ್ಮಶುದ್ಧತೆಗೆ ಬರುವುದು.
ಜ್ಞಾನಪಾದೋದಕ ಅರ್ಪಣಂಗೈವುದಕ್ಕೆ ಬರುವುದು ನೋಡಾ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೫೦೧ ॥

೫೦೨

ಗುರುವಾಕ್ಯದಿಂದ ನಾರದನಿಗನಂತ ಜನ್ಮ ಪ್ರಳಯವಾಯಿತ್ತು.
ಗುರುವಾಕ್ಯದಿಂದ ಚಿದ್ಘನಶಿವಾಚಾರ್ಯರಿಗೆ ಬೋಧರತ್ನ ದೊರಕಿತ್ತು.
ಗುರುವಾಕ್ಯದಿಂದ ಮಳೆಯ ಮಲ್ಲೇಶಂಗೆ
ಪಾತಾಳ ಪದಾರ್ಥ ಸಿದ್ಧಿಯಾಯಿತ್ತು.

ಗುರುವಾಕ್ಯದಿಂದ ವೀರಸೇನಂಗೆ ರಣಭೂಮಿ ಕಂಪಿಸಿತ್ತು.
ಗುರುವಾಕ್ಯದಿಂದ ಅನಂತಜನರಿಗೆ ಅನಂತಫಲಗಳಾದವು.
ಗುರುವಾಕ್ಯದಿಂದ ಪ್ರಮಥರ ಮನೆಯಲ್ಲಿ ಪರಮಾತ್ಮ ಸಂಚರಿಸಿದನು.
ಗುರುವಾಕ್ಯದಿಂದ ಆ ರಾಮಸಿದ್ಧನಿಗೆ ಅಘೋರಮೂರ್ತಿ
ಪ್ರಾಪ್ತವಾಯಿತ್ತು.
ಇದು ಕಾರಣ ಗುರುವೆ ಘನವೆಂದರಿದು
ಗುರುವಾಗಿ ಗುರುಪೂಜೆಯ ಮಾಡಬೇಕಲ್ಲದೆ
ಗುರುಸಮ್ಮುಖದಲ್ಲಿ ಗದ್ದುಗೆಯನೇರಿದಡೆ,
ಕಪಿಲಸಿದ್ಧಮಲ್ಲಿಕಾರ್ಜುನ ಕರಸಿತಗ, ಕೇಳಾ ನಿಜಗುಣಯ್ಯಾ.
॥೫೦೨॥

೫೦೩

ಗುರುವಿಂಗಾದಡೆಯು ಬಸವಣ್ಣನೆ ಬೇಕು;
ಲಿಂಗಕ್ಕಾದಡೆಯು ಬಸವಣ್ಣನೆ ಬೇಕು;
ಜಂಗಮಕ್ಕಾದಡೆಯು ಬಸವಣ್ಣನೆ ಬೇಕು.
ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ,
ನಿಮಗೂ ಎನಗೂ ನಿಮ್ಮ ಶರಣರಿಗೂ ಬಸವಣ್ಣನೆ ಬೇಕು.
॥ ೫೦೩ ॥

೫೦೪

ಗುರುವಿಂದನ್ಯ ದೈವವಿಲ್ಲೆಂಬುದಕ್ಕೆ ಆಗಮವಾಣಿಯೆ ಸಾಕ್ಷಿ.
ಅದೆಂತೆಂದಡೆ :
"ಗುರುದೇವೋ ಮಹಾದೇವೋಗುರುದೇವಸ್ಸದಾಶಿವಃ।
ಗುರುದೇವಾತ್ಪರಂ ನಾಸ್ತಿ ತಸ್ಮೈ ಶ್ರೀಗುರುವೇ ನಮಃ॥
ಗುರುಃ ಶಂಭುರ್ಗುರುರ್ಜ್ಞಾನಂ ಗುರುರ್ಮಾತಾ ಗುರುಃ ಪಿತಾ।
ಗುರುರ್ಬಂಧುರ್ಗುರುಃ ಸಾಕ್ಷಾದ್ದೇವತಾಗಣಪುಂಗವಃ॥
ಅನುಷ್ಠಾನಾದಿಕಾಂ ಪೂಜಾಂ ಯಃ ಕರೋತಿ ಗುರುಂ ವಿನಾ।
ಯಾತಿ ನೀಚಾನಿ ಜನ್ಮಾನಿ ತಸ್ಮಾದ್ಗುರುವರಂ ಭಜೇತ್॥
ಷಣ್ಮಾಸೇ ವ್ಯಾಪಿ ವರ್ಷೇ ವಾ ವರ್ಷೇ ವಾ ದ್ವಾದಶಾತ್ಮಕೇ।
ಗುರೋರಾಲೋಕನಂ ಯಸ್ತು ನ ಕರೋತಿ ಸ ಪಾಪವಾನ್॥"
ಎಂಬುದೆ ಪ್ರಮಾಣವಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ.
॥ ೫೦೪ ॥

೫೦೫

ಗುರುವಿಗೆ ಘನಗುರು ಮಾಚಿತಂದೆಗಳು;
ಲಿಂಗಕ್ಕೆ ಘನಲಿಂಗ ಮಾಚಿತಂದೆಗಳು;
ಜಂಗಮಕ್ಕೆ ನಿರಂಜನ ವಸ್ತು ನಮ್ಮ ಮಾಚಿತಂದೆಗಳು.
ಅಂತಪ್ಪ ಮಾಚಿತಂದೆಗೆ ಪೇಳ್ವ ತ್ರಾಣ ಎನ್ನಲ್ಲಿಹುದೆ?
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೫೦೫ ॥

೫೦೬

ಗುರುವಿಗ್ರಹವಿಡಿದು ಸರ್ವಾನುಗ್ರಾಹಕ ನೀನೆ ದೇವಾ.
ಚರವಿಗ್ರಹವಿಡಿದು ಚರಾಚರಂಗಳಿಗೆ ಚರಿಸಿ
ಸುಕೃತಿಗತಿಯನೀವ ಚರರೂಪ ನೀನೆ ದೇವಾ.
ಲಿಂಗವಿಗ್ರಹವಿಡಿದು ಸರ್ವರಿಂ ಪೂಜೆಗೊಂಡು
ಅವರವರಾಭಿಷ್ಟಭೋಗವ ಕೊಡುವ ದೇವ ನೀನೆ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೫೦೬ ॥

೫೦೭

ಗುರುವಿಡಿದು ತನುವಾಯಿತ್ತು ;
ಲಿಂಗವಿಡಿದು ಮನವಾಯಿತ್ತು ;
ಜಂಗಮವಿಡಿದು ಧನವಾಯಿತ್ತು ;
ಬಸವಣ್ಣವಿಡಿದು ಭಕ್ತಿಯಾಯಿತ್ತು ;
ಕಪಿಲಸಿದ್ಧಮಲ್ಲಿನಾಥಯ್ಯ. ॥ ೫೦೭ ॥

೫೦೮

ಗುರುವಿನ ಕೃಪೆಯಿಂದ
ಸಾಧಾರಣ ತನುವ ಮರೆದೆ.
ಗುರುವಿನ ಕೃಪೆಯಿಂದ
ಮಲತ್ರಯದ ಪಂಕವ ತೊಳೆದೆ.
ಗುರುವಿನ ಕೃಪೆಯಿಂದ
ದೀಕ್ಷಾತ್ರಯದಿಂದನುಭವಿಯಾದೆ.
ಗುರುವಿನ ಕೃಪೆಯಿಂದ
ಶುದ್ಧಸಿದ್ಧಪ್ರಸಿದ್ಧ ಪ್ರಮಾಣವನರಿದವನಾದೆ.

ಎನಗೆ ಅಧಿಕ್ಯವಪ್ಪ ವಸ್ತು ಎನಗೆ ಬೇರೊಂದೂ ಇಲ್ಲ.
ಅದೇನು ಕಾರಣ? ಅವನಾದೆನಾಗಿ.
ಗುರುವೆ ಎನ್ನ ತನುವಿಗೆ ಲಿಂಗದೀಕ್ಷೆಯ ಮಾಡಿ,
ಎನ್ನ ಜ್ಞಾನಕ್ಕೆ ಸ್ವಾನುಭಾವದೀಕ್ಷೆಯ ಮಾಡಿ,
ಎನ್ನ ತನುಮನದಲ್ಲಿ ವಂಚನೆಯಿಲ್ಲದೆ
ಮಾಡಲೆಂದು ಜಂಗಮದೀಕ್ಷೆಯ ಮಾಡಿ,
ಎನ್ನ ಸರ್ವಾಂಗವೂ ನಿನ್ನ ವಿಶ್ರಾಮಸ್ಥಾನ
ಶುದ್ಧಮಂಟಪವಾದ ಕಾರಣದಲ್ಲಿ
ಲೋಕವ್ಯಾಪ್ತಿಯನರಿದೆ, ಲೋಕವೆನ್ನೊಳಗಾಯಿತು,
ಆ ಲೋಕಕ್ಕೆ ಹೊರಗಾದೆ.
ಅದೇನು ಕಾರಣ?
ಜನನ ಮರಣ ಪ್ರಳಯಕ್ಕೆ ನಾ ಹೊರಗಾದೆ ನಾ.
ನೀ ಸದ್ಗುರುವೆ
ಎನ್ನ ಭವದ ಬೇರ ಹರಿದೆ ಗುರುವೆ,
ಭವಪಾಶ ವಿಮೋಚನಾ
ಅವ್ವೆಯ ಮನದ ಸರ್ವಾಂಗಲೋಲುಪ್ತ
ಭುಕ್ತಿ ಮುಕ್ತಿ ಫಲಪ್ರದಾಯಕ ಗುರುವೆ ಬಸವಣ್ಣ,
ಕಪಿಲಸಿದ್ಧಮಲ್ಲಿಕಾರ್ಜುನಾ
ನೀನಾಗಿ ಚೆನ್ನಬಸವಣ್ಣನಾಗಿ,
ಪ್ರಭು ಮೊದಲಾದ ಅಸಂಖ್ಯಾತರೆಲ್ಲರನೂ
ತೋರಿದೆ ಗುರುವೆ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೫೦೮ ॥

೫೦೯

ಗುರುವಿನ ಭಕ್ತಿಕ್ರೀಯ ಬೆಳಗಿನ್ನೆಂತೊ;
ಶಿಷ್ಯನಳಿವ ಪೂಜಾಸಂಭ್ರಮವಿನ್ನೆಂತೊ;
ಪ್ರಮಥರ ಶಿವಲಿಂಗಕೂಟವಿನ್ನೆಂತೊ;
ಪ್ರಭುಗಳ ನಿರೀಕ್ಷಣೆಯಿನ್ನೆಂತೊ;
ಮಡಿವಾಳನ ಮಹಾನುಭಾವವಿನ್ನೆಂತೊ;
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೫೦೯ ॥

೫೧೦

ಗುರುವಿಲ್ಲದಲ್ಲಿ ಜಂಗಮವಿಲ್ಲವೆ?
ಜಂಗಮವಿಲ್ಲದಲ್ಲಿ ತಾ ಜಂಗಮವಲ್ಲವೆ?

ತಾ ಜಂಗಮನಲ್ಲದಲ್ಲಿ ಲಿಂಗವಿಲ್ಲವೆ?
ಲಿಂಗೋದಕದಿಂದ ಸರ್ವಾಚಾರ ಶುದ್ಧವಾಗವೆ?
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೫೧೦ ॥

೫೧೧

ಗುರುವಿಲ್ಲದೆ ಲಿಂಗಪೂಜೆಯ ಮಾಡಿದೆನಾದಡೆ
ಆ ಪೂಜೆ ಮೃತಮಹಿಷನ ಮೆರವಣಿಗೆಯಂತೆ.
ಗುರುವಿಲ್ಲದೆ ಗಣಾರಾಧನೆಯ ಮಾಡಿದೆನಾದಡೆ
ಪತಿವ್ರತೆಯರಿಲ್ಲದ ಪಾರ್ವತಿಯರ ಪೂಜೆಯಂತೆ.
ಗುರುವಿಲ್ಲದೆ ಲಗ್ನವ ಮಾಡಿದೆನಾದಡೆ
ಶೂಲವನೇರುವ ಪುರುಷನ ಭೋಗದಂತೆ.
ಗುರುವಿಲ್ಲದೆ ದೀಕ್ಷೆಯ ಮಾಡಿದೆನಾದಡೆ
ಪಾರ್ವತಿಯರಿಲ್ಲದ ರುದ್ರರಾಜನ ಮನೆಯಂತೆ
ಕಪಿಲಸಿದ್ಧಮಲ್ಲಿಕಾರ್ಜುನದೇವಾ. ॥ ೫೧೧ ॥

೫೧೨

ಗುರುವೆ ಎನ್ನ ತನುವಿಂಗೆ ಲಿಂಗದೀಕ್ಷೆಯ ಮಾಡಿ
ಎನ್ನ ಜ್ಞಾನಕ್ಕೆ ಸ್ವಾನುಭಾವದೀಕ್ಷೆಯ ಮಾಡಿ
ಎನ್ನ ತನು ಮನ ಧನದಲ್ಲಿ ವಂಚನೆಯಿಲ್ಲದೆ
ಮಾಡಲೆಂದು ಜಂಗಮದೀಕ್ಷೆಯ ಮಾಡಿ
ಎನ್ನ ಸರ್ವಾಂಗವು ನಿನ್ನ ವಿಶ್ರಾಮಸ್ಥಾನ
ಶುದ್ಧಮಂಟಪವಾದ ಕಾರಣ,
ಲೋಕವ್ಯಾಪ್ತಿಯನರಿಯದೆ ಲೋಕ ಎನ್ನೊಳಗಾಯಿತ್ತು,
ಆ ಲೋಕಕ್ಕೆ ಹೊರಗಾದೆ.
ಅದೇನು ಕಾರಣ? ಜನನ ಮರಣ ಪ್ರಳಯಕ್ಕೆ ಹೊರಗಾದೆನಾಗಿ.
ಗುರುವೆ ಸದ್ಗುರುವೆ ಎನ್ನ ಭವದ ಬೇರ ಹರಿದೆ ಗುರುವೆ,
ಭವಪಾಶವಿಮೋಚ[ನ]ನೆ,
ಅನ್ವಯ ಮನದ ಸರ್ವಾಂಗಲೋಲುಪ್ತ,
ಭುಕ್ತಿಮುಕ್ತಿ ಫಲಪ್ರದಾಯಕ ಗುರುವೆ ಬಸವಣ್ಣ,
ಕಪಿಲಸಿದ್ಧಮಲ್ಲಿಕಾರ್ಜುನ ಚೆನ್ನಬಸವಣ್ಣನಾಗಿ
ಪ್ರಭು ಮೊದಲಾಗಿ ಅಸಂಖ್ಯಾತರನೆಲ್ಲರನು ತೋರಿದ ಗುರುವೆ.
॥ ೫೧೨ ॥

೫೧೩

ಗುರುವೆ, ನಿಗಮಕ್ಕಭೇದ್ಯನೆ,
ಅಕ್ಷರ ಮೂರರ ರೂಪನೆ,
ಅಕ್ಷರ ಎರಡರ ನಿತ್ಯನೆ,
ಅಕ್ಷರ ನಾಲ್ಕಕ್ಕೆ ಸಿಕ್ಕದನೆ,
ಅಕ್ಷರ ಐದಕ್ಕಿಂದತ್ತಲಾದವನೆ,
ಅಕ್ಷರ ಏಳ ಮೀರಿದವನೆ,
ಅಕ್ಷರವಾರ ನೀ ಜರಿದವನೆ,
ಅಕ್ಷರವಾರರ ರೂಪನೆ,
ಆರರಕ್ಷರಕ್ಕೆ ಅನಾಮಯನೆ,
ಅಕ್ಷರವೆಂಟರ ರೂಪನೆ,
ಹದಿನಾರಕ್ಷರಕ್ಕೆ ಸಂಪೂರ್ಣನೆ,
ಇವು ಮೊದಲಾದ ಅಕ್ಷರ ಹಲವನು
ಏಕವ ಮಾಡಿ ತೋರಬಲ್ಲ ರೂಪನೆ,
ಆನಂದಮಯನ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ
ತೋರಿದ ಪರಮಗುರುವೆ. ॥ ೫೧೩ ॥

೫೧೪

ಗುರು ಶಿಷ್ಯಾನಂದವ ಮನಸಿಗೆ ಬಂದಂತೆ
ಹೇಳುವೆನು ಎಲೆ ಅವ್ವಾ.
ಬಾಲನ ಮಾತಿಗೆ ಮಾತಪಿತರಿಗೆ ಪ್ರೀತಿಯಪ್ಪಂತೆ
ಎನ್ನ ಮಾತ ಆಲಿಸುವವರು ಶಿವಭಕ್ತರು,
ಎನ್ನ ಮಾತಾ ಪಿತರು ಕಾಣಾ ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೫೧೪ ॥

೫೧೫

ಗುರು ಸಮಾಧಿಯ ಸಮ ತನ್ನ ಸಮಾಧಿಯ ಮಾಡಲೆಂದು,
ವೀರವಿಕ್ರಮಚೋಳನ ದೇಹ ಬಯಲಿಗೆ ಬಾಯಿದೆರೆದು
ಬರಲಿಲ್ಲವೆ?
ಗುರು ಸಮಾಧಿಯ ಮುಂದೆ ತನ್ನ ಸಮಾಧಿಯ ಮಾಡಲೆಂದು,

ರಾಜೇಂದ್ರಚೋಳನ ದೇಹ ಎದ್ದು ನಮಿಸಿ ಸಮಾಧಿಯ
ಹೊಗಲಿಲ್ಲವೆ?
ಇದರ ಕೀಲ ಪ್ರಮಥರು ಅರಿಯರೆ?
ಇದರಂದವ ಗೌರಿ ನಾಗಾಯಿ ಅರಿಯಳೆ?
ಇದರ ಕೀಲ ಕಪಿಲಸಿದ್ಧಮಲ್ಲಿಕಾರ್ಜುನ ಶರಣನ ರಾಣಿ
ನೀಲಾಂಬಿಕೆಯರಿಯೆಳೆ ಸೊಡ್ಡಯ್ಯಾ? ॥ ೫೧೫ ॥

೫೧೬

ಗುರುಸಮ್ಮುಖದಲ್ಲಿ ಲಿಂಗಪೂಜೆಯ ಮಾಡಲಾಗದು.
ಗುರುಸಮ್ಮುಖದಲ್ಲಿ ತಾನೊಂದಾಸನದ ಮೇಲೆ ಇರಲಾಗದು.
ಗುರುಸಮ್ಮುಖದಲ್ಲಿ ವೀಳ್ಯವ ಭೋಗಿಸಲಾಗದು.
ಗುರುಸಮ್ಮುಖದಲ್ಲಿ ಸ್ವೇಚ್ಛಾಚಾರಿಯಾಗಿ ನಿದ್ರೆಗೈಯಲಾಗದು.
ಗುರುಸಮ್ಮುಖದಲ್ಲಿ ವಿದ್ಯೆಯ ಹೇಳಲಾಗದು.
ಗುರುಸಮ್ಮುಖದಲ್ಲಿ ಏನೊಂದು ನುಡಿಯಲಾಗದು.
ಗುರುಸಮ್ಮುಖದಲ್ಲಿ ಹಾಸ್ಯವ ಮಾಡಲಾಗದು.
ಅದು ಕಾರಣ, ಇಂತಪ್ಪ ಕೃತ್ಯಂಗಳ ಮಾಡಿದೆನಾದಡೆ
ಕಪಿಲಸಿದ್ಧಮಲ್ಲಿಕಾರ್ಜುನದೇವರು, ಮನದಿಂದ ಮಹಾಜ್ಞಾನದಿಂದ
ದೂರಾಗಲಿ ಕೇಳಾ ಪ್ರಭುವೆ. ॥ ೫೧೬ ॥

೫೧೭

ಗುರುಸ್ವಾಮಿ ಧರಿಸುವ ಮಡಿಯ ನಾ ಸುತ್ತಿದೆನಾದಡೆ,
ಶಿರವು ಬಿರಿದು ಬೀಳಾಗಲಿ ದೇವಾ.
ಗುರುಸ್ವಾಮಿ ಧರಿಸುವ ಕಂಠಮಾಲೆಯ ನಾ ಧರಿಸಿದೆನಾದಡೆ,
ಕಂಠ ಕತ್ತರಿಸಿ ಹೋಗಲಿ ದೇವಾ.
ಗುರುಸ್ವಾಮಿ ಪಾನವ ಮಾಡುವ ಗಿಂಡಿಯಲಿ ನಾ ಪಾನವ
ಮಾಡಿದೆನಾದಡೆ
ನಾಲಗೆ ಸೀಳಿಹೋಗಲಿ ದೇವಾ.
ಗುರುಸ್ವಾಮಿ ಶಯನಿಸುವ ಸುಪ್ಪತ್ತಿಗೆಯಲ್ಲಿ ನಾ ಶಯನ
ಮಾಡಿದೆನಾದಡೆ
ಎನ್ನಂಗದಲಿ ಕ್ರಿಮಿಗಳು ಬೀಳಲಿ ದೇವಾ,
ಕಪಿಲಸಿದ್ಧಮಲ್ಲಿಕಾರ್ಜುನದೇವಾ. ॥ ೫೧೭ ॥

೫೧೮

ಗ್ರಾಮಕ್ಕೊಬ್ಬರಸಿಲ್ಲದೆ ಗ್ರಾಮವಳುತ್ತಿದೆ ನೋಡಾ.
ಗ್ರಾಮವನಾಳುವ ಅರಸಿನ ಮನೆಯಲ್ಲಿ ಸದೆ ಬೆಳೆದಿದೆಯಯ್ಯಾ.
ಗ್ರಾಮಕ್ಕೆ ಬಂದ ಕಟ್ಟರಸಿಂಗೆ ಪಟ್ಟವ ಕಟ್ಟಿ,
ಅರಸಿನ ಮನೆಗಳನನುಗೆಯ್ದು, ಹರುಷದಿಂದ
ಕಾಣಕೆಯಿಕ್ಕಿಸಿಕೊಳ್ಳಾ,
ಕಪಿಲಸಿದ್ಧಮಲ್ಲಿನಾಥಯ್ಯಾ. ॥ ೫೧೮ ॥

೫೧೯

ಗ್ರಾಮ ಚೌಗ್ರಾಮದಲಿ ಸೀಮೆಗೆಟ್ಟುತದು
ಸಿದ್ಧಗ್ರಾಮವ ಮುರಿದೊತ್ತುತ್ತೈದೂದೆ
ಗ್ರಾಮಬಲ ನಾಶವಾಗೆ ಸೀಮೆಗೆಡಲು,
ಸಾನಂದದ ಆನಂದಕ್ಕೆ
ತನ್ನನು ಕಳೆದು, ನಾನಾ ಗುಣದಲ್ಲಿ
ಭಾನು ವಿಕಸ ಪ್ರಬಲವನೆಯ್ದಿದೆ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೫೧೯ ॥

೫೨೦

ಗ್ರಾಮ ಪಟ್ಟಣವೈದು ಐದೈದು ನಾಯಕರು
ತೋರಿಪ್ಪರದ ಕಂಡು ಪ್ರತ್ಯಯವನು.
ಸೀಮೆ ಸಂಬಂಧವನು ಮೀರಿಪ್ಪ ನಾಯಕರು
ತಾವು ನಿಂದರು ಗಡಿಯ ಸಂಬಂಧವ
ಪರದಳವು ಬರಲಾಗಿ ಅರಿಯದೆ ಇದಿರಾಡಿ
ಅರಿತು ಬಿಟ್ಟರು ವೀರಧೀರರಾಗಿ.
ಅರಿವುಮರಹನೆ ನುಂಗಿ ಕುರುಹುಗೆಟ್ಟಾ ಸೀಮೆ
ತೆರಹಿಲ್ಲದಾತ [ತಾ] ಪರಮಯೋಗಿ
ಕಪಿಲಸಿದ್ಧಮಲ್ಲಿಕಾರ್ಜುನಯ್ಯನೆಂಬ
ತೆರಹಿನ ಪಟ್ಟಣದ ಪ್ರಭೆಯಿಂತುಟು. ॥ ೫೨೦ ॥

೫೨೧

ಗ್ರಾಮವೆಂಟರ ಒಳಗೆ ಆನಂದದಾಳಾಪ
ಸ್ವಾನುಭೂತ್ಯೆಕದಲಿ ಸೌಖ್ಯವಾಗಿ
ಭಾನುವಿನುದಯದ ಪ್ರಭೆಯ ನುಂಗಿದ ದೀಪ್ತಿ
ಅಜಾತ ಗುರುವಿನ ರೂಪು ಕಪಿಲಸಿದ್ಧಮಲ್ಲಿಕಾರ್ಜುನಾ.॥ ೫೨೧ ॥

೫೨೨

ಘರ್ಜನೆಯಿಂ ಸಿಡಿಲು ಅಡಸಿ ಬಂದು ಪೊಯ್ಯುತ್ತಿರಲಿ,
ಪೊಯ್ಯವೊಲ್ಲದೆ ವಾಯುವಿಮಾನಂಗಳಿಂದ [ಎತ್ತಿಕೊಳ್ಳ]
ಎತ್ತಿಕೊಂಡಡೆ, ಮನವಿಚ್ಛಂದವಾಗದೊಂದೆಯಂದದಲ್ಲಿಪ್ಪಂತಪ್ಪ
ನಿಮ್ಮದೊಂದು ಸಮತಾಗುಣ ಎನ್ನನೆಂದು ಬಂದು ಪೊದ್ದಿಪ್ಪುದು ಹೇಳಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೫೨೨ ॥

೫೨೩

ಘಟಸರ್ಪನ ಫಣಾಮಣಿಯ ಬೆಳಗಿನ ಪ್ರಭೆ ಹಿರಿದು :
ಸ್ಥಿರವಾಗಿ ಇರಬಲ್ಲಡೆ.
ನಿಸ್ತಾರ, ನಿಸ್ತಾರ, ನಿಸ್ತಾರವು
ಸತ್ಯಪ್ರಭೆಯಿಂದಲು ವಿಚಿತ್ರಸ್ಥಾನವಾದಡೆ,
ಮತ್ತೆ ನಿತ್ಯ ತಪ್ಪದು,
ಕಪಿಲಸಿದ್ಧಮಲ್ಲಿನಾಥಯ್ಯನ. ॥ ೫೨೩ ॥

೫೨೪

ಘಟ್ಟಣೆಯ ಲೋಕದಲಿ
ಬೆಟ್ಟಗಳಾರಾಗಿ ಇಕ್ಕೆಲದಲೀರಾರು ಸೂರಿಯನನೂ
ಮತ್ತೆ ಪ್ರಭೆಯನು ಮಾಡಿ
ಹೊತ್ತಿಪ್ಪ ತತ್ವಕ್ಕೆ ಸೀಮೆ ತಾನೂ
ಒತ್ತರನು ಮುತ್ತರನು, ಮುತ್ತರನು, ಒತ್ತರನು

ಮತ್ತೆ ತ್ವಮಸಿಯ ರೂಪು ತಾನು ವಿಚಿತ್ರ
ಕಪಿಲಸಿದ್ಧಮಲ್ಲಿಕಾರ್ಜುನನೆಂಬ
ಭಕ್ತಿತಾತ್ಪರ್ಯದ ಪರಿಯಿಂತುಟು. ॥ ೫೨೪ ॥

೫೨೫

ಘನಕ್ಕೆ ಘನವಾದ ಪರವಸ್ತು ಲಿಂಗಮೂರ್ತಿ ಬಂದಿತ್ತೆನ್ನ
ಕರಸ್ಥಲಕ್ಕೆ.
ಬಂದ ಲಿಂಗಮೂರ್ತಿಯಂ ಕಂಡು ಮನ ಹಾರೈಸಿ ತನು ಕರಗಿತ್ತು.
ಆ ಲಿಂಗವಂ ಕಂಡು ಕಪಿಲಸಿದ್ಧಮಲ್ಲಿನಾಥನೆನ್ನ
ಅಂತರಂಗದಲ್ಲಿದ್ದನು. ॥ ೫೨೫ ॥

೫೨೬

ಘನಸುಖದ ಸಂಪನ್ನನಾಗಿ
ನಿಮ್ಮ ಕರುಣಕಾವುದು ಕಡೆಯು,
ಮನಸಿಜನ ಮದವ ಮಾಯೆಯನೆಲ್ಲವ ಹರಿದು
ನಿಮ್ಮ ಪದದ ಹದುಳವಿರಿಸಿದಿರಯ್ಯಾ
ಕರುಣಾಕರನೆ ಕಪಿಲಸಿದ್ಧಮಲ್ಲೇಶ್ವರಾ. ॥ ೫೨೬ ॥

೫೨೭

ಘಾತವಪ್ಪ ಸರಧಿ ಪ್ರೇತವಪ್ಪ ಅಡವಿ
ಪಾತಕ ಭವಕೆ ಬಹ ಕೂಪದೊಳಗೆ
ನೂಕಿದರೆ ಬೀಳೆ, ನಿನ್ನಾಧಾರವುಂಟು.
ಅನಾದಿಸಂಸಿದ್ಧ ಯೋಗಮೂರ್ತಿ
ನಿನ್ನ ಒಡನಾಡಿ ನಾ ನಿನ್ನ ಠಕ್ಕನರಿಯೆನೆ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೫೨೭ ॥

೫೨೮

ಚರಣ ಲಿಂಗವಾಗಿ ಕರ ಜಿಹ್ವೆಯಾಗಿ
ಮಸ್ತಕದಲ್ಲಿ ಸಕಲ ಬ್ರಹ್ಮಾಂಡಗಳ ವ್ಯಾಪ್ತಿಯನು
ಅಕ್ಷರವೆರಡರಲ್ಲಿ ಆಂದೋಳವಂ ಮಾಡಿ
ಪರಿಯಲೀಯ್ಯದೆ ಹದುಳ ಮಾಡಿವಾತ ಗುರು !
ಎನ್ನ ಶಬ್ದ -ಸ್ಪರ್ಶ-ರೂಪು-ರಸ-ಗಂಧ-
ಧ್ಯಾನ-ಧಾರಣ-ಸಮಾಧಿ ಸನ್ನಿಹಿತ ಗುರು!

ದೀಕ್ಷೆ ಶಿಕ್ಷೆ ಸ್ವಾನುಭಾವ ಸಂಪನ್ನತೆಯನುಳ್ಳಾತ ಗುರು !
ಆದ್ಯಂತರದಲ್ಲಿ ಸಹಸ್ರ ಕಮಲದೊಳಗಣ
ಕಂಜಕರ್ಣಿಕೆಯ ಮನಸ್ಮಸ್ತಕದಲ್ಲಿ ಒಪ್ಪಿಪ್ಪ
ಅಕ್ಷರದ್ವಯದ ಆಂದೋಳನವನುಳ್ಳಾತ ಗುರು!
ಅನಾಮಯಸ್ಥಾನದಲ್ಲಿ ಬಹುದಳದ ಕಮಲದೊಳಗೆ ಒಪ್ಪಿಪ್ಪ
ಹಮ್ಮೆಂಬ ಬಿಂದುವಿನ ಆನಂದ ಮಧ್ಯಸ್ಥಾನದ
ಶುದ್ಧ ಸಿಂಹಾಸನವನಿಕ್ಕಿ ಅದೆ ಮನೆಯಾಗಿರಲುಳ್ಳಾತ ಗುರು!
ನಿತ್ಯ ನಿರಂಜನರೂಪೆ ತದ್ರೂಪಾಗಿ
ಶಕ್ತಿಪಂಚಕದ ಆಜ್ಞೆಯ ಹೊದ್ದದಿಪ್ಪಾತ ಗುರು!
ಅನಿಮಿಷಸ್ಥಾನದಲ್ಲಿ ಇಪ್ಪ ಶಕ್ತಿತ್ರಯದ
ಕ್ರಿಯಾಕಾರವ ನಡೆಸುವಾತ ಗುರು!
ತನುಗುಣಪ್ರಾಪಂಚಿಕವನತಿಗಳೆದು
ಸೀಮೆಯ ಮೀರಿದ ಸಂಬಂಧಿ
ಪ್ರಮಾಣೆಲ್ಲದ ಪರಮಗುರುವೆ ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೫೨೮ ॥

೫೨೯

ಚಾತುಷ್ಟ ಬ್ರಹ್ಮದಲಿ
ಅನೇಕ ವಿಧ ಸಂಗಮದ
ಸಾಕಲ್ಯ ದೇಹವನು ಕಳೆದು,
ಸತ್ಯಾನಂದ ಏಕಮಯನೆನಿಪ ಭವದೂರನು.
ಆತನನು ತಂದು ಮನಮಧ್ಯದೊಳಿರಿಸಿದ
ಅಜಾತ ಗುರುವ್ಯೆ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೫೨೯ ॥

೫೩೦

ಚಿಂತೆ ನಿಶ್ಚಿಂತವಾಗದಯ್ಯಾ,
ನಿಶ್ಚಿಂತ ನೆಲೆಮನೆಯಯ್ಯಾ, ಎನಗೆಂದಪ್ಪುದು ಹೇಳಾ.
ಆನಂದಸ್ಥಾನದಲ್ಲಿ ತಾತ್ಪರಿಯದಿಂದ
ನೀ ನಾನೆಂದಪ್ಪೆನು ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ. ॥ ೫೩೦ ॥

೫೩೧

ಚಿರಂಜೀವಿ ಎಂದಡೆ ನಿರೋಗಿ; ಚಿರಂಜೀವಿ ಎಂದಡೆ ಸಶಕ್ತ;
ಚಿರಂಜೀವಿ ಎಂದಡೆ ಬಹುಕಾಲ ಬದುಕುವವನು.

ಚಿರಂಜೀವಿ ಎಂದಡೆ ಪ್ರಳಯವ ಮೀರುವವನಲ್ಲ.
ಕಪಿಲಸಿದ್ಧಮಲ್ಲಿಕಾರ್ಜುನಾ, ಬ್ರಹ್ಮವೆಂಬ ಶಬ್ದ ಬೇರುಂಟೆ?
॥ ೫೩೧ ॥

೫೩೨

ಚೌಗ್ರಾಮಕೊಳದಲ್ಲಿ ಎಸೆವ ಚಾದಗವಕ್ಕಿ
ಒಸರುವಮೃತವನು ಕೊಳ್ಳಾ.
ಸೀಮೆಗೆಟ್ಟ ಅಮೃತವನು ಆರೈದು ಕೊಳಬಲ್ಲಡೆ
ಇದ್ದೆಸೆಯ ಸೀಮೆಗೆಡುವೆ ನೀನು ಕಂಡಾ.
ಮರಾಳ ಮರಾಳನೆಂಬ ಹಕ್ಕಿ ಹಾರದ ಮುನ್ನ
ನೀನೆಯ್ದು ಅವ್ಯಯ ಪದವ
ಕಪಿಲಸಿದ್ಧಮಲ್ಲಿನಾಥನೆಂಬ
ಸುಖಸಮುದ್ರದಲಾಳಾ. ॥ ೫೩೨ ॥

೫೩೩

ಜಗ ಜನಕ ಜನನಿಯರಿಬ್ಬರ ಇರವ ಕೇಳಾ ಅಯ್ಯಾ,
ಹಾ ಆಆ ಹೋ ಯೇ ಯೇ ಅಯ್ಯಾ,
ಸಸಿ ಬೀಜದಂತೆ ಶಿವನು ಶಯ[?]ರಿ ಕಂಡಾ ಅಯ್ಯಾ
ಇಲ್ಲಿ ಒಮ್ಮೆಯೂ ಭೇದವಿಲ್ಲ
ಕಪಿಲಸಿದ್ಧಮಲ್ಲಿನಾಥಯ್ಯನಾ. ॥ ೫೩೩ ॥

೫೩೪

ಜಗದಗಲದಲಿ ಹಬ್ಬಿ ಉಲಿವುತ್ತೈದುದೆ ಮಾಯೆ.
ಅದ ಕೆಡಿಸಿ ಎನ್ನ ಹರುಷಿತನ ಮಾಡಿ
ಉರುತರ ಕೈವಲ್ಯ ಪದವನಿತ್ತಾ ಗುರು ನೀನು
ಕಪಿಲಸಿದ್ಧಮಲ್ಲಿಕಾರ್ಜುನ ದೇವ ಗುರುವಾದಿರಲ್ಲೈ. ॥ ೫೩೪ ॥

೫೩೫

ಜಗದೆರೆಯ ಮಾಡಿದನೊಂದು ಕುರಿಮರಿಯ.
ಆ ಕುರಿಮರಿ ಮೇಯುತ್ತಿದೆ.
ಸರ್ವಜಗದವರೆಲ್ಲ ಅನಂತರಕ್ಕಸರು ಹಿಂಸೆ ಮಾಡುತ್ತೈದಿದರು.

ಹೋದ ರಕ್ಕಸರು ಸತ್ತರು: ಇದ್ದ ಕುರಿಮರಿ ಇದ್ದಂತಿಪ್ಪುದು!
ಇದೇನು ಕೌತುಕ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೫೩೫ ॥

೫೩೬

ಜಗದೊಳಹೊರಗೆ ನೀನಿಪ್ಪೆಯಯ್ಯಾ.
ಇಪ್ಪ ನೆಲೆಯ ಹೋಹ ಗತಿಯ ಕಾಣಲಾರಿಗೆ ಬಾರದಯ್ಯಾ.
ನೋಡ ನೋಡಲಿ ಅಡಗಿ ಹೋಹೆ
ಎನ್ನ ಕಪಿಲಸಿದ್ಧಮಲ್ಲಿನಾಥಾ, ನೀ ಶೂನ್ಯನಯ್ಯಾ. ॥ ೫೩೬ ॥

೫೩೭

ಜಗವನಾಡಿಸುವನು, ಜಗವನೇಡಿಸುವನು.
ಜಗದ ನಟನಾಟಕನ ಪರಿಯ ನೋಡಯ್ಯಾ!
ಜಗವ ರಂಜಿಸುವನು, ಜಗವ ಭುಜಿಸುವನು.
ಜಗದೊಳಗಿಪ್ಪನು, ಜಗದ ಹೊರಗಿಪ್ಪನು.
ಜಗಕೆ ತೋರಿಯೂ ತೋರದಂತಿಪ್ಪನು.
ದರ್ಪಣದೊಳಗಣ ಪ್ರತಿಬಿಂಬದಂತಿಪ್ಪನು.
ಉದಕ-ಪದ್ಮಪತ್ರದಂತಿಪ್ಪನು.
ನಿಜಗುರುವೆ, ಸ್ವತಂತ್ರ ಕಪಿಲಸಿದ್ಧಮಲ್ಲೇಶ್ವರನೆ,
ನೋಟ ತೀರಲೊಡನೆ ಜಗದಾಟ ತೀರಿತು. ॥ ೫೩೭ ॥

೫೩೮

ಜನರ ಗೊತ್ತೆಂಬಲ್ಲಿ,
ಪಾಪವ ಕಳೆದು ಪುಣ್ಯರಾಗಬೇಕೆಂಬರುಹು ತಲೆದೋರ್ಪುದಲ್ಲದೆ,
ಭೋಗರಹಿತ ಪುಣ್ಯದಾಶೆಯಿಲ್ಲ.
ಪುಣ್ಯದಾಶೆ ಇದ್ದಡೆ, ನಿಮ್ಮ ಲಿಂಗದಾಶೆ ಎನಗೆ ಸತ್ಯ ಕಾಣಾ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೫೩೮ ॥

೫೩೯

ಜನಿತವಿಲ್ಲದೆ ನಿರ್ಜನಿತನಾದೆ
ಸ್ಥೂಲ ಸೂಕ್ಷ್ಮದಲ್ಲಿ ನಿತ್ಯನಾದೆ

೧೪೦೨

ಮನೆ ನೋಡಿ ಮರೆದೆನಯ್ಯಾ ಮಹತ್ವಗಳ;
ಮನೆ ನೋಡಿ ಮರದೆನಯ್ಯಾ ಎನ್ನ ಮನೆಯ;
ಮನ ನೋಡಿ ಮರೆದೆನಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ,
ನಡೆಸಿದ ಹೋಮನೇಮ ಕೆರೆದೋಟ ಕೆಲಸಂಗಳ. ॥ ೨೨೫ ॥

೧೪೦೩

ನಿಮ್ಮ ಶಕ್ತಿ ಆತನಲ್ಲಿಪ್ಪುದು ಕಂಡಯ್ಯಾ,
ಆತನ ಪ್ರಾಣ ನಿಮ್ಮಲ್ಲಿಪ್ಪುದು.
ನಿಮ್ಮ ತಮ್ಮ ಭೇದವನಾರು ಬಲ್ಲರು ಹೇಳಯ್ಯಾ.
ಕಪಿಲಸಿದ್ಧಮಲ್ಲಿನಾಥಯ್ಯಾ,
ನಿಮ್ಮ ಶರಣ ಬಸವಣ್ಣನ ಅನುವ ನೀವೆ ಬಲ್ಲಿರಿ. ॥ ೨೨೬ ॥

೧೪೦೪

ಕೇಳು ಕೇಳಾ, ಎಲೆ ಅಯ್ಯಾ,
ಆದಿ ಅನಾದಿ ಇಲ್ಲದಂದು ಬಸವಣ್ಣನೆ ಭಕ್ತ;
ನಾದ ಬಿಂದು ಕಳೆಗಳಿಲ್ಲದಂದು ನೀನೆ ಜಂಗಮ.
ಶಿವ-ಶಕ್ತಿಗಳುದಯವಾಗದ ಮುನ್ನ ಬಸವಣ್ಣನೆ ಭಕ್ತ.
ಸುರಾಳ-ನಿರಾಳವೆಂಬ ಶಬ್ದ ಹುಟ್ಟದ ಮುನ್ನ ನೀನೆ ಜಂಗಮ.
ಈ ಉಭಯ ಭಾವದಲ್ಲಿ ಭೇದವುಂಟೆ
ಕಪಿಲಸಿದ್ಧಮಲ್ಲಿಕಾರ್ಜುನಾ?
ಬಸವಣ್ಣನಾರೆಂಬುದ ನಿಮ್ಮಲ್ಲಿ ನೀವೆ ತಿಳಿದು ನೋಡಿ
ಕೃಪೆಮಾಡಾ ಪ್ರಭುವೆ. ॥ ೨೨೭ ॥

೧೪೦೫

ಆದಿಯ ಮೂರ್ತಿಯಲ್ಲ, ಅನಾದಿಯ ಬಚ್ಚಬರಿಯ ಶೂನ್ಯವಲ್ಲ,
ಅಂಗವಿದ್ದು ಅಂಗವಿಲ್ಲದ ಸಂಗ ಘನಪದದಲ್ಲಿ ವೇದ್ಯವಾದ
ಮರುಳಶಂಕರದೇವರ ನಿಲವ ಪ್ರಭು ಬಸವಣ್ಣನಿಂದ
ಕಂಡು ಬದುಕಿದೆನು ಕಾಣಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೨೮ ॥

೧೪೦೬

ಜ್ಞಾನವೆಂದು ವಿವಾದಿಸುವ ಅಣ್ಣಗಳಿರಾ, ಕೇಳಿರಯ್ಯಾ:
ಜ್ಞಾನವೆಂದಡೆ ಮಹತ್ವಗಳ ಮಾಡಿ ಮೆರೆದುದು ಜ್ಞಾನವೆ?
ಅಲ್ಲಲ್ಲ.
ಜ್ಞಾನವೆಂದಡೆ ಸ್ವರ್ಗದ ವಾರ್ತೆಯ ಕೇಳಿ
ಕೀರ್ತಿಯ ಹಬ್ಬಿದುದು ಜ್ಞಾನವೆ? ಅಲ್ಲಲ್ಲ.
ಜ್ಞಾನವೆಂದಡೆ ತತ್ಕಾಲಕ್ಕಾಗುವ ಸುಖದುಃಖಗಳ
ಹೇಳಿದುದು ಜ್ಞಾನವೆ? ಅಲ್ಲಲ್ಲ.
ಇವೆಲ್ಲಾ ಸಾಧನೆಯ ಮಾತು.
ಅಘೋರಮುಖದಿಂದ ಹುಟ್ಟಿದ ಮಂತ್ರಂಗಳೆಲ್ಲಾ ,
ಜಪಿಸಿದಲ್ಲಿ ಮಹತ್ವಗಳಾದವು.
ಸೂಕ್ಷ್ಮತಂತ್ರವ ಗಣಿಸಿದಲ್ಲಿ ಸ್ವರ್ಗದ ವಾರ್ತೆಯ ಹೇಳಿದನು.
ಪ್ರಸಂಗಚಿಂತಾಮಣಿಯ ನೋಡಿ ಸುಖದುಃಖಂಗಳ ಹೇಳಿದನು.
ಇವೆಲ್ಲಾ ಪರಸಾಧನೆಯಯ್ಯಾ.
ನಿನ್ನರಿವು ಕೈಕರಣವಾಗಿರೆ ದೇಹವಳಿದಡೇನು, ದೇಹ ಧರಿಸಿ
ಬಂದಡೇನು?
ಎಲೆ ಅಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೨೯ ॥

೧೪೦೭

ವಾಕ್ಸಿದ್ಧಿಯುಳ್ಳವರು ಕೋಟಾನುಕೋಟಿ;
ಮನೋರಥಸಿದ್ಧಿಯುಳ್ಳವರು ಕೋಟಾನುಕೋಟಿ;
ಭಾವಸಿದ್ಧಿಯುಳ್ಳವರು ಕೋಟಾನುಕೋಟಿ.
ನಿಮ್ಮ ಸಿದ್ಧಿಯುಳ್ಳವರು ಇಲ್ಲ ಕಂಡಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೩೦ ॥

೧೪೦೮

ವಾಕ್ಸಿದ್ಧಿಯಿಂದ ದೋಷವುಂಟು, ವಾಕ್ಸಿದ್ಧಿಯಿಂದ ಪುಣ್ಯವುಂಟು.
ದೋಷದಿಂದ ಭವಕ್ಕೆ ಬೀಜ, ಪುಣ್ಯದಿಂದ ಪದಕ್ಕೆ ಬೀಜ.
ಇವೆಲ್ಲ ಪ್ರಳಯದಲ್ಲಿ , ನಿತ್ಯನೋಡಾ
ಕಪಿಲಸಿದ್ಧಮಲ್ಲಿಕಾರ್ಜುನಾ.॥ ೨೩೧ ॥

೧೪೦೯

ಚರಿತ್ರೆಗಳನೋದುವುದೇ ವಾಕ್ಸಿದ್ಧಿ.
ಭವವಳಿದು ಭಾಷಣೆಯ ಮಾಡುವುದೇ ವಾಕ್ಸಿದ್ಧಿ.
ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನ
ಪಾದೋದಕ ಪ್ರಸಾದವ ಸ್ವೀಕರಿಸುವುದದೆ ವಾಕ್ಸಿದ್ಧಿ
ಕಂಡಯ್ಯಾ, ಅಣ್ಣ ಮಡಿವಾಳ ಮಾಚಯ್ಯಾ. ॥ ೨೩೨ ॥

೧೪೧೦

ಆತನ ಸುಖದುಃಖವೀತಗೇನು?
ಈತನ ಸುಖದುಃಖವಾತಗೇನು?
ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ;
ನಿಮ್ಮ ನಿಮ್ಮ ಅರಿವ ಸಂತೈಸಿಕೊಳ್ಳಿ.
ರಂಭೆ ಎಂದಡೆ ನಿನ್ನಂಗನೆಯಾಗಲಿಲ್ಲವು;
ಒಂದಿನ ಸ್ವಪ್ನದಲ್ಲಾದಡೂ ರತಿಸಲಿಲ್ಲ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೩೩ ॥

೧೪೧೧

ಕಲ್ಪವೃಕ್ಷಕ್ಕೆ ಸಮಮಾಡಿ ಹೇಳಿದೆನಯ್ಯಾ,
ಕರಸ್ಥಲದ ಮಹಾಲಿಂಗಮೂರ್ತಿಗೆ.
ಅಲ್ಲಲ್ಲ, ಕಲ್ಪಿಸಿ ಬೇಡಿದಡೆ ಕೊಡುವುದದು ಸುರಾಮೃತವ;
ಮೃತ[ವ] ಬೇಡಿದಡೆ ಕೊಡುವುದಯ್ಯಾ ಭವದ ಗೋಳಾಟ ಕಾಣಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೩೪ ॥

೧೪೧೨

ನುಡಿದ ನಡೆ ಸಮನಿಸಿತ್ತಯ್ಯಾ ಸಂಗನ ಬಸವಣ್ಣಂಗೆ.
ನುಡಿದ ನಡೆ ಸಮನಿಸಿತ್ತಯ್ಯಾ ಪ್ರಭುವಿಂಗೆ.
ನಡೆಸಿದ ನಡೆ ಸಮನಿಸದಯ್ಯಾ ನಿಮ್ಮಾತಂಗಲ್ಲದೆ ಆತಂಗೆ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೩೫ ॥

೧೪೧೩

ಬ್ರಹ್ಮನ ಪೂಜಿಸಿ ಸೃಷ್ಟಿಗೊಳಗಾಗುವುದ ಬಲ್ಲೆ.
ರುದ್ರನ ಪೂಜಿಸಿ ಲಯಕ್ಕೊಳಗಾಗುವುದ ಬಲ್ಲೆ.
ನಮ್ಮಿಷ್ಟಲಿಂಗಮೂರ್ತಿಯ ಪೂಜಿಸಿ ಲಿಂಗವಾಗಿ
ಸರ್ವವಳಿವುದ ಬಲ್ಲೆ ನೋಡಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೨೩೬ ॥

೧೪೧೪

ನಾಲ್ಕು ಯುಗಂಗಳು ಸಹಸ್ರ ವೇಳೆ ತಿರುಗಿದಡೆ, ಬ್ರಹ್ಮಂಗೊಂದು ದಿನ.
ಬ್ರಹ್ಮನಂದು ಸಹಸ್ರ ವೇಳೆ ತಿರುಗಿದಡೆ, ವಿಷ್ಣುವಿಗೊಂದು ಗಳಿಗೆ.
ವಿಷ್ಣು ತಾನು ಹನ್ನೆರಡು ಲಕ್ಷ [ವೇಳೆ] ತಿರುಗಿದಡೆ,
ಮಹೇಶ್ವರಂಗೊಂದು ನಿಮಿಷ.
ಅಂತಪ್ಪ ಮಹೇಶ್ವರರನೇಕ ಲೀಲೆ ಧರಿಸಿದಲ್ಲಿ,
ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನ ಪೂಜೆ ಸಮಾಪ್ತಿ,
ನೋಡಯ್ಯಾ ಬಾಚರಸರೆ. ॥ ೨೩೭ ॥

೧೪೧೫

ಹಸಿವು ತೃಷೆಯಳಿದಡೇನು, ಭಕ್ತನಪ್ಪನೆ? ಅಲ್ಲಲ್ಲ.
ಅಷ್ಟಮಹಾಸಿದ್ಧಿಯುಳ್ಳಡೇನು, ಭಕ್ತನಪ್ಪನೆ? ಅಲ್ಲಲ್ಲ.
ತನು ಬಯಲಾಗಿ ಚತುರ್ವಿಧ ಪದಸ್ಥನಾಗಿ
ಕೈಲಾಸದಲ್ಲಿದ್ದಡೇನು, ಭಕ್ತನಪ್ಪನೆ? ಅಲ್ಲಲ್ಲ.
ಗಿಡಗಳ ತಿಂದ ಬಳಿಕ ಹಸಿವು ತೃಷೆ ತೋರದು.
ಯೋಗವಂಗವಾದ ಬಳಿಕ ಸ್ವೇಚ್ಛಾಚಾರ ಬಿಡದು.
ಅಘೋರತಪವ ಮಾಡಿದ ಬಳಿಕ ಮಹಾಸಿದ್ಧಿಗಳು ಬಿಡವು.
ಒಂದೊಂದರಿಂದೊಂದೊಂದು ಸಿದ್ಧಿ.
ಅಂಗ ಮೂರರಲ್ಲಿ ಲಿಂಗ ಸಂಬಂಧವಾಗಿ,
ಲಿಂಗ ಮೂರರಲ್ಲಿ ವಸ್ತುತ್ರಯವ ಪೂಜಿಸಿ,
ತತ್ಪ್ರಸಾದಗ್ರಾಹಕ ಭಕ್ತನಲ್ಲದೆ, ಜಾಲಬ್ರಹ್ಮಿಗೆ
ಭಕ್ತನೆನಬಹುದೇನಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ? ॥ ೨೩೮ ॥

೧೪೧೬

ತನು ಕೊಡುವಡೆ ಗುರುವಿನದು;
ಮನ ಕೊಡುವಡೆ ಲಿಂಗದದು;
ಧನ ಕೊಡುವಡೆ ಜಂಗಮದದು.
ಅವರ ಪದಾರ್ಥವನವರಿಗೆ ಕೊಟ್ಟು ಭಕ್ತನಾದೆನೆಂಬವರ
ಹಿರಿಯತನದ ಕೇಡ ನೋಡಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೩೯ ॥

೧೪೧೭

ತನು ಕೊಟ್ಟ ಬಳಿಕ ದೇಹವೆಲ್ಲಿಹದೊ?
ಧನ ಕೊಟ್ಟ ಬಳಿಕ ಭೋಗಂಗಳೆಲ್ಲಿಹವೊ?
ಇವೆಲ್ಲ ಬರಿಯ ಭ್ರಮೆ!
ಕೊಟ್ಟೆವೆಂಬವರ ಮುಖವ ನೋಡಲಾಗದು.
ಕೊಟ್ಟು ಭಕ್ತನಾದೆನೆಂಬ ನುಡಿ ಸಮನಿಸದಯ್ಯಾ ಗುರುವೆ,
ನಿಮ್ಮ ಶರಣರ ಬುದ್ಧಿಗೆ ಕಪಿಲಸಿದ್ಧಮಲ್ಲಿಕಾರ್ಜುನಾ.॥ ೨೪೦ ॥

೧೪೧೮

ಜಲದಲ್ಲಿ ನೊರೆ ತೆರೆ ಬುದ್ಬುದವಿದ್ದಂತೆ,
ಕನಕದಲ್ಲಿ ಅಲಂಕಾರವಿದ್ದಂತೆ,
ಬೀಜದಲ್ಲಿ ಎಲೆ ಶಾಖೆ ಬೀಜವಿದ್ದಂತೆ
ಒಂದೆ ವಸ್ತುವಿನಲ್ಲಿ ಗುಣತ್ರಯವಾದವು;
ಗುಣತ್ರಯದಿಂದ ಮಲತ್ರಯಂಗಳಾದವು;
ಮಲತ್ರಯಂಗಳಿಂದ ಲೋಕರಚನೆ ಹೆಚ್ಚಿತ್ತು;
ಲೋಕರಚನೆ ಹೆಚ್ಚಿದಲ್ಲಿ ಪಾಪಪುಣ್ಯಂಗಳಾದವು;
ಪಾಪಪುಣ್ಯಂಗಳಿಂದ ಸ್ವರ್ಗನರಕಂಗಳಾದವು;
ಸ್ವರ್ಗನರಕಂಗಳಿಂದ ಭೇದವಾಗಿಯಾಗಿ ಕೆಟ್ಟ ಕೇಡ ನೋಡಿ
ತನ್ನ ಮಾಯೆಯ ಸೆಳೆದನು.
ಮಾಯೆಯ ಸೆಳೆದಲ್ಲಿ, ಸರ್ವವು ಲಯವಾಗಿ ನೀನೊಬ್ಬನೆ
ಉಳಿದೆ.
ಉಳಿದೆ ಎಂಬುದು ಶಾಸ್ತ್ರಪ್ರಸಿದ್ಧ-
ಸಮುದ್ರದ ನೀರು ಮೇಘವಾಗಿ, ಮೇಘದ ನೀರು

ಹಳ್ಳಕೊಳ್ಳವಾಗಿ, ಮತ್ತೆ ಸಮುದ್ರವಾದಂತೆ.
ಅದರಂತೆ ಒಂದೆ ಸ್ಥಲದಲ್ಲಿ ನಿಂತು ನೋಡಲೊಲ್ಲದೆ,
ಅನೇಕ ಸ್ಥಾನಗಳ ಧರಿಸಿ ಹೋಗುವುದದು ಉಚಿತವಲ್ಲ, ಎಲೆ ಜೀವವೆ
ಎಂದು ಬೋಧಿಸಿದ ಸದ್ಗುರು ಚೆನ್ನಬಸವಣ್ಣನ ಪಾದಕ್ಕೆ
ನಮೋ ನಮೋ ಎಂದು ಬದುಕಿದೆನಯ್ಯಾ,
ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೪೧ ॥

೧೪೧೯

ನಿನ್ನ ದೇಹ ನೋಡುವಡೆ ಪಂಚಭೌತಿಕ,
ನೀ ನೋಡುವಡೆ ಜೀವಾಂಶಿಕ;
ನಿನ್ನ ಧನ ನೋಡುವಡೆ ಕುಬೇರನದು,
ನಿನ್ನ ಮನ ನೋಡುವಡೆ ವಾಯುವ ಕೂಡಿದ್ದು ;
ವಿಚಾರಿಸಿ ನೋಡಿದಡೆ ಬ್ರಹ್ಮನದು.
ನಾ ಮಾಡುವೆನೆಂದಡೆ ಅದು ಆದಿಶಕ್ತಿ ಚೈತನ್ಯ ;
ನಾ ತಿಳಿದಿಹೆನೆಂದಡೆ ಅದು ಜ್ಞಾನದ ಬಲ.
ಆ ಜ್ಞಾನವು ನಾ ಎಂದಡೆ ಇದಿರಿಟ್ಟು ತೋರುತ್ತದೆ.
ತೋರುವ ಆನಂದಮೂರ್ತಿ ನಾ ಎಂದಡೆ
ಅದು ಸಾಕ್ಷಿಯಾಗಿ ನಿಂದಿತ್ತು.
ಸಾಕ್ಷಿ ಎಂಬುದಮು ತಿಳಿದು ತಿಳಿಯದೆಂಬುದಕ್ಕೆ,
ಬಯಲಾದ ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನ ತಂದೆಯು.
॥ ೨೪೨ ॥

೧೪೨೦

ತಿಳಿದು ತಿಳಿದು ಸಾಕ್ಷಿಯಾದಡೆ, ತಾ ಉಳಿಯಲಿಲ್ಲ ನೋಡಯ್ಯಾ.
ಉಳಿಯಲಿಲ್ಲ ಉಳಿಯಲಿಲ್ಲವೆಂದಡೆ, ಈ ಶಬ್ದವೆಲ್ಲಿಹದಯ್ಯಾ?
ವಿಚಾರದಿಂದ ಒಳಗಾಗುವುದು, ಅವಿವೇಕದಿಂದ ದೂರಾಗುವುದು.
ಸರ್ವ ಜಗದ್ರೂಪು ನಿಮ್ಮದೆಂದು ನಂಬಿ,
ಸಕಲಲೋಕಾಲೋಕಕ್ಕೆ ಕೈಮುಗಿದೆ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೪೩ ॥

೧೪೨೧

ಉಪದೇಶವ ಮಾಡಿದಲ್ಲಿ ಗುರುವೆನಿಸಿದನು.
ಕಾಮಿತ ಫಲಂಗಳ ಕೊಟ್ಟಲ್ಲಿ ಲಿಂಗಮೂರ್ತಿ ಎನಿಸಿದನು.
ನಿತ್ಯನಿರ್ವಾಣದ ಸಕೀಲವ ತೋರಿದಲ್ಲಿ ಜಂಗಮವೆನಿಸಿದನಯ್ಯಾ,
ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೪೪ ॥

೧೪೨೨

ಲಿಂಗ ನೋಡುವಡೆ ಮೈಗೊಟ್ಟುದಯ್ಯಾ
ಷೋಡಶೋಪಚಾರಂಗಳಿಗೆ.
ಜಂಗಮ ನೋಡುವಡೆ, ಮೈಗೊಟ್ಟನಯ್ಯಾ ನಿರಾಕಾರಕ್ಕೆ.
ಗುರು ನೋಡುವಡೆ, ಭವದ ಬೇರು ಅಳಿಯಬೇಕೆಂದು
ಸಾಕಾರವಾಗಿ ನಿಂದ ನೋಡಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ. ॥ ೨೪೫ ॥

೧೪೨೩

ಗುರುವಿನಿಂದ ಲಿಂಗನ ಕಂಡೆನಲ್ಲದೆ
ಲಿಂಗದಿಂದ ಲಿಂಗವ ಕಾಣಲಿಲ್ಲಯ್ಯಾ.
ಲಿಂಗದಿಂದ ಫಲಪದಂಗಳ ಕಂಡೆನಲ್ಲದೆ
ಫಲಪದಗಳಿಂದ ಫಲಪದಂಗಳ ಕಾಣಲಿಲ್ಲಯ್ಯಾ.
ಜಂಗಮದಿಂದ ಮೋಕ್ಷವ ಕಂಡೆನಲ್ಲದೆ
ಮೋಕ್ಷದಿಂದ ಮೋಕ್ಷವ ಕಾಣಲಿಲ್ಲಯ್ಯಾ, ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನ. ॥ ೨೪೬ ॥

೧೪೨೪

ಕೆರೆಯ ನೀರು, ಮರದ ಪುಷ್ಪ ಧರಿಸಿವಡೇನು ಅಯ್ಯಾ,
ಆಗುವುದೆ ಆಗುವುದೆ ಲಿಂಗಾರ್ಚನೆ?
ನೀರೆರೆಯಲಿಕ್ಕಾತನೇನು ಬಿಸಿಲಿನಿಂದ ಬಳಲಿದನೆ?
ಪುಷ್ಪದಿಂದ ಧರಿಸಲಿಕ್ಕಾತನೇನು ವಿಟರಾಜನೆ?
ನಿನ್ನ ಮನವೆಂಬ ನೀರಿಂದ,
ಜ್ಞಾನವೆಂಬ ಪುಷ್ಪದಿಂದ ಪೂಜಿಸಬಲ್ಲಡೆ
ಭಕ್ತನೆಂಬೆ, ಮಹೇಶ್ವರನೆಂಬೆ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೪೭ ॥

೧೪೨೫

ದೇಹ ಕಂದಿದಡೇನು? ದೇಹ ಇಂದುವಿನಂತಾದಡೇನು?
ದೇಹ ಬಾತು ಬಿದ್ದಡೇನು?
ದೇಹ ಇದ್ದ ಯೋಗ್ಯತೆಗೆ ಮೈಗೊಟ್ಟಡೇನಯ್ಯಾ?
ಅಂತರಂಗ ಶುದ್ಧವಾದ ಬಳಿಕ ಹೇಗಿದ್ದಡೇನಯ್ಯಾ?
ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೪೮ ॥

೧೪೨೬

ದೇಹವ ನಿರ್ದೇಹಿಗೊಪ್ಪಿಸಿದಲ್ಲಿ ದೇಹ ನಿರ್ದೇಹವಾಗಿತ್ತು.
ಮನವ ಲಿಂಗಕ್ಕರ್ಪಿಸಿದಲ್ಲಿ ಮನ ಲಿಂಗವಾಗಿ ಮನ ಲೀಯವಾಯಿತ್ತು.
ಭಾವವ ತೃಪ್ತಿಗರ್ಪಿಸಿ ಭಾವ ಬಯಲಾಯಿತ್ತಯ್ಯಾ.
ದೇಹ ಮನ ಭಾವವಳಿದಲ್ಲಿ ಕಾರಣಕಾಯ ಅಕಾಯವಾಯಿತ್ತು.
ಎನ್ನ ದೇಹದ ಸುಖವ ಲಿಂಗ ಭೋಗಿಸುವುದಾಗಿ,
ಶರಣಸತಿ ಲಿಂಗಪತಿ ಎಂಬ ಭಾವ ಅಳವಟ್ಟಿತ್ತಯ್ಯಾ,
ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೪೯ ॥

೧೪೨೭

ಗಂಧವೃಕ್ಷವ ಕಡಿದಲ್ಲಿ
ನೊಂದೆನೆಂದು ಗಂಧವ ಬಿಟ್ಟಿತ್ತೆ ಅಯ್ಯಾ?
ಚಂದ ಸುವರ್ಣವ ತಂದು ಕಾಸಿ ಬಡಿದಡೆ,
ನೊಂದೆನೆಂದು ಕಳಂಕ ಹಿಡಿಯಿತ್ತೆ ಅಯ್ಯಾ?
ಸಂದು ಸಂದು ಕಡಿದ ಕಬ್ಬು ಯಂತ್ರದಲ್ಲಿಟ್ಟು ತಿರುಹಿ ಕಾಸಿವಡೆ,
ನೊಂದೆನೆಂದು ಸಿಹಿಯಾಗುವುದ ಬಿಟ್ಟಿತ್ತೆ ಅಯ್ಯಾ?
ತಂದು ತಂದು ಭವಕಟ್ಟಿಬಿಟ್ಟಡೆ,
ನಿಮ್ಮರಿವು ಬಿಟ್ಟೆನೆ ಅಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೫೦ ॥

೧೪೨೮

ಸ್ಥೂಲವಾದಡೇನು ಸೂಕ್ಷ್ಮವಿಲ್ಲದನ್ನಕ್ಕರ?
ಕಳೆಯುಳ್ಳವನಾವಡೇನು ಕುಲವಿಲ್ಲದನ್ನಕ್ಕರ?

ಜಲವಾದಡೇನು ಸ್ಥಲಯೋಗ್ಯವಿಲ್ಲದನ್ನಕ್ಕರ?
ಆ ಕಲಿ ಮಹಿಮನಾದಡೇನು,
ಕಲಾಮೂರ್ತಿ ಇಷ್ಟಲಿಂಗವಿಲ್ಲದನ್ನಕ್ಕರ,
ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೫೧ ॥

೧೪೨೯

ಎಂದಿಪ್ಪೆನಯ್ಯಾ ಲಿಂಗಪೂಜೆಯ ಮಾಡುತ್ತ?
ಎಂದಿಪ್ಪೆನಯ್ಯಾ ಜಂಗಮವನರ್ಚಿಸುತ್ತ?
ಎಂದಿಪ್ಪೆನಯ್ಯಾ ಪ್ರಮಥಸಹ ಭೋಜನ ಪಂಙ್ತಿಯಲ್ಲಿ?
ಎಂದಿಪ್ಪೆನಯ್ಯಾ, ನಮ್ಮ ಚೆನ್ನಬಸವಣ್ಣನ
ಪಾದೋದಕ ಪ್ರಸಾದವ ಸೇವಿಸುತ್ತ
ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೫೨ ॥

೧೪೩೦

ನಂಬಿದೆನಯ್ಯಾ ಲಿಂಗವ ನೋಡಿ;
ನಂಬಿದೆನಯ್ಯಾ ಲಿಂಗದೊಡಗೂಡಿ.
ನಂಬಿದೆನಯ್ಯಾ ನಾನೆ ಚೆನ್ನಬಸವಣ್ಣನೆಂದು,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೫೩ ॥

೧೪೩೧

ಇನ್ನು ಹೊಗಳುವೆನಯ್ಯಾ, ಲಿಂಗದ ಕುಲಾವಳಿಯನ್ನೆತ್ತಿ;
ಇನ್ನು ಹೊಗಳುವೆನಯ್ಯಾ, ಜಂಗಮದ ಜ್ಞಾನವ ಕಂಡು;
ಇನ್ನು ಹೊಗಳುವೆನಯ್ಯಾ,
ಚೆನ್ನಬಸವಣ್ಣನೆಂಬ ಪರಾತ್ಪರ ಗುರುಮೂರ್ತಿಯ,
ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೫೪ ॥

೧೪೩೨

ಮಾಡಬೇಕು ಮಾಡಬೇಕು ಮನವೊಲಿದು ಲಿಂಗಪೂಜೆಯ.
ನೋಡಬೇಕು ನೋಡಬೇಕು ಮನವೊಲಿದು ಲಿಂಗ ಸಂಭ್ರಮವ.
ಹಾಡಬೇಕು ಹಾಡಬೇಕು ಮನವೊಲಿದು ಲಿಂಗಸ್ತೋತ್ರವ.
ಕೂಡಬೇಕು ಕೂಡಬೇಕು ಕಪಿಲಸಿದ್ಧಮಲ್ಲಿಕಾರ್ಜುನಾ,
ನಿಮ್ಮ ಗುರು ಚೆನ್ನಬಸವಣ್ಣ ಕೊಟ್ಟ ಇಷ್ಟಲಿಂಗದಡಿಯಲ್ಲಿ.
॥ ೨೫೫ ॥

೧೪೩೩

ಮಾಡುವೆನಯ್ಯಾ ಪೂಜೆಗೆಂದು ದ್ರವ್ಯನಾಶವನು.
ನೋಡುವೆನಯ್ಯಾ ಲಿಂಗಸಂಭ್ರಮಕೆಂದು ಪೂದೋಟಗಳ.
ಹಾಡುವೆನಯ್ಯಾ ನಾಟ್ಯರಚನೆಗೆಂದು ಗಾನವ.
ಕೂಡುವೆನಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನ ಇಷ್ಟಲಿಂಗದಲ್ಲಿ.
|| ೨೫೬ ||

೧೪೩೪

ಮದ್ದು ತಿಂದ ಮನುಜನಂತೆ ವ್ಯರ್ಥಹೋಗದಿರಾ, ಮನವೆ,
ವರ್ಷದಲಾದಡೂ ಒಂದು ದಿವಸ ಶಿವರಾತ್ರಿಯ ಮಾಡು
ಮನವೆ.
ಕಪಿಲಸಿದ್ಧಮಲ್ಲೇಶನೆಂಬ ಇಷ್ಟಲಿಂಗಕ್ಕೆ. || ೨೫೭ ||

೧೪೩೫

ಲೋಕದಲ್ಲಿ ಸಾರ್ವಭೌಮರು ತಮ್ಮ ರಾಣಿಯರಿಗೆ
ಮೈಗೊಟ್ಟರಲ್ಲದೆ
ಮೂಲೋಕದರಸ ಎನ್ನ ಕಪಿಲಸಿದ್ಧಮಲ್ಲೇಶನೆಂಬ
ಇಷ್ಟಲಿಂಗಕ್ಕೆ ಮೈಗೊಡದೆ ಭವಕ್ಕೀಡಾದರು,
ಮನವೆ, ತಿಳಿ ನೀನು ಕಂಡಾ. || ೨೫೮ ||

೧೪೩೬

ನೋಡಯ್ಯಾ, ನೋಡಯ್ಯಾ, ಲಿಂಗದ ಮಹಿಮೆಯ;
ತಾನು ಸೋಂಕಿ ಎನ್ನ ಕಳೆದ, ಎನ್ನ ಸೋಂಕಿ ತಾನೆ ಉಳಿದ.
ನೋಡಯ್ಯಾ, ನೋಡಯ್ಯಾ, ಲಿಂಗದ ಮಹಿಮೆಯ:
ತಾನೆಂಬುದನುಳುಹದೆ ನಿಶ್ಶೂನ್ಯನಾಗಿ ನಿಂದ ನೋಡಯ್ಯಾ,
ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ. || ೨೫೯ ||

### ೧೪೩೭

ಲೋಕದಲ್ಲಿಪ್ಪ ವಿಟರೆಲ್ಲ ವಾರಾಂಗನೆಯ ನೋಡಿದರಲ್ಲದೆ,
ನಮ್ಮ ವಾರಾಂಗನನೊಬ್ಬರೂ ನೋಡಲಿಲ್ಲಯ್ಯಾ.
ಲೋಕದಲ್ಲಿಪ್ಪ ಕುಶಲರೆಲ್ಲ ಜಂಗಮದೊಂದಿಗೆ ನುಡಿದರಲ್ಲದೆ,
ಎಮ್ಮ ಲಿಂಗದೊಂದಿಗೊಬ್ಬರು ನುಡಿದವರಿಲ್ಲ ಕಂಡಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ, ನಾನೊಬ್ಬನೆ ಪ್ರಮಥರ ಮುಂದೆ.
॥ ೨೯೦ ॥

### ೧೪೩೮

‘ಲಿಂಗಾರ್ಚನಾತ್ಪರಂ ಪೂಜ್ಯಂ’ ಎಂಬ ಶ್ರುತಿಶಾಖೆ
ಇಂದನುಭವಕ್ಕೆ ಬಂದಿತ್ತಯ್ಯಾ.
“ಲಿಂಗಾಂಗೀ ಪರಮಶುಚಿಃ’ ಎಂಬ
ಸಾಮವೇದ ಶಾಖೆ ಸಮನಿಸಿತ್ತಯ್ಯಾ.
ಮುನ್ನ ಮಾಡಿದ್ದೇ ಮಾಡಿದೆ,
ಹೋಮವನಿನ್ನು ಮಾಡಿದಡೆ ತಲೆದಂಡ,
ಕಪಿಲಸಿದ್ಧಮಲ್ಲಿಕಾರ್ಜುನಾ! ॥ ೨೯೧ ॥

### ೧೪೩೯

ಲಿಂಗ ಬಂದು ಲಿಂಗಗಳನಳಿಯಿತ್ತಯ್ಯ ಲಿಂಗವೆ.
ಲಿಂಗ ಬಂದು ಲಿಂಗಗಳನೀಡಾಡಿತ್ತಯ್ಯ ಲಿಂಗವೆ.
ಲಿಂಗ ಬಂದು ಲಿಂಗ ಉಳಿಯಿತ್ತಯ್ಯ.
ಲಿಂಗವೆ ಗುರು ಲಿಂಗವೆ ಜಂಗಮ ಲಿಂಗವೆ ನಾನು ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೯೨ ॥

### ೧೪೪೦

ದರ್ಪಣದಲ್ಲಿ ಮುಖವ ನೋಡುವರಲ್ಲದೆ,
ದರ್ಪಹರನಲ್ಲಿ ಮುಖವ ನೋಡುವರೊಬ್ಬರೂ ಇಲ್ಲ,
ನೋಡಯ್ಯಾ.
ನ್ಯಾಯದಲ್ಲಿ ದ್ರವ್ಯವ ಕೊಡುವರಲ್ಲದೆ,
ನ್ಯಾಯಾತೀತನ ಪೂಜೆಗೆ ಒಬ್ಬರೂ ಭಂಡಾರಬೀಡಾವಲಿಲ್ಲ;
ಕಪಿಲಸಿದ್ಧಮಲ್ಲಿಕಾರ್ಜುನಗಳ್ಳರು! ॥ ೨೯೩ ॥

೧೪೪೧

ಪುಣ್ಯಪಾಪವೆಂಬುದದಾರಿಗರಿಕೆಯುಂಟಯ್ಯಾ?
ಪುಣ್ಯವಂತಿರಲಿ, ಪಾಪವಂತಿರಲಿ;
ಪೂಜಿಸಿ ಪಡೆವುದದು ಪುಸಿಯಲ್ಲ.
ಇದು ಕಾಕುಭಾಷೆ ಎಂದಲ್ಲಿ,
ಪೂಜಿಸಿದವಂಗೆ ಸಂಪದಾದಿಶಕ್ತಿಮುಕ್ತಿ ಬರುವುದೇನಿಲ್ಲ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೬೪ ॥

೧೪೪೨

ಆಗುವುದಾದಡೆ ನಿನ್ನ ಪೂಜೆಯದೇಕೊ, ಲಿಂಗ ಲಿಂಗಯ್ಯಾ?
'ಯಥಾ ಭಾವಸ್ತಥಾ ದೇವಃ' ಎಂಬ ಭಾವವಿದ್ದೆಡೆಯಲ್ಲಿ,
ಆದಂತಾಗಲಿ, ಹೋದಂತೆ ಹೋಗಲಿ,
ನಿಮ್ಮ ಪೂಜಿಸಿದವರಿಗೆ ಸಂಪದಾದಿ ಮಹದೈಶ್ವರ್ಯ ತಪ್ಪದು ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೬೫ ॥

೧೪೪೩

ಅಂಗಕ್ಕೆ ಕೊಡುವ ಭೋಗಂಗಳ ಲಿಂಗಕ್ಕೆ ಕೊಟ್ಟು ನೋಡಿರಯ್ಯಾ.
ಅಂಗಕ್ಕೆ ಕೊಟ್ಟ ಭೋಗಂಗಳು ಲಿಂಗಂಗಳಾದವು.
ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ,
ಎನ್ನ ಭೋಗಂಗಳು ಲಿಂಗಭೋಗಂಗಳು. ॥ ೨೬೬ ॥

೧೪೪೪

ಅಂಗವೆಂದಡೆ ಅಜ್ಞಾನ, ಲಿಂಗವೆಂದಡೆ ಸುಜ್ಞಾನ.
ಲಿಂಗವಿಡಿದು ಆಚರಿಸುವುದಲ್ಲದೆ ಅಂಗವಿಡಿದು
ಆಚರಿಸಬಾರದು,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೬೭ ॥

೧೪೪೫

ಲಿಂಗವಲ್ಲಿ ಬೆರೆವಲ್ಲಿ ಬಳಿಕ ಅಂಗದಲ್ಲಿ ಬೆರೆಯಲುಂಟೆ ದೇವಾ?
ಅಲ್ಲಲ್ಲ.
ಅಂಗದಲ್ಲಿ ಬೆರೆದ ಬಳಿಕ ಲಿಂಗ[ದಲ್ಲಿ] ಬೆರೆಯಲುಂಟೆ ದೇವಾ,
ಕಪಿಲಸಿದ್ಧಮಲ್ಲಿಕಾರ್ಜುನಾ,
ನಿಮ್ಮ ಪೂಜಿಸಿದ ಫಲ ಪಕ್ವವಾಗದನ್ನಕ್ಕ? ॥ ೨೬೮ ॥

೧೪೪೬

ಭೂಮಿ ಒಂದೆಂದಡೆ ಬೆಳೆವ ವೃಕ್ಷ ಹಲವು ತೆರನುಂಟು.
ಉದಕ ಒಂದೆಂದಡೆ ಸವಿಸಾರದ ಸಂಪದ ಬೇರುಂಟು.
ನಿನ್ನೊಳಗು ನಾನಾದಡೆ ತಾಮಸದ ರಾಗವಿರಾಗವಾಗದು.
ಕಪಿಲಸಿದ್ಧಮಲ್ಲಿಕಾರ್ಜುನಲಿಂಗವೆಂಬ ಪುರುಷರತಿ ಕೂಟಸ್ಥವಿಲ್ಲ.
॥ ೨೬೯ ॥

೧೪೪೭

ಎಲೆ ದೇವಾ, ಒಂದು ಹೋಗಿ ಎರಡಾದುದು,
ಎರಡು ಹೋಗಿ ಮೂರಾದುದು,
ಮೂವತ್ತಾರಾಗಿ ಮೂರರಲ್ಲಿ ಆಡಿದುದು;
ಆಡಿ ಆಡಿ ಅದೆ ಲಿಂಗವಾಯಿತ್ತು.
ನಮ್ಮ ಗುರು ಚೆನ್ನಬಸವಣ್ಣನೊಂದು ಕೊಟ್ಟಲ್ಲಿ
ಎಲ್ಲಾ ಒಂದೆ ಆಯಿತ್ತು,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೭೦ ॥

೧೪೪೮

ಅಂಗ [ಲಿಂಗ] ಒಂದಾದ ಬಳಿಕ
[ಅಂ] ಗೇಂದ್ರಿಯಂಗಳಾಚರಿಸಲಾಗದು.
ಅಂಗೇಂದ್ರಿಯಂಗಳು ಹೋಗಿ ಲಿಂಗೇಂದ್ರಿಯಂಗಳಾಗಿ
ಆಚರಿಸುವುದು.
'ಘೃತೋ ಭೂತ್ವಾ ಕಥಂ ಕ್ಷೀರಂ ಭವತ್ಯೇವಂ ವರಾನನೇ'
ಎಂಬಾಗಮೋಕ್ತಿ ಪುಸಿಯಾಯಿತ್ತೆ?
ಆಗಿ ಆಚರಿಸಿದಡೆ ಭವ ಹಿಂಗದು ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೭೧ ॥

೧೪೪೯

ವೀರನಾದಡೆ ವೈರಿಗಳ ಕಾಟ ಬಹಳವಯ್ಯಾ,
ದಾನಶೂರನಾದಡೆ ಯಾಚಕರ ಗೋಳು ಬಹಳವಯ್ಯಾ.
ಅತಿರೂಪನಾದಡೆ ಅಂಗನೆಯರ ಕಾಟ ವಿಶೇಷವಯ್ಯಾ.
ಮೂರರಲ್ಲಿ ನಿಂತಡೆ ಮಲತ್ರಯಂಗಳ ಘೋರ ಹೆಚ್ಚಾಯಿತಯ್ಯಾ.
ಅಂಗದಲ್ಲಿ ಲಿಂಗಸಂಬಂಧವಾಗಬಾರದು;
ಆದ ಬಳಿಕ ವೀರನಾಗಿ ವಿಷಯಂಗಳನಳಿವುದು,
ಬಹುಘೋರವು ಬಹುಘೋರವು ನೋಡಯ್ಯಾ,
ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೮೨ ॥

೧೪೫೦

ಇಂತೀ ಭಕ್ತಸ್ಥಲದ ವರ್ಮವನು ಲೋಕಕ್ಕೆ
ನಿಶ್ಚಿಂತವ ಮಾಡಿ ತೋರಿದ,
ತನ್ನ ಪದದುನ್ನತವ ಏಕೈಕಸದ್ಭಾವರಿಗಿತ್ತ,
ಎನ್ನ ಗುರು ಚೆನ್ನಬಸವಣ್ಣನು.
ಬಸವಣ್ಣ ಚೆನ್ನಬಸವಣ್ಣನೆಂಬ ಮಹಾಸಮುದ್ರದೊಳಗೆ
ಹರುಷಿತನಾದೆನಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ.
॥ ೨೮೩ ॥

೧೪೫೧

ಮೂರಕ್ಕೆ ಮೂರಾಗಿ ಮೂರು ತನ್ನಯ ಸೀಮೆ,
ಮೂರೊಂದಾದನ್ನೆ ಬಸವಣ್ಣನು.
ಆರು ಮನೆಯಲ್ಲಿದ್ದು ಆರಾರರಿಂ ಮೇಲೆ
ಮೀರಿಪ್ಪ ಭಕ್ತಿಯಲಿ ತೋರಿಪ್ಪುದೀಗ ತನ್ನ ರೂಪು.
ರೂಪಾರೂಪು ಚೆನ್ನಬಸವಣ್ಣನಿಂದ ಆನು ನೀನಾದೆನ್ನೆ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೮೪ ॥

೧೪೫೨

ಗುರುಲಿಂಗ ಬಸವಣ್ಣ, ಚರಲಿಂಗ ಬಸವಣ್ಣ,
ಕರುಣಾಕರನು ಚೆನ್ನಬಸವಣ್ಣನು.

ಶರಣಸ್ಥಲದ ಕಲ್ಪ ಸುರಭೂಜ ಫಲವಿತ್ತ
ಕರುಣಾಕರನು ಚೆನ್ನಬಸವಣ್ಣನು.
ಆ ಬಸವಣ್ಣನ ಕೃಪೆಯಿಂದ ಆದಿ ಅಕ್ಷರವರಿದು
ಸಾಧಿಸಿದೆ ನಿಮ್ಮುವನು ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ.
॥ ೨೭೫ ॥

೧೪೫೩

ಯೋಗಭೂಷಣ, ನಿಮ್ಮ ಆದಿ ಅಕ್ಷರಭೇದ
ಆದಿಯಾಧಾರಂಗಳಿಲ್ಲದಂದು,
ಆನಂದಸ್ಥಾನದಲ್ಲಿಪ್ಪ ಗುರು ಬಸವಣ್ಣ,
ತಾನೆನ್ನ ಕರುಣದಿಂ ನಿತ್ಯನೆನಿಸಿ;
ಯೋಗಸಿದ್ಧಾಂಗದಲ್ಲಾದ ಪಂಚಬ್ರಹ್ಮದಿಂ
ದಾಗಾದೆನ್ನ ಚೆನ್ನಬಸವ ತಂದೆ;
ಯೋಗಮೂರುತಿಯೆ ನೀನೆನ್ನ ಗುರುವಾಗಿ
ಶಿವಯೋಗಿಯಾನಾದೆನಯ್ಯಾ.
ಸಿನ್ನವರ ಹೊರೆಗೈದೆ ಯೋಗಿಗುರು ಪ್ರಭುರಾಯ
ನಾ ನಿಮ್ಮ ಕರುಣದಲ್ಲಿ.
ಶಿವಯೋಗಮುದ್ರೆಯನೆ ನೆನೆದು ಸುಖಿಯಾದೆನ್ನೈ
ಆಗಮಕ್ಕೊಳಗಾದ ಆಗಮಕೆ ಹೊರಗಾದ
ಆನಂದಸ್ಥಾನದಲಿ ಸ್ವಯವಾದೆನ್ನೈ ದೇವ
ಯೋಗಜ್ಞಾನ ಕಪಿಲಸಿದ್ಧಮಲ್ಲಿನಾಥನ ಕರುಣ ನಿಮಗಾಯಿತ್ತು ,
ಶ್ರೀಗುರು ಚೆನ್ನಬಸವಣ್ಣ ತಂದೆ. ॥ ೨೭೬ ॥

೧೪೫೪

ಸ್ಫಟಿಕದ ಘಟದೊಳಗೀಗ ಸಿಟಿಲಾಕ್ಷನುಮಾಟ
ಸ್ಫಟಿಕದಲಿ ದೀಪ್ತಿಸಿತ್ತಯ್ಯ ದೆಸೆಯು.
ದೆಸೆಗಾಗಿಯೂ ಶಿಶುವಿನ ಮಸ್ತಕದಲ್ಲಿ
ಒಸರುತ್ತಿದ್ದುದು ಭಕ್ತಿ ದೆಸೆದೆಸೆಯಲಿ.
ಬಸವ ಚೆನ್ನಬಸವ ಪ್ರಭು ಶರಣೆಂದು
ಇದ್ದೆಸೆಗೆಟ್ಟೆ ನಾನೀಗ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೭೭ ॥

೧೪೫೫

ಕುಂಬಾರರೆಲ್ಲರು ಗುಂಡಯ್ಯನಾಗಬಲ್ಲರೆ?
ಮಡಿವಾಳರೆಲ್ಲರು ಮಾಚಯ್ಯನಾಗಬಲ್ಲರೆ?
ಜೇಡರೆಲ್ಲರು ದಾಸಿಮಯ್ಯನಾಗಬಲ್ಲರೆ?
ಎನ್ನ ಗುರು ಕಪಿಲಸಿದ್ಧಮಲ್ಲೇಶ್ವರಯ್ಯಾ,
ಪ್ರಾಣಿಗಳ ಕೊಂದು ಪರಿಹರಿಸಬಲ್ಲಡೆ
ತೆಲುಗ ಜೊಮ್ಮಯ್ಯನಾಗಬಲ್ಲರೆ? ॥ ೨೭೮ ॥

೧೪೫೬

ಶುದ್ಧಗುರು ಬಸವಣ್ಣ, ಸಿದ್ಧಗುರು ಚೆನ್ನಬಸವಣ್ಣ,
ಪ್ರಸಿದ್ಧಗುರು ಪ್ರಭುರಾಯನು.
ತನುತ್ರಯ ಮಲತ್ರಯ ಆರನತಿಗಳೆದು,
ಲಿಂಗತ್ರಯ ಪ್ರಸಾದ ಮೂರನು ಪರಿಭವಿಸಿ ವಶಮಾಡಿ
ಎನ್ನ ರಕ್ಷಿಸಿದ ಬಸವ, ಚೆನ್ನಬಸವ, ಪ್ರಭು ಶರಣೆಂದು
ಬದುಕಿದೆನಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ. ॥ ೨೭೯ ॥

೧೪೫೭

ಆದಿಯಾಧಾರದಲ್ಲಿ ಆದಿಯಿಲ್ಲದ ಮುನ್ನ,
ಅನಾದಿ ಸಂಸಿದ್ಧನಯ್ಯಾ ಬಸವಣ್ಣನು.
ಲೋಕವೀರೇಳರ ಆಕಾರವಿಲ್ಲದಲ್ಲಿ,
ಏಕೈಕರೂಪನಯ್ಯಾ ಚೆನ್ನಬಸವಣ್ಣನು.
ಸಾಕಾರದಿಂದತ್ತ ನಿರ್ಮಾಯ ಬಂದನು,
ಲೋಕಪಾವನಮೂರ್ತಿ ಪ್ರಭುರಾಯನು.
ಇಂತೆನ್ನ ಭವದ ಬೇರ ಹರಿದು ಹದುಳ ಮಾಡಿ
ಶರಣರೊಳಗಿರಿಸಿದ ಗುರು ಇಂತು ಮೂವರಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ. ॥ ೨೮೦ ॥

೧೪೫೮

ಇರುವರಯ್ಯಾ, ಒಂದು ಲಕ್ಷ ಶೀಲಸಂಪನ್ನರು.
ಇರುವರಯ್ಯಾ, ಒಂದು ಲಕ್ಷ ವ್ರತಸಂಪನ್ನರು.
ಇರುವರಯ್ಯಾ, ಒಂದು ಲಕ್ಷ ಅರ್ಥಸಂಪನ್ನರು,

ಪ್ರಾಣಾಭಿಮಾನ ವೈರಾಗ್ಯದಿಂದ ಕೊಟ್ಟವರು.
ಇವರೆಲ್ಲರು ಫಲಸಮರ್ಥರಲ್ಲದೆ
ಲಿಂಗಸಮರ್ಥರು ಒಬ್ಬರೂ ಇಲ್ಲ,
ನೋಡಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನ ತಂದೆ. ॥ ೨೮೧ ॥

೧೪೫೯

ಸಿದ್ಧಾಂತಿಯ ಜ್ಞಾನ ಸಾಧನೆಯಲ್ಲಿ ಹೋಯಿತ್ತು.
ವೇದಾಂತಿಯ ಜ್ಞಾನ ವಾದದಲ್ಲಿ ಹೋಯಿತ್ತು.
ಕ್ರಿಯಾವಂತನ ಜ್ಞಾನ ನುಡಿಯಲ್ಲಿ ಹೋಯಿತ್ತು.
ವ್ಯವಹಾರಿಕನ ಜ್ಞಾನ ದ್ರವ್ಯಾರ್ಜನೆಯಲ್ಲಿ ಹೋಯಿತ್ತು.
ಇವೆಲ್ಲ ಭವಕ್ಕೆ ಕಾರಣವಲ್ಲದೆ,
ಭವರಹಿತ ಜ್ಞಾನವು ಸಾಧ್ಯವಾಗುವುದದು ದುರ್ಲಭವಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ: ॥ ೨೮೨ ॥

೧೪೬೦

ಅರಿವೆನೆಂದಡೆ 'ಸತ್ಯಂ ಜ್ಞಾನಮನಂತಂ ಬ್ರಹ್ಮ'
ಎಂಬ ಶ್ರುತಿ ಸಾರುತ್ತಿದೆ.
ಮರೆವೆನೆಂದಡೆ 'ಸಾಕ್ಷಾತ್ ಸಚ್ಚಿದಾನಂದಂ ಬ್ರಹ್ಮ'
ಎಂಬ ಕೈವಲ್ಯೋಪನಿಷತ್ ಘೋಷಿಸುತ್ತಿದೆ.
ಅರಿವು ವಸ್ತುಸ್ವರೂಪ, ಮರವು ಮಾಯಾಸ್ವರೂಪವೆಂದಡೆ
ಆನು ನಿರ್ವಯಲ ಸ್ವರೂಪನಾದೆ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೮೩ ॥

೧೪೬೧

ಒಂದೆ ವಸ್ತು ಭೇದವಾಗಿ ಕಾಡಿತ್ತಯ್ಯಾ:
ಎನ್ನ ದೇಹ ವಸ್ತುವೆಂದಡೆ, ಹಲವು ರೂಪಾಗಿ ತೋರಿತ್ತು,
ಕಾರಣ ವಸ್ತುವೆಂದಡೆ, ಸ್ಥೂಲಸೂಕ್ಷ್ಮ ತಿಳಿಯದೆ ಹೋಯಿತ್ತು,
ಕಾರಣಾತೀತವೆಂದಡೆ, ಸಾಕ್ಷಿಯಾಗಿ ಕ್ರಿಯಂಗಳ ಮಾಡಿಸಿತ್ತು.
ಸಾಕ್ಷಿಯಾಗಿ ನಿಂದರಿವೆ ವಸ್ತುವೆಂದಡೆ, ಚೇತನವಾಗಿ ನಿಂದಿತ್ತು.
ಇದನರಿವ ಬಲ್ಲಾತನೆ ಭಕ್ತ, ನೋಡಿ ಬಯಲಾದಾತನೆ ಜಂಗಮ,
ಬಯಲಾಗಿ ರೂಪಕ್ಕೆ ಬಂದಾತನೆ ಪ್ರಾಣಲಿಂಗಿ ನೋಡಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೮೪ ॥

೧೪೬೨

ತನು ಕೊಟ್ಟು ಭಕ್ತನಾದೆಹೆನೆಂದಡೆ,
ತನು ಮಲಭಾಂಡವಯ್ಯಾ.
ಮನ ಕೊಟ್ಟು ಭಕ್ತನಾದೆಹೆನೆಂದಡೆ,
ಮನ ವಾಯುಮಿತ್ರನಯ್ಯಾ.
ಧನ ಕೊಟ್ಟು ಭಕ್ತನಾದೆಹೆನೆಂದಡೆ,
ಎನ್ನ ಬಂಧುಗಳ ಭಾವ ಅದರಲ್ಲಯ್ಯಾ.
ಇವೆಲ್ಲ ಅಶುದ್ಧ ಪದಾರ್ಥಂಗಳ ಕೊಟ್ಟು ಭಕ್ತನಾಗುವೆನೆ?
ಆಗಲರಿಯೆನು.
ಮಾಡಿ ಮಾಡಿ ಭಕ್ತನಾಗಿಹೆನೆಂಬವರಿಗೆ ಕೊಟ್ಟು
ಭಕ್ತನಾಗುವೆನೆಂದಡೆ,
ನೀವೆಯಾಗಿ ನಿಂದಲ್ಲಿ ಕೊಡಲಿಕ್ಕಿಂಬಿಲ್ಲಾ,
ತೆಗೆದುಕೊಂಬುವಡೆ ಹಸ್ತವಿಲ್ಲಾ,
ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನ ತಂದೆ. ॥ ೨೮೫ ॥

೧೪೬೩

ಭೂಷಣವುಳ್ಳ ಜಂಗಮವ ಭೂಪಾಲ ಪೂಜಿಸುವ;
ವೇಷವುಳ್ಳ ಜಂಗಮವ ವೇಶಿ ಪೂಜಿಸುವಳು;
ವೇಷಧಾರಿ ಜಂಗಮವ ಲೋಕವೆಲ್ಲ ಪೂಜಿಸುವುದು;
ಜ್ಞಾನವುಳ್ಳ ಜಂಗಮವನಾರು ಪೂಜಿಸರು ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೮೬ ॥

೧೪೬೪

ಗುಣವ ನೋಡದೆ ಹೊಗಳುವ ಜಂಗಮವು ಬ್ರಹ್ಮನ ಸಂತತಿ.
ಕಾಡಿ ಬೇಡುವ ಜಂಗಮವು ನಾರಾಯಣನ ಸಂತತಿ.
ವ್ಯಾಪಾರಿಕ ಜಂಗಮವು ಈಶ್ವರನ ಸಂತತಿ.
ಹೊಗಳದೆ, ಕಾಡದೆ, ಬೇಡದೆ,
ಬಲಾತ್ಕಾರದಿಂದುಣ್ಣದೆ, ವ್ಯವಹರಿಸದೆ,
ಭಿಕ್ಷಮುಖದಿಂದುಂಬ ಜಂಗಮವ ನೋಡಿ,
ಎನ್ನ ಮನ ನೀವೆಂದು ನಂಬಿತ್ತಯ್ಯಾ,
ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೮೭ ॥

೧೪೬೫

ವೇಷಧಾರಿ ಜಂಗಮರನಂತರುಂಟು;
ವೇಷವಳಿದವರನೊಬ್ಬರನು ಕಾಣೆ.
ಬಿಂದುನಿಗ್ರಹದ ಜಂಗಮರನಂತರುಂಟು;
ಬಿಂದುರಹಿತ ಜಂಗಮರನೊಬ್ಬರನು ಕಾಣೆ.
ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ,
ಜಂಗಮವೆನ್ನಬೇಕು, ಪ್ರಭುವೇ ಜಂಗಮವೆನ್ನಬೇಕು.
ವೇಷಧಾರಿಯೆಂದು ಇನ್ನುಳಿದವರೊಪ್ಪಚ್ಚಿ ಅಳವಡೆಂದಡೆ,
ಅಳವಡದು ನೋಡಾ ನಿನ್ನ ಮುಂದೆ. ॥ ೨೮೮ ॥

೧೪೬೬

ಸುವರ್ಣಕ್ಕೆ ಅಲಂಕಾರಕ್ಕೆ ಭೇದವುಂಟೆ ಅಯ್ಯಾ?
ಜ್ಯೋತಿಗೆ ಪ್ರಕಾಶಕ್ಕೆ ಭೇದವುಂಟೆ ಅಯ್ಯಾ?
ನೂಲಿಂಗೆ ಪಟಕ್ಕೆ ಭೇದವುಂಟೆ ಅಯ್ಯಾ?
ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ,
ಚೆನ್ನಬಸವಣ್ಣಂಗೆ ನನಗೆ ಭೇದವುಂಟೆ ಅಯ್ಯಾ?
ಇಲ್ಲ ನೋಡಾ ಪ್ರಭುವೆ. ॥ ೨೮೯ ॥

೧೪೬೭

ಜನನ ಮರಣ ದೇಹಧರ್ಮವಲ್ಲದೆ ಜಂಗಮಕ್ಕೆಲ್ಲಿಹುದೋ!
ಕ್ಷುಧಾ-ತೃಷೆ ಪ್ರಾಣಧರ್ಮವಲ್ಲದೆ ಜಂಗಮಕ್ಕೆಲ್ಲಿಹುದೊ!
ಸುಖ-ದುಃಖ ಮನೋಧರ್ಮವಲ್ಲದೆ ಜಂಗಮಕ್ಕೆಲ್ಲಿಹುದೊ!
ಜ್ಞಾನಾಜ್ಞಾನಂಗಳು ಮುಮುಕ್ಷುವಿಂಗಲ್ಲದೆ,
ನಿಮ್ಮಲ್ಲಿ ಸಮರಸವಾದ ಸಚ್ಚಿದಾನಂದ ಶಿವಯೋಗಿ
ಜಂಗಮಕ್ಕೆಲ್ಲಿಹುದೊ, ಕಪಿಲಸಿದ್ಧಮಲ್ಲಿಕಾರ್ಜುನಾ! ॥ ೨೯೦ ॥

೧೪೬೮

ಜಂಗಮವ ಪೂಜಿಸುವಡೆ ಜಗದ್ಹಿತ ನೋಡಾ.
ನೋಡುವಡೆ ಏಕದೇಹಿ ನೋಡಯ್ಯಾ.

ಲಿಂಗವ ಪೂಜಿಸುವಡೆ,
'ಲಿಂಗಮಧ್ಯೇ ಜಗತ್ಸರ್ವಂ' ಎಂದು ಶ್ರುತಿ ಸಾರುತ್ತಿದೆ.
ಗುರುವ ಪೂಜಿಸುವಡೆ,
'ಗೀರಿತಿ ಜ್ಞಾನಂ ಗುರುಃ' ಎಂದು [ಶಬ್ದೋತ್ಪತ್ತಿ] ಉಂಟು.
ಇವೆಲ್ಲ ನನಗೆ ಅಸಾಧ್ಯ ನೋಡಾ.
ನಿನ್ನ ಪೂಜಿಸೆ ನಿನ್ನ ಕೈಕೊಂಬ ಪರಿಯ ಹೇಳಾ,
ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೯೧ ॥

೧೪೬೯

ಉದಕದಿಂದ ಅಭಿಷೇಕಂಗೈವಡೆ,
ಒದವಿದವು ನೋಡಾ ನಿನ್ನುತ್ತಮಾಂಗದಲ್ಲಿ
ಅರುವತ್ತೆಂಟುಕೋಟಿ ನದಿಗಳು.
ಪುಷ್ಪವ ಧರಿಸುವಡೆ,
ಚಂದ್ರಕಲಾ ಪ್ರಕಾಶವುಂಟು ನೋಡಾ ಜಟಾಗ್ರದಲ್ಲಿ.
ನೀರಾಜನವೆತ್ತುವಡೆ ಸೂರ್ಯಚಂದ್ರಾಗ್ನಿನೇತ್ರ ನೋಡಾ.
ಸ್ತೋತ್ರವ ಮಾಡುವಡೆ,
ವೇದಂಗಳು ಹೊಗಳಿ ಹೊಗಳಿ ಮೂಗುವಟ್ಟವು ನೋಡಾ.
ನಿನ್ನ ಮುಂಭಾಗದಲ್ಲಿ ನಾಟ್ಯವನಾಡುವಡೆ,
ಅದುರಿದವು ನೋಡಾ ಅಜಾಂಡಂಗಳು ನಿನ್ನ ಪಾದಸ್ಪರ್ಶನದಿಂದ.
ಚಾಮರವ ಬೀಸುವಡೆ,
ನೋಡಾ ಹನ್ನೊಂದು ಕೋಟಿ ರುದ್ರಕನ್ನಿಕೆಯರ ಕೈತಾಳಧ್ವನಿಯು.
ಚಂದನವ ಧರಿಸುವಡೆ,
ನೋಡಾ ಮಲಯಾಚಲನಿವಾಸಿ.
ವಸ್ತ್ರವ ಧರಿಸುವಡೆ,
ನೋಡಾ ವ್ಯಾಘ್ರಾಸುರ ಗಜಾಸುರ ಚರ್ಮವಾಸಿ.
ಭಸ್ಮವ ಧರಿಸುವಡೆ,
ನೋಡಾ ಕಾಮನಸುಟ್ಟ ಭಸ್ಮ ಅಂಗದಲ್ಲಿ.
ಅಕ್ಷತೆಯ ಧರಿಸುವಡೆ,
ನೋಡಾ ಅಜಾಂಡಂಗಳ ದಾಟಿದ ಮಸ್ತಕ.
ಅಂತಪ್ಪ ವಿಗ್ರಹವ ಪೂಜಿಸುವಡೆನ್ನಳವೆ?
ಶರಣನ ಮುಖದಿಂದ ಬಂದ ಪದಾರ್ಥವ ಕೈಕೊಂಡು
ಪೂಜಾ ಪ್ರೀತನಾಗಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ.॥ ೨೯೨ ॥

೧೪೭೦

ನೀ ಒಲಿವ ಪರಿಯ ತಿಳಿಯದು ನೋಡಯ್ಯಾ ಆರಿಂಗೆ-
ಬ್ರಾಹ್ಮಣನ ಮೃಷ್ಟಾನ್ನವ ಬಿಟ್ಟು, ಬೇಡನ ಮಾಂಸಕ್ಕೊಲಿದೆ ದೇವಾ;
ಸೌಂದರಚೋಳನ ನೈವೇದ್ಯವನೊಲ್ಲದೆ,
ಚೋಳಿಯಕ್ಕನ ಉಚ್ಛಿಷ್ಟಕ್ಕೆ ಮೈಗೊಟ್ಟೆ ದೇವಾ;
ಚೋಳನ ಭೋಜನವನೊಲ್ಲದೆ,
ಚೆನ್ನಯ್ಯನಕೂಡ ಜಾತಿಗೆಟ್ಟು ಮೈ ಗೊಟ್ಟು ಒಲಿದೆ ದೇವಾ;
ಒಲಿಸಿಹೆನೆಂದಡೆ ಅಸಾಧ್ಯ!
ಒಲಿಯನೆಂಬಡೆ, ಒಂದರಗಳಿಗೆ ಶ್ವೇತಗೆ ಪದವ ಕೊಟ್ಟೆ ದೇವಾ,
ಎಲೆ ಕಪಿಲಸಿದ್ಧಮಲ್ಲಿಕಾರ್ಜುನದೇವಾ. ॥ ೨೯೩ ॥

೧೪೭೧

ಒಲಿದು ಮೋಕ್ಷವ ಕೊಡಲಿ,
ಕೊಡದೆ ಭವಕ್ಕೆ ಬೀಜವ ಮಾಡಲಿ,
ಬಿಡೆ, ಬಿಡೆನಯ್ಯಾ ನಿಮ್ಮ ಪೂಜೆಯ;
ಬಿಡೆ, ಬಿಡೆನಯ್ಯಾ ನಿಮ್ಮ ದಾಸೋಹವ.
ಅದರ ಮಾನಾಪಮಾನವು ನಿಮ್ಮದು ನೋಡಯ್ಯಾ,
ಎಲೆ ಕಪಿಲಸಿದ್ಧಮಲ್ಲಿಕಾರ್ಜುನನೆಂಬ
ಪರಮಪವಿತ್ರ ಇಷ್ಟಲಿಂಗವೆ. ॥ ೨೯೪ ॥

೧೪೭೨

ಮಾಡದೆ ಮೋಕ್ಷವ ಹಡೆದು ಹೋದರೆಂಬ
ವಾರ್ತೆಯ ಕೇಳಿಹಿರೇನಯ್ಯಾ? ಇಲ್ಲ ಇಲ್ಲವು.
ಮಾಡಿದಡೆ ತಪ್ಪದು; ಮಾಡಲೊಲ್ಲದೆ ಹೋದಡೆ
ಬರುವುದು ದೂರಾಗದು ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೯೫ ॥

೧೪೭೩

ವಾಯುಪುತ್ರನಾಗುವುದು ಲೇಸೆ? ಮನವೆ, ಬೇಡ ಬೇಡ!
ಹೋದ ಹೋದಲ್ಲಿ ವಸ್ತುರೂಪಾಗುವುದು ಲೇಸೆ? ಮನವೆ,

ಅಲ್ಲಲ್ಲ!
ವಾಯು ಬಿಟ್ಟು ವಾಯು ವೈರಿಯಾದಡೆ,
ಮನವೆ, ನಿನ್ನ ಸಾಹಸ, ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ.॥ ೨೯೬ ॥

೧೪೭೪

'ಸರ್ವಂ ಶಿವಮಯಂ ಜಗತ್' ಎಂಬುದ ತಿಳಿಯದೆ
ನುಡಿದವರ ನುಡಿಯಂತೆ ನಡೆಯದಿರಾ ಮನವೆ.
'ಸರ್ವಂ ಶಿವಮಯಂ ಜಗತ್' ಎಂದು ತಿಳಿದು ತಿಳಿದು
ಸುಖಿಯಾಗಾ ಮನವೆ.
ಪಿಂಡ ಬ್ರಹ್ಮಾಂಡಕ್ಕೆ
'ತಿಲಷೋಡಶಭಾಗೇನ ಭೇದೋ ನಾಸ್ತಿ ವರಾನನೇ'
ಎಂಬುದು ಪುಸಿಯಲ್ಲ ನೋಡಾ ಮನವೆ.
ಈಶ್ವರನ ಪಂಚಮುಖದಿಂದ ಪಂಚತತ್ವಗಳುದಯಿಸಿದವು.
ಆ ತತ್ವಂಗಳೊಂದೊಂದು ಕೂಡಿ ತನ್ನ ಚೈತನ್ಯ ಬೆರಸಿದಲ್ಲಿ,
ಪಿಂಡ ಬ್ರಹ್ಮಾಂಡವೆನಿಸಿತ್ತು ನೋಡಾ ಮನವೆ.
ತನ್ನ ತಾನರಿದು ನೋಡಿದಡೆ,
'ಸರ್ವಂ ಶಿವಕಪಿಲಸಿದ್ಧಮಲ್ಲಿಕಾರ್ಜುನಮಯಂ ಜಗತ್'
ಎಂದರಿದು ಬಂದಿತ್ತು ನೋಡಾ ಮನವೆ. ॥ ೨೯೭ ॥

೧೪೭೫

ಮನದಲ್ಲಿ ಸಂಕಲ್ಪ-ವಿಕಲ್ಪಂಗಳು ನೋಡಯ್ಯಾ.
ಮನಸಿನ ಕಾರ್ಯವೆ ಪುಣ್ಯ-ಪಾಪ ನೋಡಯ್ಯಾ.
'ಮನಃ ಕಾರ್ಯಂ ಜಗದ್ಭೇದಂ' ಎಂಬುದು ಹುಸಿಯಲ್ಲ
ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ. ॥ ೨೯೮ ॥

೧೪೭೬

ಮನದಲ್ಲಿ ಭೇದವಲ್ಲದೆ ವಸ್ತುವಿನಲ್ಲಿ ಭೇದವಿಲ್ಲವಯ್ಯಾ,
ಕ್ರಿಯಾಕ್ರಿಯೆಯಲ್ಲಿ ಭೇದವಲ್ಲದೆ ಜ್ಞಾನದಲ್ಲಿ ಭೇದವಿಲ್ಲವಯ್ಯಾ;
ರೂಪಾರೂಪದಲ್ಲಿ ಭೇದವಲ್ಲದೆ ಚೈತನ್ಯದಲ್ಲಿ ಭೇದವಿಲ್ಲ
ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೯೯ ॥

೧೪೭೭

ದೇಹ ನಾನೆಂದು ನಂಬಿದೆ, ಎಲೆ ಮನವೆ.
ದೇಹದಲ್ಲಿಹ ಗುಣಂಗಳು ನಿನ್ನಲ್ಲಿ ಕಂಡಯ್ಯಾ ಮನವೆ.
ಪೃಥ್ವಿಯ ಗುಣ ಶಾಂತಿ, ಉದಕದ ಗುಣ ಸ್ವಾದ,
ಅಗ್ನಿಯ ಗುಣ ಸರ್ವಭಕ್ಷಣ, ವಾಯುವಿನ ಗುಣ ನಿರ್ಮಲತ್ವ,
ಆಕಾಶದ ಗುಣ ನಿರ್ವಯಲು.
ಈ ಪಂಚತತ್ವದ ಗುಣ ನಿನ್ನಲ್ಲಿರಲು,
ನೀನೆ ಪಂಚಮುಖ ನೋಡಾ ಮನವೆ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೦೦ ॥

೧೪೭೮

ಅಂಗವೇ ಲಿಂಗವಾಗಿಹೆನೆಂಬವನ ಭಾವ ಇದರಲ್ಲೇ ನಿಶ್ಚಯ
ನೋಡಾ, ಮನವೆ.
ಸ್ತುತಿ ನಿಂದೆಗಳಲ್ಲಿ ಹರ್ಷರೋಷಗಳಿಲ್ಲದಿರಬೇಕು.
ನೀಚಾನೀಚ ಗುಣವ ನೋಡದೆ ಸಮ್ಮ ಭಾಷಾವಂತನಾಗಬೇಕು.
ಸರ್ವ ಜೀವಿಗಳ ತನ್ನಂತೆ ತಿಳಿದು ನೋಡಬೇಕು.
ಸಂಶಯಾಸಂಶಯವಳಿದು ನಿಶ್ಚಿಂತನಾಗಬೇಕು.
ಆಕಾಶದ ಬೆಳಗಿನ ಬೆಳಗ ನೋಡಿ ಬೆಳಗುಮಯನಾಗಬೇಕು
ನೋಡಾ.
ಎಲೆ ಮನವೆ, ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ. ॥ ೩೦೧ ॥

೧೪೭೯

ಲಿಂಗ ಘನವೆಂಬೆನೆ? ಕಲ್ಲಿನ ಮಗ;
ಪಾದೋದಕ ಘನವೆಂಬೆನೆ? ಇಂದ್ರನ ಮಗ;
ಪ್ರಸಾದ ಘನವೆಂಬೆನೆ? ಶೂದ್ರನ ಮಗ;
ವಿಭೂತಿಯ ಘನವೆಂಬೆನೆ? ಗೋವಿನ ಮಗಳು.
ಇವೆಲ್ಲ ಒಂದೊಂದರಿಂದ ಜನನವಾಯಿತ್ತು ;
ನೀವಾರಿಂದ ಜನನವಾದಿರಿ ನಿರೂಪಿಸಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೦೨ ॥

೧೪೮೦

ಕಲ್ಲು ಘನವೆಂದಡೆ, ಲಿಂಗದ ಪೂಜ್ಯತ್ವ ಕಲ್ಲಿಗೆ ಬಂದಿತೇನಯ್ಯಾ?
ನೀರು ಘನವೆಂದಡೆ, ಪಾದೋದಕಕ್ಕೆ ಸರಿಬಂದಿತೇನಯ್ಯಾ?
ಶೂದ್ರ ಘನವೆಂದಡೆ, ಅಷ್ಟೈಶ್ವರ್ಯ ಕೊಟ್ಟಿತೇನಯ್ಯಾ?
ಘನಕ್ಕೆ ಘನವು ನಿಮ್ಮಷ್ಟಾವರಣಂಗಳು ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೦೩ ॥

೧೪೮೧

ಕಟೆದ ಕಲ್ಲು ಲಿಂಗವೆಂದೆನಿಸಿತು; ಕಟೆಯದ ಕಲ್ಲು ಕಲ್ಲೆನಿಸಿತ್ತು.
ಪೂಜಿಸಿದ ಮಾನವ ಭಕ್ತನೆನಿಪನು; ಪೂಜಿಸದ ಮಾನವ
ಮಾನವನೆನಿಸಿದನು:
ಕಲ್ಲಾದಡೇನು? ಪೂಜೆಗೆ ಫಲವಾಯಿತ್ತು ;
ಮಾನವನಾದಡೇನು? ಭಕ್ತಿಗೆ ಕಾರಣಿಕನಾದನು.
ಕಲ್ಲು ಲಿಂಗವಲ್ಲ, ಲಿಂಗ ಕಲ್ಲಲ್ಲ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೦೪ ॥

೧೪೮೨

ಅನುಭವವಾಗಲೆಂದು ಬಂದು ಘನವಾಗಿ ಒಂದು ಕಿರಿದಾಗಿ
ಹೇಳಿದೆನಲ್ಲದೆ,
ಲಿಂಗವ ಕಿರಿದಾಗಿ ಹೇಳಿದೆನೆ ಅಯ್ಯಾ?
ನೀರಲ್ಲಿದ್ದ ತೆರೆಗಳೆಲ್ಲ ನೀರಲ್ಲವೆ
'ಲಿಂಗಮಧ್ಯೇ ಜಗತ್ಸರ್ವಂ' ಎಂದ ಬಳಿಕ?
ಪಾಷಾಣಂಗಳೆಲ್ಲ ಲಿಂಗಂಗಳು, ಲಿಂಗಂಗಳೆಲ್ಲ ಪಾಷಾಣಂಗಳು.
'ಶ್ರೀಶೈಲೇ ವಸತೀ ಶಿಲಾ ಶಿವಮಯೀ ಸತ್ಯಂ ಶಿವೇ'
ಎಂಬ ಶಿವವಾಕ್ಯವದು ಪುಸಿಯೇನಯ್ಯಾ?
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೦೫ ॥

೧೪೮೩

ಭಾವ ಬಲಿದಲ್ಲಿ ಲಿಂಗವೆನಿಸಿತ್ತು ;
ಭಾವ ವಿಭಾವವಾದಲ್ಲಿ ಪಾಷಾಣವೆನಿಸಿತ್ತು:
ಭಾವ ನಿರ್ಭಾವವಾದಲ್ಲಿ ಏನೆಂದೆನಿಸದು ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೦೬ ॥

೧೪೮೪

ಲಿಂಗ ಜಂಗಮ ಒಂದಾದ ಬಳಿಕ ಲಿಂಗಾರ್ಚನೆ ಸಲ್ಲದು
ಜಂಗಮಕ್ಕೆ.
ಲಿಂಗಾರ್ಚನೆ ಬೇಕು ಭಕ್ತಂಗೆ.
ಲಿಂಗಾರ್ಚನ ವಿರಹಿತ ಭಕ್ತನ ಮುಖ ನೋಡಲಾಗದು,
ನುಡಿಸಲಾಗದು,
ಅವನ ಹೊರೆಯಲ್ಲಿರಲಾಗದಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೨೦೭ ॥

೧೪೮೫

ಭಕ್ತಂಗೆ ಭಕ್ತಿಯೆ ಲಿಂಗಾರ್ಚನೆ;
ಮಹೇಶಂಗೆ ಜ್ಞಾನ ವೈರಾಗ್ಯವೆ ಲಿಂಗಾರ್ಚನೆ.
ಪ್ರಸಾದಿಗೆ ಸಮದೃಷ್ಟಿಯೆ ಲಿಂಗಾರ್ಚನೆ;
ಪ್ರಾಣಲಿಂಗಿಗೆ 'ಪಂಚಪ್ರಾಣಾ' ಎಂಬುದೆ ಲಿಂಗಾರ್ಚನೆ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೦೮ ॥

೧೪೮೬

ನಿಂದಿಸಿದಲ್ಲಿ ಕುಂದುವನಲ್ಲ ಜಂಗಮನು.
ವಂದಿಸಿದಲ್ಲಿ ಆನಂದಮಯನಲ್ಲ ಜಂಗಮನು.
ಒಂದುಮಾಡಿದಲ್ಲಿ ಸಂದುಗೊಳ್ಳುವನಲ್ಲ ಜಂಗಮನು.
ಬಂದಲ್ಲಿ ನೀಡದಿರೆ ಕ್ರೋಧಿಯಲ್ಲ ಜಂಗಮನು.
ಇಂದುಧರ ಕಪಿಲಸಿದ್ಧಮಲ್ಲನೆಂಬೆ ಇಂತಪ್ಪ ಜಂಗಮನು.
॥ ೨೦೯ ॥

೧೪೮೭

'ಸೋಹಂ' ಎಂಬುವುದು ಅಂತರಂಗದ ಮದ ನೋಡಯ್ಯಾ.
'ಶಿವೋಹಂ' ಎಂಬುವುದು ಬಹಿರಂಗದ ಮದ ನೋಡಯ್ಯಾ.
ಈ ದ್ವಂದ್ವವನಳಿದು 'ದಾಸೋಹಂ' ಎಂದೆನಿಸಯ್ಯಾ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೨೧೦ ॥

೧೪೮೮

ಪತ್ರೆಯ ನೇಮದವರು ಒಂದು ಕೋಟಿ.
ಲಿಂಗಾರ್ಚನೆಯ ನೇಮದವರು ಒಂದು ಕೋಟಿ.
ಜಂಗಮ ತೃಪ್ತಿಯವರು ಒಂದು ಕೋಟಿ.
ತನ್ನ ತಾ ತಿಳಿಯುವ ನೇಮದವರು ಒಬ್ಬರೂ ಇಲ್ಲವಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೧೧ ॥

೧೪೮೯

ಪತ್ರೆಯ ನೇಮದವರು ನೋಡಯ್ಯಾ ಪಶು ಆಡುಗಳು.
ಲಿಂಗಾರ್ಚನೆಯ ನೇಮದವರು ನೋಡಯ್ಯಾ ಚತುರ್ವರ್ಣದವರು.
ಜಂಗಮ ಸಂತೃಪ್ತಿಯ ನೇಮದವರು ನೋಡಯ್ಯಾ ಭಕ್ತರು.
ತನ್ನ ತಾ ತಿಳಿದ ನೇಮದವರು ನೋಡಯ್ಯಾ ವೀರಶೈವಾಗ್ರಗಣ್ಯರು,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೧೨ ॥

೧೪೯೦

ಪತ್ರೆಯ ತಿಂದಾಡು ಮುಕ್ತವಾದುದೆಂಬುದ
ಬಲ್ಲಡೆ ಹೇಳಿರಯ್ಯಾ.
ಲಿಂಗವ ಪೂಜಿಸಿದ ವರ್ಣಕ ಲಿಂಗವಾದನೆಂಬುದ ಬಲ್ಲಡೆ
ಹೇಳಿರಯ್ಯಾ.
ಜಂಗಮವ ಸಂತೃಪ್ತಿ ಬಡಿಸಿದ ಭಕ್ತ ಭವವಿರಹಿತನಾದುದ
ಬಲ್ಲಡೆ ಹೇಳಿರಯ್ಯಾ.
ಇವೆಲ್ಲ ಚತುರ್ವಿಧ ಪದಕ್ಕೆ ಒಳಗು!
ತನ್ನ ತಾ ತಿಳಿದ ವೀರಶೈವ ಭವಕ್ಕೆ ಬಂದನೆಂಬ ದ್ವಿರುಕ್ತಿಯನು
ಬಲ್ಲಡೆ ಹೇಳಿರಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನ ಸಾಕ್ಷಿಯಾಗಿ. ॥ ೩೧೩ ॥

೧೪೯೧

ತಪವ ಮಾಡಿ ಸ್ವರ್ಗವ ಪಡೆದೆಹೆನೆಂಬವನ ಮುಖವ
ನೋಡಲಾಗದು.
ಮಾದಿಗ ಡೋಹರ ಶ್ವಪಚ ನೀಚಗುಣವುಳ್ಳವರು
ಹೋಹುದೆಲ್ಲ ಸ್ವರ್ಗವೇನಯ್ಯಾ?

ಲಿಂಗದ ಕುರುಹ ತಿಳಿದು, ಅಂಗಗುಣಂಗಳನತಿಗಳೆದು
ಲಿಂಗವಾದುದೆ ಸ್ವರ್ಗ ನೋಡಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೧೪ ॥

೧೪೯೨

ಕೈಲಾಸ ಕೈಲಾಸವೆಂದು ಬಡಿದಾಡುವ ಅಣ್ಣಗಳಿರಾ, ಕೇಳಿರಯ್ಯಾ.
ಕೈಲಾಸವೆಂಬುದೊಂದು ಭೂಮಿಯೊಳಿರುವ ಹಾಳುಬೆಟ್ಟ.
ಅಲ್ಲಿರುವ ಮುನಿಗಳೆಲ್ಲ ಜೀವಗಳ್ಳರು.
ಅಲ್ಲಿರ್ದ ಚಂದ್ರಶೇಖರನು ಬಹು ಎಡ್ಡ.
ಇದರಾಡಂಬರವೇಕಯ್ಯಾ?
ಎಮ್ಮ ಪುರಾತರಿಗೆ ಸದಾಚಾರದಿಂದ ವರ್ತಿಸಿ,
ಲಿಂಗಾಂಗ ಸಾಮರಸ್ಯವ ತಿಳಿದು,
ನಿಮ್ಮ ಪಾದಪದ್ಮದೊಳು ಬಯಲಾದ ಪದವೆ ಕೈಲಾಸವಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೧೫ ॥

೧೪೯೩

ವಿಧಿ ನಿಷೇಧಂಗಳಿಲ್ಲದನಾದಿ ನೀ ನೋಡಯ್ಯಾ.
ಜಪ-ತಪವಿಲ್ಲದ ಮಹಾಮುನಿ ನೋಡಯ್ಯಾ.
ಇಹ-ಪರ ಸುಖ-ದುಃಖಾತೀತನಯ್ಯಾ ನಿಮ್ಮ ಶರಣ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೧೬ ॥

೧೪೯೪

ಹದಿನಾಲ್ಕು ರತ್ನವೆಂಬುದ ಸುರಾಸುರರೆಲ್ಲರು ಬಲ್ಲರು
ಮೂರಾರು ರತ್ನವನಾರು ಅರಿಯರಯ್ಯಾ;
ಮೂರಾರು ರತ್ನವೆಂಬುವ ಬಲ್ಲರು ದಿವ್ಯಮುನಿಗಳು.
ಮೂರೆರಡು ರತ್ನವನರಿಯರು ತ್ರಿಲೋಕದವರು;
ಮೂರೆರಡು ರತ್ನವ ಬಲ್ಲರು ಮಹಾಪ್ರಮಥರು.
ಒಂದು ರತ್ನವನಾರು ಅರಿಯರು;
ಒಂದು ರತ್ನವ ಬಲ್ಲವ ನಿಮ್ಮ ಶರಣ ಮಹಾಲಿಂಗಮೂರ್ತಿ
ಚೆನ್ನಬಸವಣ್ಣ ನೋಡಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೩೧೭ ॥

೧೪೯೫

ರತ್ನಪರೀಕ್ಷೆಯ ಮಾಡುವ ಅಣ್ಣಗಳೆಲ್ಲ ದಿಮ್ಮಿಪರಯ್ಯ.
ಬಲ್ಲಿದ ಬೆಲೆ ಎಂದೆಡೆ ಹುಲುಕಡ್ಡಿಯೊಳ್ಳಿತೆ;
ಬೆಲೆ ಇಲ್ಲದುದೆಂದಡೆ ಬಲ್ಲವರ ಮುಂದುಗೆಡಿಸುತ್ತೈತೆ.
ಇದರ ಬೆಲೆಯ ಬಲ್ಲ ನಮ್ಮ ಬಸವಣ್ಣನಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ. ॥ ೩೧೮ ॥

೧೪೯೬

ಗುದ್ದಾ [ಡಿ] ರತ್ನವ ಕದ್ದು ಒಯ್ಯಬಲ್ಲಡೆ ಭಕ್ತನೆಂಬೆ.
ಮದ್ದುಳ್ಳನ್ನವ ಮೆದ್ದಬಲ್ಲಡೆ ಮಹೇಶನೆಂಬೆ.
ಜಿದ್ದಿನ ಭಕ್ತಿಯ ಗೆದ್ದು ಒಯ್ದಡೆ,
ಕಪಿಲಸಿದ್ಧಮಲ್ಲನ ಮನೆಯ ಮುದ್ದುಕುಮಾರನೆಂಬೆ ನೋಡಾ,
ಮಡಿವಾಳ ಮಾಚಣ್ಣನೆ. ॥ ೩೧೯ ॥

೧೪೯೭

ಅಯ್ಯಗಳು ಬಂದಿಹರೆಂದು 'ಅಯ್ಯಾ ಅಯ್ಯಾ' ಎಂದು
ಬೆಂಬತ್ತುವನಲ್ಲ ನಾನು.
ಅಯ್ಯಗಳೆಂದಡೆ ಅಯ್ಯತನವೇರಿತ್ತೆ ದೇವಾ?
ಗೋವಿನ ಹಾಲು ಎಂದಡೆ, ಹಿಂಡಲಿಲ್ಲ, ರುಚಿಸಲಿಲ್ಲ.
ತನ್ನ ಹಸ್ತ ಮುಟ್ಟಿದಲ್ಲಿ ರುಚಿಸಿತ್ತಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೨೦ ॥

೧೪೯೮

ಅಯ್ಯಗಳ ಅನುಭವಕ್ಕಲ್ಲದೆ ನಿನ್ನ ಪಾಪಕ್ಕವರು ಅಯ್ಯಗಳೆ?
ಅಯ್ಯಗಳನುಭಾವ ನಿನ್ನ ಮನೋಭಾವ ಏಕವಾದಡೆ,
ಅಯ್ಯತನವೇರಿತ್ತಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ.॥ ೩೨೧ ॥

೧೪೯೯

ಬಂದಲ್ಲುಪಚರಿಸುವುದಲ್ಲದೆ,
ನಿಂದ ನಿಂದಲ್ಲುಪಚರಿಸುವುದು ಭಕ್ತಿಯ ಕೊಂಕು ನೋಡಯ್ಯಾ.

ಉಪಚಾರಕ್ಕೆ ಬಂದಾತ ಜಂಗಮನಲ್ಲ ನೋಡಯ್ಯಾ;
ಉಪಚರಿಸಿದವ ಭಕ್ತನಲ್ಲ.
ಅನುಭವಕ್ಕೆ ಬಂದಿಹನಯ್ಯಾ ಜಂಗಮನು,
ಅನುಭವಕ್ಕೆ ಮಾಡುವನಯ್ಯಾ ಉಪಚಾರವ ಭಕ್ತನು,
ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೨೨ ॥

೧೫೦೦

ಬಂದ ಮಹೇಶ ಬಂದಂತೆ ಹೋಹನಲ್ಲ ನೋಡಯ್ಯಾ.
ಬಂದ ಬರವು ಭವಕ್ಕೆ ಆಗರ,
ನಿಂದ ಬರವು ಜ್ಞಾನಕ್ಕೆ ಆಗರ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೨೩ ॥

೧೫೦೧

ಕುಂಡಲಿ ಬಂದು ಕೀಡಿಯನು ಕುಂಡಲಿಯ ಮಾಡಿತ್ತಯ್ಯಾ.
ಅಗ್ನಿ ಬಂದು ಕಾಷ್ಠವ ಅಗ್ನಿಯ ಮಾಡಿತ್ತಯ್ಯಾ.
ಮಹೇಶ ಬಂದು ಭಕ್ತನ ಮಹೇಶನ ಮಾಡಿ ಗಮಿಸಿದನಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೨೪ ॥

೧೫೦೨

ಅಗ್ನಿಯ ಮುಟ್ಟಿದ ಕಾಷ್ಠ ಇದ್ದಲಿಯಾಯಿತ್ತು ;
ಇದ್ದಲಿಯದು ಕಾಷ್ಠವಾಗದು.
ಭಕ್ತ ತಾನು ವಿರಕ್ತನಾದನು; ವಿರಕ್ತ ತಾನು ಭಕ್ತನಾಗನು.
ಇದರಿರವ ಗುರು ಚೆನ್ನಬಸವಣ್ಣ ತೋರಿದನಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೨೫ ॥

೧೫೦೩

ಕಾಷ್ಠದಿಂದ ಮುಟ್ಟಿದ ನೀರ ತಾ ಮುಟ್ಟನೆಂಬಂತೆ,
ಬಿಸಿಲಿನಿಂದ ಬಳಲಿ, ಕಾಯ ತಾನಲ್ಲೆಂಬಂತೆ,
ಮನಮುಟ್ಟಿದ ವಿಷಯ ತಾ ಮುಟ್ಟನೆಂಬ ವೇದಾಂತಿಯ
ಹಲ್ಲುದೋರೆ ಮೂಗ ಕೊಯ್ವನಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನನವರ. ॥ ೩೨೬ ॥

೧೫೦೪

ಸಾಕ್ಷಿಯೆಂಬುದೆಲ್ಲ ವೃತ್ತಿಯಲ್ಲಲ್ಲದೆ,
ನಿವೃತ್ತಿಯಲ್ಲಿಹುದೇನಯ್ಯಾ?
ರುಚಿಯೆಂಬುದದು ಪದಾರ್ಥದಲ್ಲಲ್ಲದೆ,
ನಿಷ್ಪದಾರ್ಥದಲ್ಲಿಹುದೆ ಅಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೨೭ ॥

೧೫೦೫

ಕರ್ಮಸಾಕ್ಷಿ ತಾನಾದಲ್ಲಿ ,
ಅಸ್ತಮಾನೋದಯಕ್ಕೆ ಒಳಗಾದನಯ್ಯಾ ಸೂರ್ಯನು.
ಕರ್ಮಸಾಕ್ಷಿ ತಾನಾಗಿ ಆಚರಿಸಿದಲ್ಲಿ ,
ಜನನ ಮರಣಕ್ಕೆ ಒಳಗಾದೆ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೨೮ ॥

೧೫೦೬

ಸಾಕ್ಷಿ ತಾನೆಂದಡೆ ಶಮನ ಕಾರ್ಯಕ್ಕೆ ಶುಭದವಾಯಿತ್ತಯ್ಯಾ.
ಸಾಕ್ಷಿ ತಾನಲ್ಲೆಂದಡೆ ಯಮನ ಕಾರ್ಯ ಬೀಳಾಯಿತ್ತಯ್ಯಾ.
ಸಾಕ್ಷಿಯೆಬುದು ವೃತ್ತಿಯಲ್ಲಿ! ಒಲ್ಲರೀ ಮಹಿಮರು!
ನಿವೃತ್ತಿಯಲ್ಲದೆಂತಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ? ॥ ೩೨೯ ॥

೧೫೦೭

ವೃತ್ತಿ ನಿವೃತ್ತಿ ಎಂಬುದು ಕಲ್ಪನಾರಚನೆ.
ವೃತ್ತಿಯಲ್ಲಿಯ ಸಾಕ್ಷಿ ವೃತ್ತಿಗೆ ಅಟ್ಟಿತ್ತು.
ನಿವೃತ್ತಿಯಲ್ಲಿಯ ಸಾಕ್ಷಿ ನಿವೃತ್ತಿಯಾಗದೆ ವೃತ್ತಿಗೈತಂದಿತ್ತಯ್ಯಾ.
ಕರ್ಮಸಾಕ್ಷಿ ಎಂಬ ವೇದಾಂತಿಯ ಪಳವಾಕ್ಯ ಸಮನಿಸದು ನೋಡಾ,
ಕಪಿಲಸಿದ್ಧ ಮಲ್ಲಿಕಾರ್ಜುನಾ. ॥ ೩೩೦ ॥

೧೫೦೮

ಸಾಕ್ಷಿ ತಾನಾಗುವಡೆ ಕರಣಾದಿಗಳ ಮಿತ್ರತ್ವವೇನಯ್ಯಾ?
ಆವರ ಮಿತ್ರತ್ವವೆಂಬುದು ಜನ್ಮತರುಲವಿತ್ರವೆ?

ಆಗಬಾರದು, ಆಗಬಾರದು, ಆಗಬಾರದು!
ಸಾಕ್ಷಿಯು ಆಗಬೇಕು ಮಾಡೆನೆಂಬುವುದಕ್ಕೆ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೩೧ ॥

೧೫೦೯

ಸತ್ಯಕ್ಕೆ ಸಾಕ್ಷಿಯಲ್ಲದೆ ಮಿಥ್ಯಕ್ಕೆ ಸಾಕ್ಷಿಯೆ ಅಯ್ಯಾ?
'ಸತ್ಪಾತ್ರೇಷ್ವಪಿ ಯಃ ಸಾಕ್ಷೀ ಸ ನರೋಽಹಂ ಸದಾಶಿವೇ'
ಎಂಬ ನಿನ್ನ ವಾಕ್ಯ ಹುಸಿಯಲ್ಲ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೩೨ ॥

೧೫೧೦

ಕಾಯ ಮುನ್ನವೊ, ಕಾಯದಲ್ಲಿಪ್ಪ ಮನ ಮುನ್ನವೊ?
ಮನ ಮುನ್ನವೊ, ಮನದಲ್ಲಿಪ್ಪ ಚೈತನ್ಯ ಮುನ್ನವೊ?
ಚೈತನ್ಯ ಮುನ್ನವೊ, ಚೈತನ್ಯಾತ್ಮಕ ಮಾಯೆ ಮುನ್ನವೊ?
ಅವು ಮುನ್ನವಲ್ಲ, ಮುನ್ನವಲ್ಲ ;
ನಿನ್ನ ನಿರಾಳ ನಿಜದ ನಿರ್ವಯಲಿನ
ಶೂನ್ಯಾಶೂನ್ಯವೆ ಮುನ್ನ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೩೩ ॥

೧೫೧೧

ತಾ ಮುನ್ನವೊ, ತನ್ನ ಮನ ಮುನ್ನವೊ?
ತನ್ನ ಕಾಯ ಮುನ್ನವೊ, ತಾ ಮುನ್ನವೊ, ಅಯ್ಯಾ?
ತಾ ಮುನ್ನೆಂಬಲ್ಲಿ ತಿಳಿಯದೆ ಹೋಯಿತ್ತು.
ಮನ ಮುನ್ನೆಂಬಲ್ಲಿ ಕಾಯಕ್ಕೊಳಗಾಯಿತ್ತು.
ಕಾಯ ಮುನ್ನೆಂಬಲ್ಲಿ ಜಡಮಯ ಪ್ರಳಯಕ್ಕೊಳಗಾಯಿತ್ತು.
ತಾ ಮುನ್ನಲ್ಲ, ತನ್ನ ಮನ ಮುನ್ನಲ್ಲ, [ತನ್ನ ಕಾಯ ಮುನ್ನಲ್ಲ];
ತಿಳಿದಾಗಲೆ ಮುನ್ನ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೩೩೪ ॥

೧೫೧೨

ಕಾಯ ಧರಿಸಿಪ್ಪವ ನವನೀತ ರೋಮದಂತಿರಬೇಕು,
ಮುಕುರದ ಪ್ರತಿಬಿಂಬದಂತಿರಬೇಕು,

ಬೆಟ್ಟದಲ್ಲಿಯ ಕಾಡಕಿಚ್ಚಿನಂತಿರಬೇಕು,
ಆಷಾಢದಲ್ಲಿಯ ಚಂಡಮಾರುತನಂತಿರಬೇಕು,
ಸರ್ಪರಲ್ಲಿ ಸರ್ಪರಂತಾಗಿರಬೇಕು ಕಾಣಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೩೫ ॥

೧೫೧೩

ಜಲದಲ್ಲಿಯ ಚಂದ್ರನ ಚಲನೆ ಜಲದಲ್ಲಲ್ಲದೆ,
ನಿಜಚಂದ್ರನಲ್ಲಿಲ್ಲವಯ್ಯಾ.
ಘಟದಲ್ಲಿಯ ಪ್ರತಿಬಿಂಬಗಳು ಘಟದಲ್ಲಲ್ಲದೆ ಬಿಂಬದಲ್ಲಿಲ್ಲ
ನೋಡಯ್ಯಾ.
ಜಲದಲ್ಲಿಯ ಚಂದ್ರನ ಚಲನೆ ಘಟದಲ್ಲಿಯ ಪ್ರತಿಬಿಂಬ
ನಿಜವಲ್ಲ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೩೬ ॥

೧೫೧೪

ಜಲದಲ್ಲಿ ಚಂದ್ರನಿಲ್ಲ, ಜಲವೆಲ್ಲ ಮಾಯಾತ್ಮಕ.
ವಸ್ತುವಲ್ಲ; ವಸ್ತ್ವಾತ್ಮಕ ಮಾಯೆಯಲ್ಲ.
ಉಪಾಧಿಯಿಂದ ತೋರ್ಪುದೆಲ್ಲ ನಿಜವೆ ಅಯ್ಯಾ?
ಸ್ಥಾಣು ಚೋರ ನ್ಯಾಯದಂತೆ, ಶುಕ್ತಿ ರಜತ ನ್ಯಾಯದಂತೆ,
ರಜ್ಜು ಸರ್ಪ ನ್ಯಾಯದಂತೆ, ಅಧ್ಯಾರೋಪವಾದ ಅವಿದ್ಯೆಯಲ್ಲಿ
ಲೇಸುಂಟೆ?
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೩೭ ॥

೧೫೧೫

ವಸ್ತು ಒಂದರಲ್ಲಿ ಕಲ್ಪಿತದ್ವಯವಾದುವು ನೋಡಾ.
ಹಗ್ಗವಲ್ಲ ಸರ್ಪವೆಂಬುದೆ ಅಧ್ಯಾರೋಪ;
ಸರ್ಪವಲ್ಲ ಹಗ್ಗವೆಂಬುದೆ ಅಪವಾದ.
ವಸ್ತುವಲ್ಲ ಮಾಯೆಯೆಂಬುದೆ ಅವಿದ್ಯೆ;
ಮಾಯೆಯಲ್ಲ ವಸ್ತುವೆಂಬುದೆ ವಿದ್ಯೆಯಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೩೮ ॥

೧೫೧೬

ಜಡ, ಅಸತ್ಯ, ಸುಖ ದುಃಖ, ಅನಿತ್ಯ, ಖಂಡಿತ
ಎಂಬೈದು ಲಕ್ಷಣ ಮಾಯಾತ್ಮಕವಯ್ಯಾ.
ಮೂಢಮಣಿ ಕಲ್ಲು ಮೊದಲಾದವೆ ಜಡದ್ರವ್ಯ ನೋಡಯ್ಯಾ.
ಮೃಗದಲ್ಲಿಲ್ಲದ ಶಶವಿಷಾಣಾಧಿಕವೆ ಅಸತ್ಯವಯ್ಯಾ.
ರಜೋಗುಣದಿಯ [ಸಪ್ತಾ]ಸಪ್ತ ವೃತ್ತಿಯೆ [ಸುಖ] ದುಃಖ
ಕಂಡಯ್ಯಾ.
ತೋರಿ ಕೆಡುವ ದೇಹಾಧಿಕವೆ ಅನಿತ್ಯ ಕಂಡಯ್ಯಾ.
ಕಾಲಪರಿಚ್ಛೇದಾಧಿಕವೆ ಖಂಡಿತ ನೋಡಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೩೯ ॥

೧೫೧೭

ತೋರಿ ಕೆಡುವ ದೇಹ ನಾನೆಂದು ನಂಬದಿರಾ ಮನವೆ.
ತೋರುವ ಅರಿವು ನಾನೆಂದು ನಂಬು ಕಂಡೆಯಾ ಮನವೆ.
ತೋರಿ ಕೆಡುವುದು ಮಾಯಾತ್ಮಕವು ಮನವೆ.
ತೋರಿ ತೋರುವುದದು ನಿರುಪಾಧಿಕ, ನಿಜಾನಂದ,
ಕಪಿಲಸಿದ್ಧಮಲ್ಲಿಕಾರ್ಜುನ, ಕಂಡೆಯಾ ಮನವೆ. ॥ ೩೪೦ ॥

೧೫೧೮

ಕಾಯ ನಾನೆಂದಡೆ ಕರ್ಮಕಾಂಡಿ.
ಸಕಲ ಕ್ರಿಯೆ ಈಶಾರ್ಪಣವೆಂದಡೆ ಭಕ್ತಿಕಾಂಡಿ.
ಸಕಲ ಕರ್ಮ ಸಾಕ್ಷಿಯೆಂದಡೆ ಜ್ಞಾನಕಾಂಡಿ.
ಕಾಂಡತ್ರಯವಿಲ್ಲದ ಅಖಂಡನ ತೋರಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೪೧ ॥

೧೫೧೯

ಯೋಗಿಯ ಕರ್ಮ ನಿಷ್ಕಾಮವಲ್ಲೆಂದು ನಂಬಬಾರದಯ್ಯಾ.
ಮಹಾಮಹಿಮನ ಮೋಕ್ಷ ಮೂರರಲ್ಲೆಂದು ನಂಬಬಾರದಯ್ಯಾ.
ಅಭ್ಯಾಸಿಯ ಮೋಕ್ಷ ಜನ್ಮಾಂತರದಲ್ಲೆಂದು ನಂಬಬಾರದಯ್ಯಾ.
ಅವಿಚಾರಿಯ ಮೋಕ್ಷ ಜನ್ಮ ಸಾವಿರದಲ್ಲೆಂದು ನಂಬಬಾರದೆ
ಅಯ್ಯಾ?

ಆರೂಢನ ಜನ್ಮ ಕಪಿಲಸಿದ್ಧಮಲ್ಲಿಕಾರ್ಜುನನ ಜನ್ಮವೆಂದು
ನಂಬಲೇಬೇಕು,
ಹಾವಿನಹಾಳ ಕಲ್ಲಯ್ಯಾ. ॥ ೩೪೨ ॥

೧೫೨೦

"ಮೂರ್ಖತ್ವೇನ ಸ್ವಕೀಯಾನಿ ಕರ್ಮಾಣಿ ಚ ದಿನೇ ದಿನೇ॥
ಯಃ ಕರೋತಿ ಸ ಮೂಢಸ್ತು ಶತಜನ್ಮವಿಮೋಚಕಃ॥"
ಎಂಬವನು ಕರ್ಮಿಯಯ್ಯಾ.
"ಜಗತ್ಸತ್ಯಂ ಮತ್ವಾ ಜಗತಿ ನಿರತಃ ಕರ್ಮಕುಶಲಃ।
ತೃತೀಯೇನ ಪ್ರಾಪ್ತಿಃ ಪರಮ ಸುಪದಂ ಶಾಂಕರಿ ಶಿವೇ॥"
ಎಂಬವನು ಮುಮುಕ್ಷು ಕಂಡಯ್ಯಾ.
"ಪ್ರಪಂಚಂ ಸ್ವಪ್ನವನ್ಮತ್ವಾ ಧ್ಯಾನಕರ್ಮಪರಾಯಣಃ।
ದ್ವಿಜನ್ಮತಾಂ ಸ ಮೋಕ್ಷಂ ಚ ಪ್ರಯಾತಿ ಗಿರಿನಂದನೇ॥"
ಎಂಬವನು ಅಭ್ಯಾಸಿ ಕಂಡಯ್ಯಾ.
"ವ್ಯವಹಾರಾನ್ಸಮಸ್ತಾಂಶ್ಚ ಉಪೇಕ್ಷ್ಯ ಪರಮೇಶ್ವರಿ।
ವಿವೇಕತತ್ಪರೋಭೂತ್ವಾ ಏಕಜನ್ಮವಿಮೋಚಕಃ॥"
ಎಂಬವನು ಅನುಭಾವಿ ನೋಡಯ್ಯಾ.
"ಅದೃಷ್ಟ್ವಾ ವಿಶ್ವವಿಕೃತಿಂ ಸ್ವಾತ್ಮಜ್ಞಾನೇನ ಯೋ ನರಃ।
ಭಾತಿ ತಸ್ಯ ಮಹಾದೇವಿ ವಿದೇಹಂ ವಪುರೀರಿತಂ॥"
ಎಂಬವನು ಆರೂಢ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೩೪೩ ॥

೧೫೨೧

ಒಂದು ಮಣಿಪರೀಕ್ಷೆಗೆ ಮೂವತ್ತಾರು ಮಣಿ ನೋಡಿದೆಯಯ್ಯಾ.
ಮೂವತ್ತಾರು ಮಣಿ ಕೂಡಿ ಒಂದು ಮಣಿ ಪರೀಕ್ಷಿಸಿದಡೆ,
ಮೂವತ್ತಾರು ಮಣಿ ಇಲ್ಲ ನೋಡಯ್ಯಾ.
ಪರೀಕ್ಷೆಯಾಗದಿರೆ, ಆ ಮಣಿಗಳು
ಮಣಿಮಣಿಗೆ ಸೇರ್ಪಡೆಯಾದವಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೪೪ ॥

೧೫೨೨

ಭಕ್ತನಾಗಿ ಭಕ್ತಿಯ ಮಾಡುವುದದು ಲೇಸಯ್ಯಾ;
ಶಕ್ತಿಯಿಲ್ಲದಿರೆ ತಮ್ಮ ಪಾದಕೃಪೆ ಇಷ್ಟವೆಂಬುವದು ಬಹು
ಲೇಸಯ್ಯಾ.
ಮಹೇಶನ ಮಲತ್ರಯವಳಿವುದು ದುರ್ಲಭ ಕಂಡಯ್ಯಾ,
ಚರಿಸಿ ಚರಿಸಿ ಜಗವನ್ನುದ್ಧರಿಸುವುದು ಬಹು ದುರ್ಲಭ
ಕಂಡಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೪೫ ॥

೧೫೨೩

ಜಗವಾಧರಿಸಿದ ಕಣ್ಣು ತನ್ನ ತಗುಳ್ದ ಕಾಯವ ಕಾಣದು.
ತಿಳಿವ ಅರಿವು ತನ್ನ ತಗುಳ್ದ ಭವದ ಮೊನೆಯ ಕಾಣದು.
ವಿವೇಕಪರನಾದಡೆ ಕಾಣದುದು ಕಾಂಬುದು ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೪೬ ॥

೧೫೨೪

ಕುಲಮದ ಪೊತ್ತಲ್ಲಿ ಚಂಡಾಲಗಿತ್ತಿಯಾಗಿ ಕೆಡಿಸಿತ್ತು ಮಾಯೆ,
ಮಯೂರನೃಪಗೆ.
ಛಲಮದ ಪೊತ್ತಲ್ಲಿ ಮಾಂಸ ಭೋಗಿಸಿತ್ತು ಮಾಯೆ,
ವೀರ ವಿಕ್ರಮಗೆ.
ಧನಮದ ಪೊತ್ತಲ್ಲಿ ದರಿದ್ರವಾಗಿ ಕಾಡಿತ್ತು ಮಾಯೆ,
ಹರಿಶ್ಚಂದ್ರಂಗೆ.
ರೂಪಮದ ಪೊತ್ತಲ್ಲಿ ಕುರೂಪನ ಮಾಡಿತ್ತು ಮಾಯೆ,
ನಳಂಗೆ.
ಯೌವನಮದ ಪೊತ್ತಲ್ಲಿ ಹಿಡಿಂಬಿಯಾಗಿ ಕಾಡಿತ್ತು ಮಾಯೆ,
ಭೀಮಂಗೆ.
ವಿದ್ಯಾಮದ ಪೊತ್ತಲ್ಲಿ ಅಜ್ಞಾನವಾಗಿ ಕಾಡಿತ್ತು ಮಾಯೆ,
ಅಂದು ಪರ್ವತದಲ್ಲಿ ಕವಿ ವಾದಿಶೇಖರಂಗೆ.
ರಾಜಮದ ಪೊತ್ತಲ್ಲಿ ರಾಕ್ಷಸನ ಮಾಡಿತ್ತು ಮಾಯೆ,
ಮುಮ್ಮಡಿ ಸಿಂಗನೃಪಂಗೆ.
ತಪೋಮದ ಪೊತ್ತಲ್ಲಿ ಹಲವು ಆಗಿ ಕಾಡಿತ್ತು ಮಾಯೆ,
ವಿಶ್ವಾಮಿತ್ರಂಗೆ.

ಇಂತೀ ಅಷ್ಟಮದವಳಿದು ಅಷ್ಟಾವರಣ ಧರಿಸಿಪ್ಪ
ಮಹಾಗಣಂಗಳು ಲಯವಿಲ್ಲದ ರಾಜಯೋಗವ
ಪಡೆದಿಹರಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೪೭ ॥

೧೫೨೫

ಸತ್ಕುಲ ದುಷ್ಕುಲವೆಂಬುವದು ಜಗತ್ಪ್ರಸಿದ್ಧವಯ್ಯಾ.
ಕುಲ ಸತ್ಕುಲ ನಡೆ ವಿಪರೀತವಾದಡೆ ದುಷ್ಕುಲ ನೋಡಯ್ಯಾ.
ಮಧು ಮಕ್ಷಿಕ ಎಂಜಲು ಕುಲ ರುಚಿಯಾದ[ಲ್ಲಿಯೆ],
ಚಂದ್ರಧರ ಕಪಿಲಸಿದ್ಧಮಲ್ಲಿಕಾರ್ಜುನ
ತನ್ನ ಪೂಜೆಗೆಂದು ನೇಮಿಸಿದ ಬೊಮ್ಮಣ್ಣ. ॥ ೩೪೮ ॥

೧೫೨೬

ಕುಲವೆಂದು ಹೋರಾಡುವ ಅಣ್ಣಗಳಿರಾ, ಕೇಳಿರೊ:
ಕುಲವೇ ಡೋಹರನ? ಕುಲವೇ ಮಾದಾರನ?
ಕುಲವೇ ದೂರ್ವಾಸನ?
ಕುಲವೇ ವ್ಯಾಸನ? ಕುಲವೇ ವಾಲ್ಮೀಕನ? ಕುಲವೇ ಕೌಂಡಿಲ್ಯನ?
ಕುಲವ ನೋಳ್ಪಡೆ ಹುರುಳಿಲ್ಲ ;
ಅವರ ನಡೆಯ ನೋಳ್ಪಡೆ ನಡೆಯುವರು ತ್ರಿಲೋಕದಲ್ಲಿಲ್ಲ
ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೪೯ ॥

೧೫೨೭

ವಾಲ್ಮೀಕನ ಶೇಷಪ್ರಸಾದವೆಲ್ಲ ಸಂಸ್ಕೃತಮಯವಾಯಿತ್ತು ಮರ್ತ್ಯಕ್ಕೆ.
ದೂರ್ವಾಸನ ಉಪದೇಶವೆಲ್ಲ ಚಂಡಾಲರ ಮುನಿಗಳ ಮಾಡಿತ್ತು
ಸ್ವರ್ಗಕ್ಕೆ.
ಕುಲವೆಂದಡೆ ಮಲತ್ರಯವು ಬಿಡವು ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೫೦ ॥

೧೫೨೮

ಕುಲಾಕುಲ ಅನುಭವಕ್ಕಲ್ಲದೆ ಸಮರಸಕ್ಕೇನೋ ಅಯ್ಯಾ?
ವಾದಪಿವಾದವೆಂಬುದು ಶಾಸ್ತ್ರದಲ್ಲಲ್ಲದೆ ಸಭೆಯಲ್ಲೇನೋ ಅಯ್ಯಾ?
ಹಾಸ್ಯಾಹಾಸ್ಯ ನುಡಿಗಡಣದಲ್ಲಲ್ಲದೆ
ನುಡಿಯುವ ಕಾಯದಲ್ಲೇನೋ ಅಯ್ಯಾ?
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೫೧ ॥

೧೫೨೯

ಕಟೆದ ಕಲ್ಲ ಲಿಂಗವ ಮಾಡಿಕೊಟ್ಟಾತ ಗುರುವೆಂಬರು;
ಆ ಲಿಂಗವ ಧರಿಸಿದಾತ ಶಿಷ್ಯನೆಂಬರು.
ಕೊಟ್ಟ ಗುರು ದೇಶಪಾಲಾದ; ಕೊಟ್ಟ ಕಲ್ಲು ಲಿಂಗವೊ?
ಕಲ್ಲಿನ ಕಲ್ಲು ಕಲ್ಲೆಂಬಡೆ, ಲಿಂಗವ ಮಾಡಿ ಕೊಟ್ಟ;
ಲಿಂಗವೆಂದಡೆ ಪೂಜಾವಿರಹಿತವಾಯಿತ್ತು.
ಪೂಜೆಯಿಲ್ಲದ ಲಿಂಗ ಪಾಷಾಣ.
ಹೋದ ಗುರುವಿನ ಲಿಂಗ ಪಾಷಾಣಭೇದಿ;
ಭೇದಿಸಿದಡೆ ಹುರುಳಿಲ್ಲ.
ನದಿಯ ದಾಟುವಲ್ಲಿ ಭೈತ್ರವ ಹಿಡಿದು,
ದಾಂಟಿದಂತ್ಯದಲಿ ಬಿಟ್ಟುಹೋದರು.
ಬಿಟ್ಟ ನಾವೆ ಮತ್ತೊಬ್ಬರಿಗೆ ಲೇಸು,
ಈ ಲಿಂಗ ಬರದು ಆರಿಗೆ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೫೨ ॥

೧೫೩೦

ಅಂಗ ಲಿಂಗ ಒಂದೆಂದ ಬಳಿಕ ಅಂಗ ಕೆಟ್ಟು ಲಿಂಗ ಉಳಿಯಿತ್ತು, ನೋಡಾ.
ಅಂಗ ನಿರ್ವಯಲಾದಲ್ಲಿ ಲಿಂಗ ಭವಿಯಾದುದು ನೋಡಾ.
ಅಂಗ ಲಿಂಗ ನಿರ್ವಯಲಲ್ಲಡಗಿಸಬಲ್ಲಡೆ, ಭಕ್ತನೆಂಬೆ ಮಹೇಶನೆಂಬೆ,
ಕಪಿಲಸಿದ್ಧಮಲ್ಲಿಕಾರ್ಜುನನವನೆ ಎಂಬೆ ನೋಡಾ, ಅಮುಗಿದೇವಾ.
॥ ೩೫೩ ॥

೧೫೩೧

ಲಿಂಗ ಹೋಯಿತ್ತೆಂದು ಅಂಗವ ಬಿಡುವವನ ನೋಡಿ,
ಎನ್ನಂಗ ನಡುಗಿತ್ತಯ್ಯಾ.
ಲಿಂಗ ಹೋದಡೆ ನಿನ್ನ ಪ್ರಾಣಂಗಳುಳಿವವೆ?
ಲಿಂಗಪ್ರಾಣಿ ಪ್ರಾಣಲಿಂಗಿ ಎಂಬುದದು ಹುಸಿಯೆ,
ಅಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ? ॥ ೩೫೪ ॥

೧೫೩೨

ಸೂತ್ರವ ಬಿಟ್ಟಿತೆಂದು ಸಂದೇಹಗೊಳ್ಳದಿರಾ, ಮನುಜರಿರಾ.
ಸೂತ್ರವಿದ್ದಲ್ಲಿ ನಿಮ್ಮಂಗಕ್ಕೆ ಸೂತ್ರವಾದನಯ್ಯಾ ಲಿಂಗಮೂರ್ತಿ.
ಸೂತ್ರ ತಪ್ಪಿತ್ತೆಂಬಲ್ಲಿ ಸೂತ್ರ ತಪ್ಪಿಲ್ಲ ,
ನಿಮ್ಮ ಮನಸ್ಸೂತ್ರವೆ ಭಿನ್ನವಾಯಿತ್ತಯ್ಯಾ,
ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೫೫ ॥

೧೫೩೩

ಗುರುವಿಂಗೆ ಗುರುವಿಲ್ಲ , ಲಿಂಗಕ್ಕೆ ಲಿಂಗವಿಲ್ಲ ;
ಜಂಗಮಕ್ಕೆ ಜಂಗಮವಿಲ್ಲ, ನನಗೆ ನಾನಿಲ್ಲ.
ಕಣ್ದೆರೆದು ನೋಡುವಡೆ ಆರಿಗೆ ಆರೂ ಇಲ್ಲ ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೫೬ ॥

೧೫೩೪

ತನುವಿಗೊಳಗಾದಾತ ಗುರುವೆ?
ಮನಕ್ಕೊಳಗಾದಾತ ಲಿಂಗವೆ?
ಧನಕ್ಕೊಳಗಾದಾತ ಜಂಗಮವೆ?
ತನು-ಮನ-ಧನ ತನ್ನ ಮನಕ್ಕಲ್ಲದೆ
ಗುರು-ಲಿಂಗ-ಜಂಗಮದಲ್ಲುಂಟೆ?
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೫೭ ॥

೧೫೩೫

ಹಣ್ಣ ಹಿಡಿದ ಬಾಲಕಂಗೆ ಬೆಲ್ಲವ ಕೊಟ್ಟೇನು ಹಣ್ಣ ತಾ ಎಂಬಂತೆ,
ಮಣ್ಣು ಮೂರನು ಹಿಡಿದ ಭಕ್ತಂಗೆ
ಮುಕ್ಕಣ್ಣನ ಪದವಿ ಕೊಟ್ಟೇವೆಂಬ ತೆರನಂತೆ,
ಗುರು-ಲಿಂಗ-ಜಂಗಮರು ಬೇಡುವರಲ್ಲದೆ,
ತಮ್ಮಿಚ್ಛೆಗೆ ಕೈಯಾನುವರೆ ಕಪಿಲಸಿದ್ಧಮಲ್ಲಿಕಾರ್ಜುನಾ?॥ ೩೫೮ ॥

೧೫೩೬

ಬಾಲಕನ ಹಣ್ಣು ಬಾಲಕಂಗಲ್ಲದೆ ಪಿತಂಗೇನೋ ಅಯ್ಯಾ?
ಭಕ್ತನ ಸೊಮ್ಮು ಭಕ್ತಂಗಲ್ಲದೆ,
ನಿರವಯ ನಿರಾಳ ಗುರು-ಲಿಂಗ-ಜಂಗಮಕ್ಕೇನೋ ಅಯ್ಯಾ?
ತನು-ಮನ-ಧನದೊಳಗಾ[ದೆನೆಂ]ಬವನ
ಬೆನ್ನ ಬಾರನೆತ್ತದೆ ಬಿಡುವನೆ, ಕಪಿಲಸಿದ್ಧಮಲ್ಲಿಕಾರ್ಜುನಾ?
॥ ೩೫೯ ॥

೧೫೩೭

ಲಗ್ನಕ್ಕೆ ವಿಘ್ನ ಬಾರದೆಂದು ಜ್ಯೋತಿಷ್ಯ ಕೇಳುವ ಅಣ್ಣಗಳಿರಾ,
ಕೇಳಿರಯ್ಯಾ:
ಅಂದೇಕೆ ವೀರಭದ್ರನ ಸೆರಗು ಸುಟ್ಟಿತ್ತು?
ಅಂದೇಕೆ ಮಹಾದೇವಿಯರ ಬಲಭುಜ ಹಾರಿತ್ತು?
ಇಂದೇಕೆ ಎನ್ನ ವಾಮನೇತ್ರ ಚರಿಸಿತ್ತು?
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೬೦ ॥

೧೫೩೮

ಶುಭಕ್ಕೆ ವಿಘ್ನವಲ್ಲದೆ ಅಶುಭಕ್ಕೆ ವಿಘ್ನವೆ ಅಯ್ಯಾ?
ಅಭಿಮಾನಿಗೆ ಅಂಜಿಕೆಯಲ್ಲದೆ ಅಪಮಾನಿಗೆ ಅಂಜಿಕೆಯೆ
ಅಯ್ಯಾ?
ಶುಭಾಶುಭ ಶಿವಾರ್ಪಣವೆಂದು ನಂಬು ಮನವೆ,
ಕಪಿಲಸಿದ್ಧಮಲ್ಲೇಂದ್ರನಾಲಯದಲ್ಲಿ. ॥ ೩೬೧ ॥

೧೫೩೯

ಜ್ಯೋತಿಷ್ಯವದು ಜ್ಯೋತಿಯಂತಯ್ಯಾ:
ಕೂಡುವ ಕಾಲಕ್ಕೆ ಪ್ರಕಾಶಮಯವು:
ಕೂಡದ ಕಾಲಕ್ಕೆ ದಗ್ಧಮಯವು.
ಇದರಂತುವನರಿದವ ವರರುಚಿಯಲ್ಲದೆ,
ಮತ್ತೊರ್ವನ ಕಾಣೆ, ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೬೨ ॥

೧೫೪೦

ನೋಡುವುದದು, ನೋಡಲೇಬೇಕು;
ಮಾಡುವುದದು, ಮಾಡಲೇಬೇಕು,
ನೋಡಿ ಮಾಡಿ ಮನದಲ್ಲಿ ಲೀಢವಾಗಿರಬಾರದು ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೬೩॥

೧೫೪೧

ಭಕ್ತಂಗೆ ಲಿಂಗಪೂಜೆ ಜಂಗಮದಾಸೋಹ ವಿಘ್ನವಯ್ಯಾ.
ಮಹೇಶಂಗೆ ವಿಷಯಂಗಳಳಿವುದೆ ವಿಘ್ನವಯ್ಯಾ.
ಪ್ರಸಾದಿಗೆ ನಿರ್ಮಲ ಮನಸ್ಸಾಗುವುದೆ ವಿಘ್ನವಯ್ಯಾ.
ನಿರ್ವಿಘ್ನರಾದವರನೊರ್ವರನು ಕಾಣೆ
ನಿರ್ವಯಲ ನಿಜಾನಂದದರುಹಿನ ಕುರುಹ ಬಿಟ್ಟು,
ಕಪಿಲಸಿದ್ಧಮಲ್ಲಿಕಾರ್ಜುನಾ ಮಹಾದೇವನಲ್ಲಿ. ॥ ೩೬೪ ॥

೧೫೪೨

ಶಾಸ್ತ್ರವೆಂಬುದು ಮನ್ಮಥಶಸ್ತ್ರವಯ್ಯಾ.
ವೇದಾಂತವೆಂಬುದು ಮೂಲ ಮನೋವ್ಯಾಧಿಯಯ್ಯಾ.
ಪುರಾಣವೆಂಬುದು ಮೃತವಾದವರ ಗಿರಾಣವಯ್ಯಾ.
ತರ್ಕವೆಂಬುದು ಮರ್ಕಟಾಟವಯ್ಯಾ.
ಆಗಮವೆಂಬುದು ಯೋಗದ ಘೋರವಯ್ಯಾ.
ಇತಿಹಾಸವೆಂಬುದು ರಾಜರ ಕಥಾಭಾಗವಯ್ಯಾ.
ಸ್ಮೃತಿಯೆಂಬುದು ಪಾಪಪುಣ್ಯವಿಚಾರವಯ್ಯಾ.
ಆದ್ಯರ ವಚನವೆಂಬುದು ಬಹುವೇದ್ಯವಯ್ಯಾ,
ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನ ತಿಳಿಯಲಿಕ್ಕೆ. ॥ ೩೬೫ ॥

೧೫೪೩

ಕಟ್ಟಿದ ಲಿಂಗವ ಬಿಟ್ಟು, ನಟ್ಟಿದ ಲಿಂಗವನಟ್ಟಿ,
ಮೊಟ್ಟೆ ಮೊಟ್ಟೆ ತಾವರೆ ಮೊದಲಾದ ಪುಷ್ಪವ
ಧರಿಸುವಾತನಿರವು
ಚಾಂಡಾಲನ ಇರವು ನೋಡಾ;
ಆತನ ಸಂಗ ಮಾದಿಗರ ಸಂಗ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೬೬ ॥

೧೫೪೪

ಧರಿಸಿದ ಲಿಂಗವ ವರಿಸಬಲ್ಲಡೆ ಗಿರಿಜೆಯ ಅರಸನೆಂಬೆ.
ಸ್ಥಾವರವ ಪೂಜಿಸಿದವನ ಉಮಾವರನೆಂಬವನ
ಗಾಪಿಲನೆಂಬೆನಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೬೭ ॥

೧೫೪೫

ಸಂತೆಯೊಳಿದ್ದ ಕಲ್ಲುಗಳೆಲ್ಲಾ ಲಿಂಗವೇನೊ ಅಯ್ಯಾ?
ಪರ್ವತ ವಾರಣಾಸಿ ಬದರಿಕಾ ಕ್ಷೇತ್ರಂಗಳಲ್ಲಿದ್ದ
ಕಲ್ಲುಗಳೆಲ್ಲಾ ಲಿಂಗವೇನೊ ಅಯ್ಯಾ?
ಅಂತಕಾಂತಕ ಶ್ರೀಗುರುಮೂರ್ತಿ ತನ್ನರುಹಿನ ರೂಪವಿಂತೆಂದು
ತೋರಿದ ಕಲ್ಲೇ ನಿಜಲಿಂಗ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೬೮ ॥

೧೫೪೬

ಮಡ್ಡಿನ ಲಿಂಗವು ಮೋಕ್ಷವ ಕೊಡಬಲ್ಲಡೆ,
ಅಡ್ಡ ಬೀಳುವುದೇಕಯ್ಯಾ ಗುರುವಿಗೆ?
ಜಡ್ಡಳಿದ ಭಕ್ತಂಗೆ ಭಕ್ತಿಯ ಜಡ್ಡು ಏಕಯ್ಯಾ ಗುರುವೆ,
ಮದ್ದು ಡಿಂಡಿಮನಾದಪ್ರಿಯ ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೩೬೯ ।

೧೫೪೭

ಲಿಂಗವ ಧರಿಸಿ ಭವಿಯಂಗನೆಯ ನೆರೆಯಬಲ್ಲಡೆ
ಷಟ್‌ಸ್ಥಲದವರೆಂಬೆನೆ?
ಲಿಂಗವ ಧರಿಸಿ ಅಂಗಜನ ಸ್ನೇಹವ ಕಟ್ಟಬಲ್ಲಡೆ,
ಜಂಗಮಮರ್ದಕ ಕಪಿಲಸಿದ್ಧಮಲ್ಲಿಕಾರ್ಜುನನ ಲಿಂಗವೆಂದು ಕಾಂಬೆ.
॥ ೩೭೦ ॥

೧೫೪೮

ಮಾಡಿ ಮಾಡದವ ಭಕ್ತನೆ ಅಯ್ಯಾ.
ಮುಟ್ಟಿ ಮುಟ್ಟದವ ಮಹೇಶನೆ ಅಯ್ಯಾ.
ಗೆಲವು ಸೋಲು ಒಂದು ವೇಳೆ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೭೧ ॥

೧೫೪೯

ಗೆದ್ದವ ಗರಡಿಕಾರನಲ್ಲದೆ ಬಿದ್ದು ಎದ್ದವ ಗರಡಿಕಾರನೆ ಅಯ್ಯಾ?
ಎದ್ದವ ಜಂಗಮವಲ್ಲದೆ ಬಿದ್ದು ಎದ್ದವ ಜಂಗಮವೆ ಅಯ್ಯಾ?
ಬೀಳಲಾಗದು ಜಂಗಮ; ಬೀಳಲಾಗದು ಜಗದ ಹಿರಿಯರು,
ಅಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೭೨ ॥

೧೫೫೦

ಭಕ್ತರಿಪ್ಪರು ಮೂಲೋಕದಲ್ಲಿ ;
ಮಹೇಶರಿಲ್ಲ ಲೋಕಲೋಕದಲ್ಲಿ
ಮಹೇಶರಿಪ್ಪರು ಎಮ್ಮ ಪ್ರಮಥರಲ್ಲಿ ;
ಮಹಾಶಾಂತರಿಲ್ಲ ನೋಡಾ, ಕಲಿಕಿಲ್ಮಿಷದಲ್ಲಿ ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೭೩ ॥

೧೫೫೧

ಬೇಡಿ ಉಂಡವ ಬೇಡಮುದ ಬೇಡನೆ ಅಯ್ಯಾ?
ಬೇಡಲಾರದವ ಬೇಡಮುದ ಬೇಡನಯ್ಯಾ.
ಕಾಡಿದ ಜಂಗಮ ಈಡಾಡಿದನಯ್ಯಾ ಭಕ್ತನ.

ಬೇಡವ ಜಂಗಮ ಭಕ್ತನ ಕೂಡಿಕೊಂಡ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೭೪ ॥

೧೫೫೨

ಬೇಡಲಾಗದು ಜಂಗಮ, ಬೇಡಿಸಲಾಗದು ಭಕ್ತ.
ಬೇಡಿಪವ ನೋಡದಿರೆ, ಬೇಡ ಬೇಡ ಭಕ್ತಿಯ ಆಡಂಬರವ,
ಮೃಡಮೂರ್ತಿ ಕಪಿಲಸಿದ್ಧಮಲ್ಲಿಕಾರ್ಜುನ. ॥ ೩೭೫ ॥

## ಐಕ್ಯಾತೀತ ಸ್ಥಲ

೧೫೫೩

ಲಿಂಗವ ಪೂಜಿಸಿ ಅಂಗವ ನಿರ್ವಯಲ ಮಾಡೆಹೆನೆಂಬವನ
ಮುಖವ ನೋಡಲಾಗದು.
ಕುರುಹಿಟ್ಟು ಪೂಜಿಸುವ ಲಿಂಗ ತಾನುಳಿವುದು ಭೂಮಿಯಲ್ಲಿ.
ಲಿಂಗವ ಧರಿಸಿದ ದೇಹ ನಿರ್ವಯಲಹುದು.
ಲಿಂಗಪೂಜೆಯಲ್ಲಿ ಹುರುಳಿಲ್ಲ, ಹುರುಳಿಲ್ಲ,
ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೭೬ ॥

೧೫೫೪

ಮುನ್ನ ಮಾಡಿದ ದೇಹ ನಿರ್ವಯಲಾದಡೆ,
ಧರಿಸುವುದೇಕೋ ಕಲ್ಲುಲಿಂಗವ, ಎಲೆ ಅಯ್ಯಾ?
ಅಂಗಗುಣ ಲಿಂಗಕ್ಕಾಯಿತ್ತು ; ಲಿಂಗಗುಣ ಅಂಗಕ್ಕಾಯಿತ್ತು.
ಇವೆಲ್ಲ ಭಾವಸಂಕಲ್ಪವಿಕಲ್ಪವು.
ಅಂಗ ಲಿಂಗವೆಂಬುದು ಪಳಮಾತು.
'ಲಿಂಗಮಧ್ಯೇ ಜಗತ್ಸರ್ವಂ' ಎಂಬುದು ಅಖಂಡಲಿಂಗ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೭೭ ॥

೧೫೫೫

ಗಟ್ಟಿ ಹಿಡಿದು ಗೊತ್ತ ಮುಟ್ಟಬಾರದಯ್ಯಾ.
ನೀರಲ್ಲಿಯ ಕ್ರೀಡೆ ಕುಂಬಳಕಾಯಿಗಲ್ಲದೆ
ದೊಡ್ಡ ಬಂಡೆಗುಂಟೇನಯ್ಯಾ?

ಚರಿಸುವ ಜೀವಿಗೆ ನಿರ್ವಯಲ ಪರವಸ್ತು ಲಿಂಗವಲ್ಲದೆ,
ಪಾಷಾಣಮಯ ಲಿಂಗವೆ ಅಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ? ॥ ೨೭೮॥

೧೫೫೬

ಕಲ್ಲು ಹಿಡಿದು ಅಲ್ಲಮನ ನೋಡುವೆವೆಂಬವರ
ಖುಲ್ಲ ಮನುಜರೆಂಬೆ.
ಕಲ್ಲು ಹಿಡಿದವರೆಲ್ಲ ಅಲ್ಲಮನಾಗಲು
ಭವಬೀಜ ಇನ್ನೆಲ್ಲಿಯದಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೭೯ ॥

೧೫೫೭

ಗುಣ ನೋಡುವಡೆ ಕೀಳು ಗುಣವಯ್ಯಾ ಧೇನುವಿನಲ್ಲಿ.
ನಿಂದಿಸುವ, ಬಂದ ಭಕ್ತರ ಹಾದು ಹೋಗುವ ಕುಂದುವಡೆಯದೆ,
ಮಲತ್ರಯ ಪೊಂದದ ಸಚ್ಚಿದಾನಂದ ಗುಣವುಂಟಯ್ಯಾ
ಮಹೇಶನಲ್ಲಿ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.॥ ೩೮೦ ॥

೧೫೫೮

ಗುಣ ನೋಡಿ ಬಿಟ್ಟವ ಕ್ಷೀರಘೃತವ ಕಾಣದೆ ಹೋದನಯ್ಯಾ.
ಗುಣ ನೋಡಿ ಹಳಿದವ ಅರುಹಿನ ಕುರುಹ ಅರಿಯದೆ
ಹೋದನಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೮೧ ॥

೧೫೫೯

ಕೀಳಾಗಿ ಹೋದಂತೆ ಆಳ್ದಂಗೆ ಅಮೃತ ಕೊಟ್ಟಿತ್ತಯ್ಯಾ [ಆವು].
ಆಳಾಗಿ ನಡೆದಂತೆ ಮೋಕ್ಷವ ಕೊಟ್ಟನಯ್ಯಾ, ಮಹೇಶನು.
ಕೀಳಾಳು ಬಹು ಲೇಸು ಕಂಡಯ್ಯಾ, ಲೋಕದ ಪ್ರಾಣಿಗಳಿಗೆ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೮೨ ॥

೧೫೬೦

'ತತ್ಪೂಜಾಲ್ಲಭತೇ ಮುಕ್ತಿಸ್ತತ್ಪೂಜಾಲ್ಲಭತೇ ಧನಂ'
ಎಂಬಾಗಮ ಪುಸಿಯಲ್ಲ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೩೮೩ ॥

೧೫೬೧

ಭಕ್ತಿಯ ಮಾಡುವುದು ಮಲತ್ರಯದೊಳಗಲ್ಲ ಮಹೇಶನು.
ಮುಕ್ತಿಯ ಪಡೆವಡೆ ಜಡಜೀವಿಯಲ್ಲ ನೋಡಾ ಭಕ್ತನು.
ಭಕ್ತನಿಗೆ ಭಕ್ತಿಮುಕ್ತಿ ಎಂಬ ಯುಕ್ತಿ ಸೊಗಸದಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೮೪ ॥

೧೫೬೨

ಚರ್ಮವ ಧರಿಸಿಪ್ಪನೆಂಬರು, ಅದು ಪುಸಿಯೇನಯ್ಯಾ?
ಪಂಚ ದೇಹಾಂತರ್ಯಾಮಿಯೆಂಬುದು ಶ್ರುತಿಸಿದ್ಧ.
'ಕೃತ್ತಿವಾಸಸೇ ನಮಃ, ಜಗದಂತರ್ಯಾಮಿನೇ ನಮಃ'
ಬ್ರಹ್ಮಕಪಾಲವ ಧರಿಸಿ ತೃಪ್ತಿಯಪ್ಪನೆಂಬರು,
ಅದು ಪುಸಿಯೇನಯ್ಯಾ? ಸರ್ವಮುಖದಲ್ಲಿ ಭೋಜಿಸುವುದಾಗಿ.
"ಮಹಾದೇವೀ ಚರಣಂ ಚ ಮುಖೇನಾಸ್ವಾದನಂ ಚಿರಂ।
ಕರೋಮಿ ಪ್ರಮುದಾ ಲೇಹ್ಯಂ ಚೋಹ್ಯಂ ಭಿಕ್ಷಾದಿಕಂ
ಮಹತ್॥"
ಎಂಬುದು ಆಗಮಸಿದ್ಧ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೩೮೫ ॥

೧೫೬೩

ಬಂದಿಲ್ಲವಡೆ ಪರ್ವತ ಸಂಧಿಯದೇಕಯ್ಯಾ ಯತಿಗೆ?
ಅಂದಾಶ್ರಯಿಸಿದ ಮಯೂರ ಚಂದವಾಯಿತ್ತೇನಯ್ಯಾ?
ಇವೆಲ್ಲ ಬರಿಯ ಭ್ರಮೆ!
ಸಂದಳಿದು ಇಂದುಧರ ತಾನಾಗಬಲ್ಲಡೆ,
ಗಿರಿ ಗ್ರಾಮ ವನವಾಸದ ಗೊಂದಿ ಏಕಯ್ಯಾ?
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೮೬ ॥

೧೫೬೪

ಊರಲ್ಲಿರುವ ವಸ್ತು ಅದೆ ನೋಡಯ್ಯಾ.
ವನದಲ್ಲಿರುವ ವಸ್ತು ಅದೆ ನೋಡಯ್ಯಾ.
ಚರಿಸಿ ಚರಿಸಿ ಜಗವನುದ್ಧರಿಸುವ ವಸ್ತು ಅದೆ ನೋಡಯ್ಯಾ.
ಮೂಲೋಕವರೆಯ ಕಪಿಲಸಿದ್ಧಮಲ್ಲಿಕಾರ್ಜುನನೆಂಬ
ಪರವಸ್ತು ಅದೆ ನೋಡಯ್ಯಾ. ॥ ೩೮೭ ॥

೧೫೬೫

ಒಂದಾದವಂಗೆ ಬಂದ ಸುಖದುಃಖಂಗಳ ಭಂಗವೇನಯ್ಯಾ?
ಒಂದಾದವಂಗೆ ಇಂದುಧರನೊಲವೇನಯ್ಯಾ?
ಒಂದಾದವಂಗೆ ಕನಕಲೋಷ್ಠವೆಂಬುದೇನಯ್ಯಾ?
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೮೮ ॥

೧೫೬೬

ಅಂದಿನ ಪರಿ ಇಂದಿನ ಪರಿ ಬೇರೆ ಕಂಡೆಯಾ, ಮನವೆ.
ಅಂದಿನ ವಿಷ ಇಂದಮೃತವಾಯಿತ್ತು ಕಂಡೆಯಾ, ಮನವೆ.
ಅಂದಿನ ದೇವಾಂಗನೆ ಇಂದು ನಿಮಗೆ ಚಿಚ್ಛಕ್ತಿಯಾಯಿತ್ತು
ಕಂಡೆಯಾ, ಮನವೆ.
ಅಂದಿನವ ನೀನಿಂದು ಕಪಿಲಸಿದ್ಧಮಲ್ಲಿಕಾರ್ಜುನನೆಂದು
ನಂಬು ಕಂಡೆಯಾ, ಮನವೆ. ॥ ೩೮೯ ॥

೧೫೬೭

ಅಂದಿನವರು ನಡೆದ ದಾರಿ ಇಂದಿನವರು ನಡೆಯರು.
ಇಂದಿನವರು ನಡೆದ ದಾರಿ ಅಂದಿನವರು ಕಾಣರು.
ಅಂದಿಂದೆಂಬ ದ್ವಂದ್ವ ಭೇದವನೆಂದೆಂದು ಕಾಣೆ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೯೦ ॥

೧೫೬೮

ಅಲ್ಲದಯ್ಯಗಳು ಇಲ್ಲದಾಟಕ್ಕೆ ಮೈಗೊಟ್ಟು ಕೆಡ ನೋಡಾ.
ಇಲ್ಲದಯ್ಯಗಳು ಅಲ್ಲದಾಟಕ್ಕೆ ಮೈಗೊಡರು ನೋಡಾ.
ಇಂದೆಲ್ಲ ಅಲ್ಲಮನ ಬಲ್ಲ ಬೋಧೆಯಿಂದ ಸಲ್ಲೀಲೆಯಾಯಿತ್ತು.
ವಲ್ಲಭೆ ಶಿವ ಕಪಿಲಸಿದ್ಧಮಲ್ಲಿಕಾರ್ಜುನದೇವಾ. ॥ ೩೯೧ ॥

೧೫೬೯

ವಿಟ ಬಂದಾನೆಂದು ನಟನೆಗಾರ್ತಿ ತಾ ವಿಟಸಂಪನ್ನೆಯಾದಳವ್ವಾ.
ವಿಟ ಬಾರದಿದ್ದಡೆ, ತಾ ಸಿಡಿಮಿಡಿ [ಗೊಂಡ]ಬ್ಬರ ನೋಡವ್ವಾ,
ಇದರ ತೋಟಿಯ ಕಳೆಯಬಂದಡೆ ನಿನ್ನ ತೋಟಿ ಕಟ್ಟಿತ್ತೆಲಗವ್ವಾ,
ಕಪಿಲಸಿದ್ಧಮಲ್ಲಿಕಾರ್ಜುನನೆಂಬ ಜಾರನಲ್ಲಿ. ॥ ೩೯೨ ॥

೧೫೭೦

ಜಾರನೆಂಬುವ ನಾಮ ಮಾರಹರಂಗೆ ಸಲುವಳಿಯಯ್ಯಾ!
ಜಾರನು ಜಾರನು ಕಪಿಲಸಿದ್ಧಮಲ್ಲಿಕಾರ್ಜುನನ
ಶರಣರ ಮನದ ಮನೆಯ ಕೊನೆಯಲ್ಲಿ. ॥ ೩೯೩ ॥

೧೫೭೧

ಜಾರನು ಜಾರನು ಭವದಲ್ಲಿ ನೋಡಾ ಮನವೆ.
ಜಾರನು ಜಾರನು ಸತ್ಯದಲ್ಲಿ, ನೋಡಾ ಮನವೆ.
ಜಾರನು ಜಾರನು ನಿನ್ನಲ್ಲಿ, ನೋಡಾ ಮನವೆ.
ಜಾರನು ಜಾರನು, ಕಪಿಲಸಿದ್ಧಮಲ್ಲಿಕಾರ್ಜುನ ಪಾದಯುಗವ,
ನೋಡಾ ಮನವೆ. ॥ ೩೯೪ ॥

೧೫೭೨

ಜಾರನಾದಡೆ ಗೋಪಾಲಮೂರ್ತಿಯಂತಿರಬೇಕು;
ಜಾರನಾದಡೆ ಹಾವರದ ಬೊಮ್ಮಯ್ಯನಂತಿರಬೇಕು;
ಜಾರನಾದಡೆ ಕಪಿಲಸಿದ್ಧಮಲ್ಲಿಕಾರ್ಜುನ ಯೋಗಿಯಂತಿರಬೇಕು,
ನೋಡಿರೊ, ಕಿರಿಯರಿರಾ! ॥ ೩೯೫ ॥

೧೫೭೩

ಜಾರನಲ್ಲವೆ ಭವಭವದಲ್ಲಿ ಸೌಂದರನಂಬಿ?
ಜಾರೆಯಲ್ಲವೆ ಭವಭವದಲ್ಲಿ ಸೂಳೆ ಪದ್ಮಲದೇವಿ?
ಜಾರನಾಗಿ, ಜಾರೆಯಾಗಿ ಜಾರಿದರಂದು
ಜನನ ಬವಣೆಯಲ್ಲಿ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೯೬ ॥

೧೫೭೪

ಕಲ್ಕುಟಿಗನ ಕೈಯಲ್ಲಿ ಕಲ್ಲುಳಿ ಕೊಟ್ಟಡೆ,
ಕೊಟ್ಟಂತಲ್ಲದೆ ಕಲ್ಲು ರೂಪಾಗಿ ಬಾರದಯ್ಯಾ.
ಆದ್ಯರ ವಚನ ಅವಿದ್ಯಾವಂತನ ಜಿಹ್ವೆಯಲ್ಲಿದ್ದಡೆ,
ಇದ್ದಂತಲ್ಲದೆ ವಿದ್ಯಾಮಯಕೀರ್ತಿಯಾಗದಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೯೭ ॥

೧೫೭೫

ಕುಳಿಗ್ರಾಳಿಯೊಳು ಕುಳಿತಂತಲ್ಲದೆ
ಉದರದ ಕುಳಿ ತಂಪಾಗುವುದೆ ಅಯ್ಯಾ?
ಕುಳಿರ್ವಾಶವಿದ್ಯೆಯ ನೋಡಿದಂತಲ್ಲದೆ,
ಭವದ ಕುಳಿ ತಪ್ಪುವದೆ ಅಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೯೮ ॥

೧೫೭೬

ಕೃಸರಪದಾರ್ಥ ಕೃಷೀವಲರುಂಡರೆಂದಡೆ ಆರ್ಶ್ಚವೇನಯ್ಯಾ?
ನೃಪನುಂಡನೆಂದಡೆ ಆಶ್ಚರ್ಯ.
ಚರ್ಯಾತೀತ ಉಂಡನೆಂದಡೆ ಬಹು ಆಶ್ಚರ್ಯ
ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೩೯೯ ॥

೧೫೭೭

ಭೂಪಾಲನೇರುವ ಕುದುರೆಯ ಗೋಪಾಲನೇರಬಹುದೆ ಅಯ್ಯಾ?
ಗೋಪಾಲನೇರುವ ಕುದುರೆಯ ಭೂಪಾಲನೇರಬಹುದೆ ಅಯ್ಯಾ?
ಗೋಪಾಲಂಗೆ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೪೦೦ ॥

೧೫೭೮

ಭೂಪಾಲನ ಕುದುರೆಯ ಗೋಪಾಲನೇರಿದಡೆ,
ಮನ್ನಣೆಯಲ್ಲದೆ ಅಮನ್ನಣೆಯೇನಯ್ಯಾ?
ಗೋಪಾಲನ ಕುದುರೆಯ ಭೂಪಾಲನೇರಿದಡೆ
ಅಮನ್ನಣೆಯಲ್ಲದೆ ಮನ್ನಣೆಯೇನಯ್ಯಾ?
ಭೂಪನ ವೇಷ ಗೋಪಂಗಾದುದು,
ಗೋಪನ ವೇಷ ಭೂಪಂಗಾದುದು ಪಾಪದ ಕೇಡು ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೦೧ ॥

೧೫೭೯

ಭೂಪಾಲನ ಡೊಂಕು ಗೋಪಾಲಂಗಲ್ಲವೆ
ಗೋಪಾಳಿಗೆಲ್ಲಿಹುದಯ್ಯಾ?

ಗೋಕುಲದ ಡೊಂಕು ಗೋಪಾಲಂಗಲ್ಲದೆ
ಗೋಪಾಳಿಗೆಲ್ಲಿಹುದಯ್ಯಾ?
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೦೨ ॥

೧೫೮೦

ಆದ್ಯರ ನುಡಿ ಆದ್ಯರಿಗಲ್ಲದೆ,
ವೇದ್ಯರಿಗೆ ಸಾಧ್ಯವಾಗದೆಂಬ ನುಡಿ ಹೊಲ್ಲ.
ಈತ ಆದ್ಯನೊ, ಮಧ್ಯದಲ್ಲಿಂದ ಬಂದಾತನೊ ಅಯ್ಯಾ?
ತಿಳಿದು ನೋಡುವಡೆ ಸ್ವಯಂವೇದ್ಯ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೦೩ ॥

೧೫೮೧

ವಾಗ್ರಚನೆಯೆಂಬುದು ಕರ್ಣಾಟವಯ್ಯಾ.
ಆದ್ಯರಾಜ್ಞೆ ಎಂಬುದು ಈಶ್ವರಗೆ ಜ್ಯೋತಿಯಯ್ಯಾ.
ಅಗಿವಗಿದು ನೋಡುವುದದು ಶುಕ ತೆಂಗು ತಿಂದಂತೆ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೦೪ ॥

೧೫೮೨

ಆದಿ ಉತ್ಪತ್ತ್ಯ ಅಹಂಕಾರದಿಂದ,
ಅಹಂಕಾರದ ಕೇಡು ಅರುಹಿನಿಂದ;
ಅರುಹಿನ ಕೇಡು ತಾ ಬಯಲಾದಿಂದ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೦೫ ॥

೧೫೮೩

ದೇಹದ ಗುಣ ಇರುವಂದಿಗೆ ತಪ್ಪದು ನೋಡಾ ಎಂಬಲ್ಲಿ
ಕ್ಷುಧೆ ತೃಷೆಗಳಿಗಲ್ಲದೆ ದುರ್ಗುಣಕ್ಕುಂಟೇನೋ ಅಯ್ಯಾ?
ಕ್ಷುಧೆ ತೃಷೆ ಇಲ್ಲದಿರೆ ದೇಹ ಬೀಹವಾಗುವುದು.
ದುರ್ಗುಣವಿಲ್ಲದಡೆ ಬೀಹವಾಗದು ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೦೬ ॥

೧೫೮೪

ಮರದೆಲೆಯ ತಂದು,
ಕುರುಹಿಡಬಾರದ ಪರಮ ಅರುಹ ಪೂಜಿಸಿದ
ಮರುಳರ ನೋಡಿ ಬೆರಗಾದೆನಯ್ಯಾ.
ಕುರುಹ ಪೂಜೆ ಅರುಹು ಆದಾಗಲೆ ಮರಹಿನ ಕೇಡು.
ಮರವೆಯ ಮುಂದಿಟ್ಟಡೆ ಸಿರಿಗರ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ‖ ೪೦೭ ‖

೧೫೮೫

ಅಂಗೈಯೊಳಗಣ ಲಿಂಗಮೂರ್ತಿಯ ಕಂಗಳಲ್ಲಿಂಗಗೊಟ್ಟಡೆ,
ತಿಂಗಳ ಸೂಡನಾದೆ ನೋಡಾ ಅಯ್ಯಾ.
ಮಂಗಳಮೂರ್ತಿ ಗಂಗಾಜೂಟಾಂಗಮಯ
ಕಪಿಲಸಿದ್ಧ ಮಲ್ಲಿಕಾರ್ಜುನಲಿಂಗ ಬೇರೆಂದರಿಯಲಿಲ್ಲ ನೋಡಾ,
ನಿಜದ ನಿರ್ವಯಲಲ್ಲಯ್ಯನೆ. ‖ ೪೦೮ ‖

೧೫೮೬

ಭೂಪ ಗೋಪನ ನೆನೆದಡೆ ಗೋಪನಾಗಬಲ್ಲನೆ?
ಅಂದಿನ ಗಣಂಗಳ ಕಂಡು, ಇಂದಿನ ಜೀವಿಗಳು ನೆನೆನೆನೆದು
ಧನ್ಯರಾದೆವೆಂಬ ಪರಿಯ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.
‖ ೪೦೯ ‖

೧೫೮೭

ನೆನೆದಡಾಗದು ಸಾಧಿಸದನ್ನಕ್ಕ ;
ಸಾಧಿಸಿದಡಾಗದು ತಿಳಿಯದನ್ನಕ್ಕ ;
ತಿಳಿಯದಡಾಗದು ಎಳೆ ಭಾಲಚಂದ್ರಧರ
ಕಪಿಲಸಿದ್ಧಮಲ್ಲಿಕಾರ್ಜುನನ ಅಮಳ ಕೈವಲ್ಯಪದವು.‖ ೪೧೦ ‖

೧೫೮೮

ಹುಟ್ಟಿ ಹುಟ್ಟಿ ಹೋಗುವದದು ಬಹುಕಷ್ಟವಯ್ಯಾ ;
ಕೆಟ್ಟು ಕೆಟ್ಟು ಹೋಗುವದದು ಬೆಟ್ಟದ ಸಾಮರ್ಥ್ಯವಯ್ಯಾ.
ಹುಟ್ಟಿ ಹೋದವರು ಕೋಟಾನುಕೋಟಿ,

ಕೆಟ್ಟು ಹೋದವರು ಒಬ್ಬರೂ ಇಲ್ಲ ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೧೧ ॥

೧೫೮೯

ಹುಟ್ಟಿದ ಕಲ್ಲು ಲಿಂಗವಾಯಿತ್ತು ;
ಹುಟ್ಟಿದ ಕಲ್ಲು ದೇವಾಲಯವಾಯಿತ್ತು ;
ಹುಟ್ಟಿದ ಪಶು ಹೊಲಕ್ಕೆ ಬಂದಿತ್ತು ;
ಹುಟ್ಟಿದ ಮರ ಕಟ್ಟಳೆಯಾದವು.
ಹುಟ್ಟಿ ಕೀರ್ತಿಯ ಮೆಟ್ಟಿದವ ಇಟ್ಟ ಇಟ್ಟ ಹುಳಿಯನ್ನದಂತೆ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೧೨ ॥

೧೫೯೦

ಕಸವಿದ್ದು ಕೃಷೀವಲನಿಲ್ಲದೆ,
ಅಸಮಾಕ್ಷವಲನಿಲ್ಲದೆ ಅಸಮಾಕ್ಷಗುಣವಿರೆ,
ಈ ಕಸ ಗುಣದ ಕೇಡು ಕಾಣಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೧೩ ॥

೧೫೯೧

ಕೋಡಗಂಗೆ ನಾಲ್ಕರ ಚೇಳು ಕಡಿಯಿತ್ತು ನೋಡಾ.
ಚೇಳೊಂದರ ಮೂಲಿಕೆ ಹಾಳು ಮಾಡಿತ್ತು ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೧೪ ॥

೧೫೯೨

ಒಂದು ಮುಳ್ಳು ಮೂರು ಲೋಕದ ಜನರಿಗೆ ನಟ್ಟಿತ್ತು.
ಆ ನಟ್ಟ ಮುಳ್ಳು ಮುರಿಯಬೇಕೆಂಬಾರರಿಯರು.
ಆ ಮುಳ್ಳು ಮುರಿದವ ಮೂಲೋಕದರಸು
ಕಪಿಲಸಿದ್ಧಮಲ್ಲಿಕಾರ್ಜುನ ನೋಡಾ,
ಪಾವಿನಹಾಳ ಕಲ್ಲಿನಾಥಾ. ॥ ೪೧೫ ॥

೧೫೯೩

ಮುಳ್ಳು ಮೂರರ ಮೇಲೆ ಕಳ್ಳ ಮೂರುತಿ ತಿರುಗುತ್ತಿಹ ನೋಡಾ.
ಒಳ್ಳೆ ಗುಣಗಳ್ಳರಿಗೆ ತನ್ನ ತಳ್ಳಿ ತೋರಿಸುವ ನೋಡಾ.
ಜಳ್ಳು ಜೀವಗಳ್ಳರಿಗೆ ಸಾಧ್ಯವದು ಎಳ್ಳಿನಿತಿಲ್ಲ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೧೬ ॥

೧೫೯೪

ನಿತ್ಯ ನಿತ್ಯ ಕೋಣವ ತಿನ್ನಬಲ್ಲಡೆ,
ಸದಾಚಾರಿ ಜಂಗಮವೆಂಬೆ.
ನಿತ್ಯ ನಿತ್ಯ ಕೋಡಗನ ಹಿಡಿದು ಆಡುಗಳ ತಿನಬಲ್ಲಡೆ
ಪ್ರಾಣಲಿಂಗಿ ಎಂಬೆ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೧೭ ॥

೧೫೯೫

ಬಂದ ದಾರಿ ಬಿಟ್ಟವನೆ ಜೀವನ್ಮುಕ್ತ ;
ಬಂದ ದಾರಿ ಮೆಟ್ಟದವನೆ ಜೀವನ್ಮುಕ್ತ ;
ಬಂದ ದಾರಿಯನರಿಯದವನೆ ಸಕಲ ಸಾಮ್ರಾಜ್ಯಪದಸ್ಥ ;
ಕಪಿಲಸಿದ್ಧಮಲ್ಲಿಕಾರ್ಜುನನವನು. ॥ ೪೧೮ ॥

೧೫೯೬

ವಚನಾನುಭವ ವಾಗ್ರಚನೆಯಲ್ಲ ಮನವೆ,
ವಚನಾನುಭವ ವಾಗ್ರಚನೆಯಲ್ಲ.
'ವಚನಾನುಭವೋ ವಚೋ ನ' ಎಂಬುದು ಶ್ರುತಿಸಿದ್ಧ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೧೯ ॥

೧೫೯೭

ಪ್ರಸಾದ ಪ್ರಸಾದವೆಂದು ಆಡಂಬರಿಸುವ
ಅಣ್ಣಗಳ ಪಥ ನೋಡಿ ಕೈಬಿಡಿಮು ನಕ್ಕಂತಾಯಿತಯ್ಯಾ.
ಪ್ರಸಾದವಿಲ್ಲದಿರೆ ಲೋಕರಂಜನೆಯೊ ಪ್ರಸಾದವೊ?
'ಬಹು ವರ್ತಂತೇ ಪ್ರಾಣಿನೋ ಬಹುಶಃ ಶಿವೇ'
ಎಂಬ ವೀರತಂತ್ರ ಪುಸಿಯೇನಯ್ಯಾ?

ಪ್ರಸಾದ ಪ್ರಸಾದವೆಂದು ಮುಖದೋರದೆ ಮೂಗ ಮುಚ್ಚಿ
ನುಂಗುವರ ಕಂಡು ಹೊಟ್ಟೆ ಜೋಲಾಡುವಂತೆ ನಕ್ಕ ಕರುಣಾಕರ
ಕಪಿಲಸಿದ್ಧಮಲ್ಲಿಕಾರ್ಜುನದೇವನು. ॥ ೪೨೦ ॥

೧೫೯೮

ಅಟ್ಟುಂಬುವುದದು ಜೀವಕ್ಕೆ ಪ್ರಸಾದವಲ್ಲದೆ
ನಿರ್ಜೀವಕ್ಕೇನೊ ಅಯ್ಯಾ?
ಜೀವಭಾವವಳಿದು, ಜನನಭಾವವಡಗಿ,
ಜಗದಂತರ್ಯಾಮಿಯೆಂಬುದು ಮಹಾಪ್ರಸಾದ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೨೧ ॥

೧೫೯೯

ಅಟ್ಟುಂಬುದು ಪ್ರಸಾದವಾದಡೆ,
ಇದ್ದ ಪ್ರಾಣಿಗಳೆಲ್ಲ ಮೋಕ್ಷವಂತರಾಗಬಾರದೇನೊ ಅಯ್ಯಾ?
ಅಟ್ಟುಂಬುದದು ಭೂತ!
ಅಡದೆ ಉಣದೆ ನಿಜವಡಗಿದ ರೂಹ ಅರಿಯಬಲ್ಲಡೆ,
ಅದು ಮಹಾಪ್ರಸಾದ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೪೨೨ ॥

೧೬೦೦

ಗುರು ಮುಟ್ಟಿ ಬಂದ ಶುದ್ಧ ಪ್ರಸಾದಿಯಾದಡೆ,
ವಾತ ಪಿತ್ತ ಶ್ಲೇಷ್ಮವಳಿದಿರಬೇಕು.
ಲಿಂಗ ಮುಟ್ಟಿ ಬಂದ ಸಿದ್ಧ ಪ್ರಸಾದಿಯಾದಡೆ,
ಆದಿವ್ಯಾಧಿಗಳಿಲ್ಲದಿರಬೇಕು.
[ಜಂಗಮ ಮುಟ್ಟಿ ಬಂದ ಪ್ರಸಿದ್ಧ ಪ್ರಸಾದಿಯಾದಡೆ,
ಅಜ್ಞಾನರೋಗವಿಲ್ಲದಿರಬೇಕು.]
ಮೂರರ ಅರುಹು ಗಟ್ಟಿಗೊಳ್ಳುವ ಮಹಾಪ್ರಸಾದಿಯಾದಡೆ,
ಮರಣವಿಲ್ಲದಿರಬೇಕು.
ಪ್ರಸಾದ ಪ್ರಸಾದವೆಂದು ತ್ರಿವಿಧ ಪ್ರಸಾದವ ಸೇವಿಸಿ,
ಸರ್ವರಂತೆ ಮಲತ್ರಯಕ್ಕೊಳಗಾಗುವರ
ಪ್ರಸಾದಿಗಳೆಂದು ನಂಬದಿರಾ,
ಕಪಿಲಸಿದ್ಧಮಲ್ಲಿಕಾರ್ಜುನ ಸಾಕ್ಷಿಯಾಗಿ ಕಬ್ಬಿಲರಿರಾ. ॥ ೪೨೩ ॥

೧೬೦೧

ಕರಣಾದಿಗಳೆಲ್ಲ ಪರಶಿವನೆಂದ ಬಳಿಕ,
ಆ ಕರಣಾದಿಗಳ 'ಭೋಜನ ಕೊಳ್ಳು' ಎನಬಾರದೆಂದು,
'ಪರಶಿವಪ್ರಸಾದ' ಎಂಬ ನಾಮವಿಟ್ಟನಯ್ಯಾ ಶ್ರೀಗುರು.
ಆ ಕಾರಣ ಬಂದ ಪ್ರಸಾದವೆಲ್ಲ ಶಿವಪ್ರಸಾದವೆಂದು
ಭುಂಜಿಸಬೇಕಲ್ಲದೆ,
ಕಟು ಆಮ್ಲ ತಿಕ್ತವೆಂದು ಭೋಗಿಸಿದಡೆ,
ಭವ ತಪ್ಪದು ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.॥ ೪೨೪ ॥

೧೬೦೨

ಮಜ್ಜಿಗೆ ಹುಳಿ ಎಂದಡೆ ಅದು ಗೊಜ್ಜಿನ ಹಾದಿ ನೋಡಾ,
ಮನವೆ.
ಸಜ್ಜಿಕ ಸ್ವಾದುವೆಂದಡೆ, ಕಜ್ಜಿಯ ತಿಂಡಿಯಂತೆ ಕಾಣಾ, ಮನವೆ.
ಸ್ವಾದ ಹುಳಿ ಶಿವಸ್ವರೂಪವೆಂದೆಡೆ ಮಹಾಪ್ರಸಾದವಾಯಿತ್ತು,
ಎನ್ನ ಗುರು ಚೆನ್ನಬಸವಣ್ಣಂಗೆ ಕಾಣಾ ಮನವೆ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೨೫ ॥

೧೬೦೩

ಜ್ಞಾನವದು ದುರ್ಲಭವಲ್ಲ ,
ಅದರ ಭಾವ ದುರ್ಲಭವಯ್ಯಾ.
ಭಾವವದು ದುರ್ಲಭವಲ್ಲ ,
ಅದರ ಏಕತ್ವವದು ದುರ್ಲಭ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೨೬ ॥

೧೬೦೪

ನೆಲೆಗೊಳ್ಳದು ಎಂದು ಬಿಡಬಾರದಯ್ಯಾ.
ನೆಲೆಯದು ನೆಲೆಯದು ಎಂದು ಅನುಭವಿಸಬೇಕಯ್ಯಾ.
ನೆಲೆಯಿಲ್ಲದದು ನೆಲೆಯಲ್ಲಿಹುದಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೨೭ ॥

೧೬೦೫

ಕಲ್ಲು ನೀರಲ್ಲಿದ್ದಂತಲ್ಲದೆ,
ನೀರ ನುಂಗಿ ನೀರಾಗಬಹುದೆ ಅಯ್ಯಾ?
ಅಗ್ನಿ ನೀರಲ್ಲಿದ್ದಂತಲ್ಲದೆ,
ನೀರ ನುಂಗಿ ನೀರಾಗಬಹುದೆ, ಅಯ್ಯಾ?
ಪ್ರಸಾದಿ ಭವದಲ್ಲಿದ್ದಂತಲ್ಲದೆ,
ಭವ ನುಂಗಿ ಭವಿಯಾಗಬಹನೆ, ಅಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ? ॥ ೪೧೮ ॥

೧೬೦೬

'ಪಿಕಾರಿಣ್ಯಾಂ ತಸ್ಯಾಂ' ಎಂಬ ಶ್ರುತಿ ಪ್ರಸಿದ್ಧವು.
ಪಿಕಾರ ಪ್ರಕೃತಿಯಲ್ಲಲ್ಲದೆ ಪುರುಷನಲ್ಲಿಲ್ಲವಯ್ಯಾ.
ಪುರುಷನಿಲ್ಲದಿರೆ ಪ್ರಕೃತಿಯ ಕರ್ಮ ನಡೆಯದಯ್ಯಾ.
ಸೂರ್ಯಕಿರಣದಿಂದಾದ ಜಲದಲ್ಲಿ ಸೂರ್ಯಬಿಂಬವಿರೆ,
ನಿಜ ಸೂರ್ಯನ ರೂಹು ಕೆಡದಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೧೯ ॥

೧೬೦೭

ಒಂದೆ ವಸ್ತು ಅವಸ್ಥಾತ್ರಯ ಕಿಂಚಿಜ್ಞತ್ವ ಹೊಂದಿ
ಜೀವನೆನಿಸಿತ್ತಯ್ಯಾ,
ಆ ಜೀವ ಕರ್ತೃತ್ವಭೋಕ್ತೃತ್ವಕ್ಕೆ ಒಳಗಾಗಿ
'ದೇಹ ನಾನು' ಎಂದಿತ್ತಯ್ಯಾ.
'ದೇಹ ನಾನು' ಎಂಬುವ ವಾಸನೆಯೊಳಗಾಗಿ,
ಕಾಲತ್ರಯಕ್ಕೊಳಗಾಗಿ, ಅಸ್ವತಂತ್ರನಾಗಿ ನೆಲಸಿತ್ತು ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೨೦ ॥

೧೬೦೮

ದೇಹ ನಾನಲ್ಲ , ಜೀವ ನಾನಲ್ಲವೆಂಬುದದು ಶಿವನೆನಿಸಿತ್ತು.
ಶಿವ-ಜೀವಂಗೆ ಭೇದವೆಂಬುದು ಇಲ್ಲ ಕಾಣಾ.
ಉಪಕವಿಷ್ಟತೆಯಲ್ಲಿ, ಗಗನಪರಿಪೂರ್ಣವಲ್ಲಿ,

ರವಿ ತಾರೆ ಮೇಘವಾದಂತೆ-
ಪರಿಪೂರ್ಣ ವಸ್ತುವೆ ಚಿದಾಕಾಶದಲ್ಲಿ ಶಿವ ಜೀವ ಮಾಯಾ
ಪ್ರಕೃತಿ ಎನಿಸಿತ್ತಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೩೧ ॥

೧೬೦೯

ಗಣಿತ ಒಂದಕ್ಕೆ ಪೂಜೆ ಒಂದೆರಡು ಮೂರಾದಲ್ಲಿ
ಹತ್ತು ಶತ ಸಹಸ್ರವೆನಿಸಿತ್ತಯ್ಯಾ.
ಪರಾತ್ಪರವಸ್ತು ಉಪಾಧಿವಶದಿಂದ
ಈಶತ್ವ ಜೀವತ್ವ ಪ್ರಕೃತಿ ಮೊದಲಾದ ಇಂದ್ರಜಾಲವಾಯಿತ್ತು
ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೩೨ ॥

೧೬೧೦

ಎಲ್ಲ ಪುರಾಣಕ್ಕೆ ಹೆಸರುಂಟು, ನಮ್ಮ ಪುರಾಣಕ್ಕೆ ಹೆಸರಿಲ್ಲ
ನೋಡಯ್ಯಾ.
ಲಿಂಗದ ಮಹತ್ವವ ಹೇಳಿದಲ್ಲಿ ಲಿಂಗಪುರಾಣವೆನಿಸಿತ್ತು.
ಷಣ್ಮುಖನ ಮಾಹಾತ್ಮ್ಯವ ಹೇಳಿದಲ್ಲಿ ಸ್ಕಂದಪುರಾಣವೆನಿಸಿತ್ತು.
ವೀರಭದ್ರನ ಮಾಹಾತ್ಮ್ಯವ ಹೇಳಿದಲ್ಲಿ ದಕ್ಷಖಂಡವೆನಿಸಿತ್ತು.
ಶಿವನ ಮಹಿಮೆ, ಕಾಶೀಮಹಿಮೆಯ ಹೇಳಿದಲ್ಲಿ
ಶಿವಪುರಾಣ ಕಾಶೀಖಂಡವೆನಿಸಿತ್ತು.
ಪಾರ್ವತಿಯ ಮಾಹಾತ್ಮ್ಯವ ಹೇಳಿದಲ್ಲಿ ಕಾಳೀಪುರಾಣವೆನಿಸಿತ್ತು.
ನಮ್ಮ ಪುರಾಣ ಹೆಸರಿಡಬೇಕೆಂದಡೆ,
ನಿಶ್ಶಬ್ದ ನಿರವಯಲ ಪುರಾಣ ತಾನೆಯಾಯಿತ್ತು ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೩೩ ॥

೧೬೧೧

ಪುರಾಣವ ಹೇಳಿದವರೆಲ್ಲ ಪುರಾಣಿಕರು ನೋಡಾ.
ಭವಭವದ ಶಾಸ್ತ್ರವ ಹೇಳಿದವರೆಲ್ಲ ಶಾಸ್ತ್ರಿಗಳು ನೋಡಾ.
ವೇದಾಂತವ ಹೇಳಿದವರೆಲ್ಲ ವೇದಾಂತಿಗಳು ನೋಡಾ
ಭವಭವದಲ್ಲಿ.
ಆದ್ಯರ ವಚನವ ಹೇಳಿದವರೆಲ್ಲ ಪುರಾತರು ನೋಡಾ
ಭವಭವದಲ್ಲಿ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೩೪ ॥

೧೬೧೨

ಅಲ್ಲಯ್ಯಗಳ ವಚನ ಎರಡೆಂಬತ್ತು ಕೋಟಿ.
ಅಪ್ಪಯ್ಯಗಳ ವಚನ ನಾಲ್ಕು ಲಕ್ಷದ ಮೂವತ್ತಾರು ಸಾಸಿರ.
ಎಮ್ಮಯ್ಯಗಳ ವಚನ ವಚನಕ್ಕೊಂದು.
ನೀಲಮ್ಮನ ವಚನ ಲಕ್ಷದ ಹನ್ನೊಂದು ಸಾಸಿರ.
ಗಂಗಾಂಬಿಕೆಯ ವಚನ ಲಕ್ಷದ ಎಂಟು ಸಾಸಿರ.
ಎಮ್ಮಕ್ಕ ನಾಗಾಯಿಯ ವಚನ ಮೂರುಲಕ್ಷದ ತೊಂಬತ್ತಾರು ಸಾಸಿರ.
ಮಡಿವಾಳಣ್ಣನ ವಚನ ಮೂರು ಕೋಟಿಮುನ್ನೂರು.
ಹಡಪದಯ್ಯಗಳ ವಚನ ಹನ್ನೊಂದು ಸಾಸಿರ.
ಮರುಳಸಿದ್ಧನ ವಚನ ಅರುವತ್ತೆಂಟು ಸಾಸಿರ.
ಇಂತಪ್ಪ ವಚನದ ರಚನೆಯ ಬಿಟ್ಟು,
ಹುಡಿಮಣ್ಣ ಹೊಯ್ಯದೆ ಮಾಬನೆ,
ಕುತ್ಸಿತ ಕಾವ್ಯಾಲಂಕಾರ ನೋಡುವರ ನೋಡಿ,
ಮಹಾದೇವ ಕಪಿಲಸಿದ್ಧಮಲ್ಲಿಕಾರ್ಜುನ. ॥ ೪೩೫ ॥

೧೬೧೩

ಎಮ್ಮ ವಚನದೊಂದು ಪಾರಾಯಣಕ್ಕೆ
ವ್ಯಾಸನದೊಂದು ಪುರಾಣ ಸಮ ಬಾರದಯ್ಯಾ.
ಎಮ್ಮ ವಚನದ ನೂರೆಂಟರಧ್ಯಯನಕ್ಕೆ
ಶತರುದ್ರೀ[ಯಯಾಗ] ಸಮ ಬಾರದಯ್ಯಾ.
ಎಮ್ಮ ವಚನದ ಸಾಸಿರ ಪಾರಾಯಣಕ್ಕೆ
ಗಾಯತ್ರೀ ಲಕ್ಷ ಜಪ ಸಮ ಬಾರದಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೩೬ ॥

೧೬೧೪

ನಮ್ಮ ನಡಾವಳಿಗೆ ನಮ್ಮ ಪುರಾತರ ನುಡಿಯೆ ಇಷ್ಟವಯ್ಯಾ.
ಸ್ಮೃತಿಗಳು ಸಮುದ್ರದ ಪಾಲಾಗಲಿ;
ಶ್ರುತಿಗಳು ವೈಕುಂಠವ ಸೇರಲಿ;

ಪುರಾಣಗಳು ಅಗ್ನಿಯ ಸೇರಲಿ;
ಆಗಮಗಳು ವಾಯುವ ಹೊಂದಲಿ.
ಎಮ್ಮ ನುಡಿ, ಕಪಿಲಸಿದ್ಧಮಲ್ಲಿಕಾರ್ಜುನ ಮಹಾಲಿಂಗವ
ಹೃದಯದೊಳು ಗ್ರಂಥಿಯಾಗಿರಲಿ. ॥ ೪೩೭ ॥

೧೬೧೫

ವಚಿಸಿ ಅನುಭವಿಯಾಗದವ ಪಿಶಾಚಿಯಯ್ಯಾ;
ವಚಿಸಿ ಅನುಭವಿಯಾದವ ಪಂಡಿತನಯ್ಯಾ.
ವಿದ್ಯೆಯೆಂಬುದು ಅಭ್ಯಾಸಿಕನ ಕೈವಶ.
ಅವಿದ್ಯೆಯೆಂಬುದು ಸರ್ವರಲ್ಲಿ ವಶ.
ವಿದ್ಯಾವಿದ್ಯೆಯನರಿತು ಜಗದ್ವೇದ್ಯನಾಗಬಲ್ಲಡೆ,
ಮಹಾಪಂಡಿತ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.॥ ೪೩೮ ॥

೧೬೧೬

ಓದಿದ ಫಲ ಶಿವಲೆಂಕ ಮಂಚಣ್ಣಂಗಾಯಿತ್ತು.
ಓದಿದ ಫಲ ಹಲಾಯುಧಂಗಾಯಿತ್ತು.
ಓದಿದ ಫಲ ಮಲಯರಾಜಂಗಾಯಿತ್ತು.
ಓದಿದ ಫಲ ಜನ್ಮವಳಿದವಂಗಾಯಿತ್ತು ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೩೯ ॥

೧೬೧೭

ಓದಿದ ಫಲ ಕೂಚಭಟ್ಟನಂತಾಗಬಾರದು.
ಓದಿದ ಫಲ ಪರಾಶರನಂತಾಗಬಾರದು.
ಓದಿದ ಫಲ ಮಯೂರನಂತಾಗಬಾರದು.
ಓದಿದ ಫಲ ನಮ್ಮ ಹಾವಿನಹಾಳ ಕಲ್ಲಯ್ಯನ
ಮನೆಯ ಶ್ವಾನನಂತಾಗಬೇಕು ಕಾಣಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೪೦ ॥

೧೬೧೮

ಓದುವುದದು ಸದ್ಗುಣಕ್ಕಲ್ಲದೆ ಕಿವಿಯನೂದುವುದಕ್ಕೇನೋ,
ಅಯ್ಯಾ?

ಮಾಡುವ ಭಕ್ತಿ ಮೋಕ್ಷಕ್ಕಲ್ಲದೆ ಡಂಬಾಚಾರಕ್ಕೇನೋ, ಅಯ್ಯಾ?
ಆಡುವ ವೇಷ ಪ್ರವೃಕ್ಕಲ್ಲದೆ ಜನರಾಡಂಬರಕ್ಕೇನೋ, ಅಯ್ಯಾ?
ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೪೧ ॥

೧೬೧೯

ಲೋಕ ತನ್ನೊಳಗಾದ ಬಳಿಕ, ಲೋಕದ ಸೊಮ್ಮು
ತನಗೇಕಯ್ಯಾ?
ಪರುಷ ತಾನಾದ ಬಳಿಕ, ಸುವರ್ಣದ ಸೊಮ್ಮು ತನಗೇಕಯ್ಯಾ?
ಧೇನು ತಾನಾದ ಬಳಿಕ ಅನ್ಯಗೋವಿನ ಸೊಮ್ಮು ತನಗೇಕಯ್ಯಾ?
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೪೨ ॥

೧೬೨೦

ದರಿದ್ರ ಧನಾಢ್ಯಂಗಂಜುವನಲ್ಲದೆ ದರಿದ್ರಂಗಂಜುವನೆ?
ದೊರೆ ಮಹಾದೊರೆಗಂಜುವನಲ್ಲದೆ ದೊರೆತನಕ್ಕಂಜುವನೆ?
ಪರಶಿವಯೋಗಿ ಅಂತರ್ಯಾಮಿಗಂಜುವನಲ್ಲದೆ,
ಲೋಕದ ಗುಂಗಿಗಳಿಗಂಜುವನೆ, ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೪೪೩ ॥

೧೬೨೧

ಭಾವಕ್ಕಂತರ್ಯಾಮಿಯಲ್ಲದೆ,
ನಡೆವ ಆಚಾರಕ್ಕೆ ಅಂತರ್ಯಾಮಿಯೇನಯ್ಯಾ?
ಭಾವಕಿ ಹಾವಭಾವಕ್ಕನುಕೂಲೆಯಲ್ಲದೆ,
ನಿರ್ಭಾವಂಗನುಕೂಲೆಯೇನಯ್ಯಾ?
ಭಾವ ಭಕ್ತಿಯಲ್ಲಲ್ಲದೆ ಪೀರಭಕ್ತಿಯಲ್ಲೇನಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ? ॥ ೪೪೪ ॥

೧೬೨೨

ಆಕಾಶ ಪಾಷಾಣ ಮಾಡಬಲ್ಲಾದಡೆ ಯೋಗಿ.
ಪಾಷಾಣ ಆಕಾಶ ಮಾಡಬಲ್ಲಾದಡೆ ಯೋಗಿ.
ಆಕಾಶದಲ್ಲಿಯ ಬಯಲು ಪಾಷಾಣದಲ್ಲಿಪ್ಪುದು
ಏಕೀಯವಾಗಬಲ್ಲಾದಡೆ ಶಿವಯೋಗಿ;
ಕಪಿಲಸಿದ್ಧಮಲ್ಲಿಕಾರ್ಜುನ ಆತನೆ ನೋಡಾ. ॥ ೪೪೫ ॥

೧೬೨೩

ನೀರಿಲ್ಲದ ಭೂಮಿಯಲ್ಲಿ ಮೂರು ಹೇರು ನವಣೆಯ ಬೆಳೆದುದ
ಕಂಡೆ.
ಆ ನವಣೆ ಅಳೆದುಕೊಡುವಡೆ ಇಮ್ಮಡಿ ಮುಮ್ಮಡಿಯಾದುದ
ಕಂಡೆ.
ಕೊಂಡವಂಗೆ ಜನ್ಮಜನ್ಮದಲ್ಲಿ ಭೋಗಿಸುವುದಕ್ಕೆ ಕಣಜಗಳಾದುದ
ಕಂಡೆ
ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೪೬ ॥

೧೬೨೪

ಸೊಲ್ಲಿಗೆ ಒಂದು ಖಂಡುಗ ನವಣೆ ನುಂಗಿತ್ತಯ್ಯಾ.
ಆ ನವಣೆಯ ಹೊಯ್ದಳೆಯಬೇಕೆಂದಡೆ ಸ್ಥಲ ಸಾಲದಯ್ಯಾ-
ಹಲಬರು ಛಲವಿಡಿದುವಿಡಿದು ಹೊಲಬುಗೇಡಿಯಾದರು
ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೪೭ ॥

೧೬೨೫

ಒಂದಾಕಳು ಒಂಬತ್ತೂರ ಸೋದು ಸವಿಯಹೋದಡೆ,
ಕೈವಲ್ಯ ಸೂರೆಯೆಲ್ಲಿಹುದಯ್ಯಾ?
ಒಂಬತ್ತು ಆಕಳು ಒಬ್ಬ ಸೋದ ಸವಿಗಾರಂಗೆ ಬೇಹುದೇನಯ್ಯಾ,
ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ? ॥ ೪೪೮ ॥

೧೬೨೬

ಅರುಹು ತಲೆದೋರಿದಲ್ಲಿ ವಿಷ ಬೆಲ್ಲವು ಇಕ್ಷುರಸವಾಯಿತ್ತು.
ಅರುಹು ತಲೆದೋರಿದಲ್ಲಿ ಅಂಬರ ಅವಯವಕ್ಕೆ ಹೊಂದಿತ್ತಯ್ಯಾ.
ಅರುಹು ತಲೆದೋರಿದಲ್ಲಿ ಕಪಿಲಸಿದ್ಧಮಲ್ಲಿಕಾರ್ಜುನನ ಕುರುಹು
ನಾನೆಂದು ತಿಳಿಯಬಂದಿತ್ತಯ್ಯಾ ಯೋಗಿನಾಥಾ. ॥ ೪೪೯ ॥

೧೬೨೭

ಯೋಗಿನಾಥನ ಒಲುಮೆ ಯೋಗಿಯಾದವಂಗಲ್ಲದೆ,
ಭೋಗಿಯಾದಾತಂಗೆಲ್ಲಿಹುದಯ್ಯಾ?

ಪಂಚಮಸ್ವರದಾಯತ ಕೋಗಿಲೆಗಲ್ಲದೆ ಕಾಗೆಗೆಲ್ಲಿಹುದೊ?
ಕಪಿಲಸಿದ್ಧಮಲ್ಲಿಕಾರ್ಜುನ ಯೋಗಿನಾಥಾ. ॥ ೪೫೦ ॥

೧೬೨೮

ಪ್ರಪಂಚದಲ್ಲಿ ಭೂಭಾರಿಯಲ್ಲದೆ
ಪಾರಮಾರ್ಥದಲ್ಲಿ ಭೂಭಾರಿಯೇನಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ? ॥ ೪೫೧ ॥

೧೬೨೯

ವಿದ್ಯೆಯನರಿಯದವ ಗುದ್ದಾಟಕ್ಕೊಳಗಾದ.
ಅವಿದ್ಯೆಯನರಿಯದವ ಪ್ರಪಂಚವ ಒದ್ದುಬಿಟ್ಟ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೫೨ ॥

೧೬೩೦

ವಿದ್ಯೆ ಎಂದಡೆ ಭಾರತ-ರಾಮಾಯಣವಲ್ಲ.
ಭಾರತವೆಂದಡೆ ಭರತದೇಶದಲ್ಲಿ ಜನಿಸಿ,
ಕಾಮಿನಿಯರ ಸೋಗುಹಾಕಿ, ಆ ದೇಶಕ್ಕಧಿಪತಿಯಾದ ಕಥೆಯೆ ಭಾರತವಯ್ಯಾ.
ರಾಮಾಯಣವೆಂದಡೆ, ಆದಿನಾರಾಯಣನು ಪೃಥ್ವಿಯೊಳು ಹುಟ್ಟಿ,
ರಾಮನೆಂಬಭಿಧಾನವ ಧರಿಸಿ, ಸರ್ವರಂತೆ ಪ್ರಪಂಚವ ಮಾಡಿ,
ರಾಕ್ಷಸರ ಗರ್ವವನಳಿದುದೆ ರಾಮಾಯಣ.
ಮಾಡಿ ಉದ್ಧಟವಾದಲ್ಲಿ ಕಾಲಾಂತರದಲಾದರೂ
ಕುರುಹಿನೊಳಗಾದವಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೫೩ ॥

೧೬೩೧

ಅವು ಬಯಲಾದಂದಿಗೆ ಎಮ್ಮ ಪುರಾಣ ಸಾಗವೇನಯ್ಯಾ?
ಎಮ್ಮ ಪುರಾಣವಾದಂದಿಗೆ ಜನರು
ನಾಮವ ಹೊತ್ತು ನಡೆಯರೇನಯ್ಯಾ?
ಎಮ್ಮ ಪುರಾಣ ಶಿವಪುರಾಣ
ಎಮಗೆ ಗುರುಲಿಂಗ ಜಂಗಮತ್ರಯ ಒಂದೆ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೫೪ ॥

೧೬೩೨

ಕೆರೆಯ ಅಗಳುವ ಅಣ್ಣಂಗಳೆಲ್ಲ
ಮೂಲೋಕದೆರೆಯನ ಪಾದದಲ್ಲಿ ಬಿದ್ದು ಹೊರಳಾಡುತ್ತಾರೆ ನೋಡಾ.
ದೊರೆಯ ಮಾರಾರಿಯನರಿದು ತ್ರಿಪುರಾರಿ ತಾವಾಗರು ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನ ಯೋಗಿನಾಥಾ. ॥ ೪೫೫ ॥

೧೬೩೩

ಹಬ್ಬಗಳೆಲ್ಲ ಉಬ್ಬುಬ್ಬಿ ಲಿಂಗದ ಹಬ್ಬಕ್ಕೆ ಬಂದಬ್ಬರವ ನೋಡಾ!
ಲಿಂಗದ ಹಬ್ಬ ನಿಮ್ಮ ಬಾಯಿಗೆ ಒಬ್ಬಿಯಲ್ಲದೆ
ನಿಮ್ಮ ಜನನಕ್ಕೆ ಹಬ್ಬವೇಸೊ, ಕಬ್ಬಿಲ ಮಬ್ಬುಳ್ಳ ಕೊಬ್ಬಿಗರಿರಾ,
ಕಪಿಲಸಿದ್ಧಮಲ್ಲಿಕಾರ್ಜುನನೊಬ್ಬನರಿಯದಿರ್ದಡೆ? ॥ ೪೫೬ ॥

೧೬೩೪

ಜ್ಞಾನಾಭ್ಯಾಸದಲ್ಲಿ ವಟಮೂಲಿಕೆಯ ಬೀಜದಂತಿರಬಲ್ಲಡೆ ಭಕ್ತನಯ್ಯಾ.
ಆ ಜ್ಞಾನದಲ್ಲಿ ಅಗ್ನಿಯಂತಿರಬಲ್ಲಡೆ ಭಕ್ತನಯ್ಯಾ.
ಭಕ್ತನು ಭಕ್ತನು ಎಂದು ಬೆಳೆದ ಧಾನ್ಯಂಗಳನಟ್ಟು
ಬೆಟ್ಟಬಿಲ್ಲಯ್ಯನ ರೂಹಕ್ಕೆ ಒಟ್ಟಿ ಭಕ್ತನಾದೆನೆಂಬವನ ಯುಕ್ತಿ
ಲೊಳಲೊಟ್ಟೆಯಂತೆ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೫೭ ॥

೧೬೩೫

ಅಟ್ಟು ನೀಡುವ ಭಕ್ತನ ಬಟ್ಟೆಯ [ಇ]ಚ್ಛೆಗೆ ಬಂದಾತನಲ್ಲ
ನೋಡಾ ಮಹೇಶನು.
ನೆಟ್ಟನೆ ನೀ ಪರವಸ್ತುವೆಂಬ ಜ್ಞಾನವಟ್ಟುವುದಕ್ಕೆ ಬಂದಾತ
ಮಹೇಶನು ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೪೫೮ ॥

೧೬೩೬

ಮಹೇಶನಾದೆನೆಂಬ ಬಿಂಕವು ಮನದರುಹಿನಲ್ಲಿ ಅಡಗಿರಬೇಕು.
ಭಕ್ತನಾದೆನೆಂಬ ಬಿಂಕವು ಸೈರಣೆಯ ರೂಹಿನಲ್ಲಿ

ಎನ್ನ ನೇತ್ರದಲ್ಲಿ ಶಿವಲಿಂಗವಾಗಿ ಬಂದ ಗುರು ಚೆನ್ನಬಸವಣ್ಣ.
ಎನ್ನ ತ್ವಕ್ಕಿನಲ್ಲಿ ಜಂಗಮಲಿಂಗವಾಗಿ ಬಂದ ಗುರು ಚೆನ್ನಬಸವಣ್ಣ.
ಎನ್ನ ಶ್ರೋತ್ರದಲ್ಲಿ ಪ್ರಸಾದಲಿಂಗವಾಗಿ ಬಂದ ಗುರು
ಚೆನ್ನಬಸವಣ್ಣ.
ಎನ್ನ ಹೃದಯದಲ್ಲಿ ಮಹಾಲಿಂಗವಾಗಿ ಬಂದ ಗುರು
ಚೆನ್ನಬಸವಣ್ಣ.
ಎನ್ನ ಸ್ಥೂಲದೇಹದಲ್ಲಿ ಇಷ್ಟಲಿಂಗವಾಗಿ ಬಂದ ಗುರು
ಚೆನ್ನಬಸವಣ್ಣ.
ಎನ್ನ ಸೂಕ್ಷ್ಮದೇಹದಲ್ಲಿ ಪ್ರಾಣಲಿಂಗವಾಗಿ ಬಂದ ಗುರು
ಚೆನ್ನಬಸವಣ್ಣ.
ಎನ್ನ ಕಾರಣದೇಹದಲ್ಲಿ ಭಾವಲಿಂಗವಾಗಿ ಬಂದ ಗುರು
ಕಪಿಲಸಿದ್ಧಮಲ್ಲಿಕಾರ್ಜುನನೆಂಬ ಚೆನ್ನಬಸವಣ್ಣ. ॥ ೬೬೬ ॥

೧೮೪೪

ಇಂದ್ರಿಯ ಕಟ್ಟಿದ ದೇಹವು ಚಂದ್ರನ ಲಕ್ಷಣ ಧರಿಸಿತ್ತು ನೋಡಾ.
ಚಂದ್ರನ ಲಕ್ಷಣವದು ಇಂದ್ರಪದ[ವನೀ] ಡಾಡಿತ್ತು ನೋಡಾ.
ಇಂದ್ರಪದವದು ಸಾಂದ್ರವಾಗಿ ಭೋಗಿಸುವುದಕ್ಕೆ ಮೈಗೊಟ್ಟಿತ್ತು
ನೋಡಾ.
ಸಾಂದ್ರವಾದುದಕ್ಕೆ ಮಹೇಂದ್ರಜಾಲವನೊಡ್ಡಿ,
ಕಪಿಲಸಿದ್ಧಮಲ್ಲೇಂದ್ರನ ಇಂದ್ರಿಯಂಗಳಲ್ಲಿ ತಂದಿಟ್ಟಿತ್ತು
ನೋಡಾ, ಬಾಚರಸಯ್ಯಾ. ॥ ೬೬೭ ॥

೧೮೪೫

ಗರ್ಭವಿದ್ದಂಗನೆಗೆ ಒಮ್ಮೆ ಸಂಭ್ರಮವಲ್ಲದೆ,
ಗರ್ಭಗರ್ಭಕ್ಕೊಮ್ಮೆ ಸಂಭ್ರಮವಿಲ್ಲ ನೋಡಾ, ಗುರುವೆ.
ಪಿಸಿದ್ದ ಭಕ್ತಿಗೊಮ್ಮೆ ಒರೆದು ನೋಡಬಾರದು ನೋಡಾ,
ಗುರುವೆ.
ನಾಪಿದ್ದ ಕೇರಿಯವರೆಲ್ಲರ ಒಮ್ಮೆ ಲಜ್ಜಿಸಬಹುದಲ್ಲದೆ,
ಮತ್ತೆ ಮತ್ತೆ ಲಜ್ಜಿಸುವುದು ಬೇಡ,
ಕಪಿಲಸಿದ್ಧಮಲ್ಲಿಕಾರ್ಜುನ ಗುರುವೆ. ॥ ೬೬೮ ॥

೧೮೪೬

ಸಾಕಾರದ ಲಕ್ಷ್ಯವದು ನಿರಾಕಾರದಲ್ಲಿ ಲೀನವಲ್ಲದೆ,
ಸಾಕಾರದಲ್ಲಿ ಲೀನವಾಗಬಾರದು.
ಕೀಟ-ಭ್ರಮರ ನ್ಯಾಯದಂತೆ ಚರಿಸಬಲ್ಲಡವನೆ
ನಿರ್ದೇಹ ಜೀವನ್ಮುಕ್ತನಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೬೬೯ ॥

೧೮೪೭

ವಾಙ್ಮನಕ್ಕಗೋಚರ ವಸ್ತುವೆಂದರಿದ ಬಳಿಕ,
ವಾಕ್ಯದಿಂದಾಗದು, ಮನದಿಂದಾಗದು.
ಅರಿದ ಅರಿವಿನಿಂದ ನೆನೆದು,
ನಿರಾಕಾರ ನಿಜವಸ್ತು ನಿರ್ಮಲ ಶುದ್ಧ ಶಬಲಾಂಶ
ತಾನಾಗಬಾರದೇನಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ.
॥ ೬೭೦ ॥

೧೮೪೮

ಪುಣ್ಯದ ಬಲಿಯದು ಪಾಪದಲ್ಲಿ ಪುಣ್ಯ ಬಲಿಯೆ ನೋಡಯ್ಯಾ.
ಪಾಪದ ಬಲಿಯದು ಪುಣ್ಯದಲ್ಲಿ ಪಾಪ ಬಲಿಯೆ ನೋಡಯ್ಯ.
ನಾಗನ ಸ್ವಭಾವವೆ ವಿಷ; ಮಧ್ಯಕ್ಷೀರ ಕ್ಷೀರವಾಗದು,
ವಿಷವೆ ಸಹಜ ನೋಡಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೬೭೧ ॥

೧೮೪೯

ಯಾವಾದರೂ ತೀರ್ಗಡೆಯಂತ್ಯದಲ್ಲಿ
ಜಪ ತಪ ಶಿವಾರಾಧನೆ ಫಲಪದವು.
ತೀರ್ಗಡೆಯಾ[ಗ]ದಲ್ಲಿ ಫಲಿಸಮು ಫಲಿಸಮು ಪುಣ್ಯಪಾಪಗಳವು.
ದೇಹಶುದ್ಧವಾದವಂಗೆ ರಸಸಿದ್ಧಿ
ರಸಸಿದ್ಧಿಯಾದವಂಗೆ ದೇಹಶುದ್ಧಿ.
ದೇಹಶುದ್ಧವಿಲ್ಲದವಂಗೆ ರಸಸಿದ್ಧಿಯಾಗದು;
ರೋಗ ಪರಿಹಾರ[ವಾಗದು] ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೬೭೨ ॥

೧೮೫೦

ಪುಣ್ಯ ಪಾಪಗಳಿಗೆ ದೂರ ಹೇಳುವರಲ್ಲದೆ,
ಸಮೀಪ ಹೇಳುವರನಾರನು ಕಾಣೆ.
ಪುಣ್ಯ ಪಾಪ ಸಂಕೀರ್ತವಾದಲ್ಲಿ
ಕುಲಹೀನ ಕೀರ್ತಿವಂತ, ಸತ್ಕುಲ ಅಕೀರ್ತಿವಂತ
ಇದೆ ಕೀರ್ತಿ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೬೭೩ ॥

೧೮೫೧

ಮಾಡಿದ ಪೂಜೆಯದು ಮಹಾದೇವಂಗಲ್ಲದೆ,
ಅನ್ಯ ದೇವತವೆಂಬುದು ಹೊಲ್ಲ ನೋಡಾ.
ಬೇಡುವ ಕಾಟವದು ದಾನಶೂರಂಗಲ್ಲದೆ
ಅನ್ಯ ಲೋಭಿಗದು ಹೊಲ್ಲ ನೋಡಾ.
ನೋಡುವ ನೋಟವದು[ತನ್ನ ಸ್ತ್ರೀಯಲ್ಲಲ್ಲದೆ
ಪರಸ್ತ್ರಿಯಲ್ಲಿ ಹೊಲ್ಲ] ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೬೭೪ ॥

೧೮೫೨

ಕಾಮಧೇನುವಿನ ವಂಶವಿವು ಎಂದಡೆ,
ಹಿಂಡಲರಿಯವು ನೋಡಾ, ಆವುಗಳು.
ಕಾಮಾರಿಯ ರೂಪುಗಳಿವರೆಂದಡೆ,
ಅರಿಷಡ್ವರ್ಗಂಗಳಳಿಯಪಡೆಯವು ನೋಡಾ ತ್ರಿಶಕ್ತಿಗಳು.
ನಾ ನಿನ್ನವನೆಂದಡೆ [ನಿ]ಮ್ಮ ಮಹಿಮೆಗಳನರಿಯಬಾರದು
ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ. ॥ ೬೭೫ ॥

೧೮೫೩

ಎಲ್ಲರೂ ಜಪಿಸುವ ಜಪವ ಜಪಿಸಲಾರೆನಯ್ಯಾ.
ಕ್ಷಣಕ್ಕೊಮ್ಮೆ 'ನಮಃ ಶಿವಾಯ' ಎಂಬೆ;
ಕ್ಷಣಕ್ಕೊಮ್ಮೆ 'ನಮಃ ಶಿವಾಯ' ಎಂಬೆ.
ಕ್ಷಣ ಕ್ಷಣಕ್ಕೊಮ್ಮೆ ಇದೆ ಮಂತ್ರ ಘನವೆಂದುಸುರುವೆ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನದೇವಾ. ॥ ೬೭೬ ॥

೧೮೫೪

ಮಂತ್ರಂಗಳ ಭೇದ ಬೃಹಸ್ಪತಿಯೋರ್ವಂಗಲ್ಲದೆ,
ಉಳಿದ ದೇವ ದೇವತೆಗಳಿಗದು ದುರ್ಘಟ ನೋಡಾ.
ಮಂತ್ರ ಮನ ಒಂದಾದಡೆ
ಮಂತ್ರಮೂರ್ತಿಯಪ್ಪ ಮಹಾದೇವಿಯರ ಅಷ್ಟೈಶ್ವರ್ಯಕ್ಕಧಿಕಾರಿ
ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೬೭೭ ॥

೧೮೫೫

ತಿಳಿದೊಮ್ಮೆ ಜಪಿಸಿದ ಜಪವದು ಜಪ,
ಜಪಮಾಲಿಕೆಯ ಪಿಡಿಯನು ನೋಡಾ;
ತಿಳಿದೊಮ್ಮೆ ಜಪಿಸಿದ ಜಪವದು [ಜಪ].
ಜಪದ ರೀತಿಯನರುಪುವ ಜಪಮಾಲಿಕೆಯ ಪಿಡಿಯನು
ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನನ ಶರಣ. ॥ ೬೭೮ ॥

೧೮೫೬

ಭಕ್ತನಾದಡೇನು, ಮಹೇಶನಾದಡೇನು?
ಮೊದಲಲ್ಲಿ ಶಕ್ತಿಯ ಜಪವೆ ಜಪ ನೋಡಾ.
ಭಕ್ತನಾದಡೇನು, ಮಹೇಶನಾದಡೇನು?
ಕಡೆಯಲ್ಲಿ ಶಿವನ ಜಪವೆ ಜಪ ನೋಡಾ.
ಜಪ ರೀತಿ, ಜಪ ಲಕ್ಷಣ, ಜಪ ಪ್ರಣವಂಗಳರಿಯದೆ,
ತಾಪತ್ರಯಕ್ಕೊಳಗಾಗಿ ಭವಕ್ಕೀಡಾದರು ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೬೭೯ ॥

೧೮೫೭

ಆವನಾದಡೇನು,
ಭಾವದಲ್ಲಿ ಪ್ರೀತನಲ್ಲದೆ ನಡೆ ನುಡಿ ಗಡಣದಲ್ಲಿ ಪ್ರೀತಿಯುಂಟೆ
ದೇವಾ.
ಅರಸನಾದಡೇನು,
ಆಳುವಲ್ಲಿ ಅಧಿಕಾರಿಯಲ್ಲದೆ ಅಳಿವಲ್ಲಿ ಅಧಿಕಾರಿಯುಂಟೆ
ದೇವಾ?

ಭಕ್ತನಾದಡೇನು,
ಭಕ್ತನಲ್ಲಿ ಸಲುಗೆಯಲ್ಲದೆ ಮಹೇಶನಲ್ಲಿ ಸಲುಗೆಯುಂಟೇನಯ್ಯಾ?
ಕಪಿಲಸಿದ್ಧಮಲ್ಲಿಕಾರ್ಜುನದೇವಾ. ॥ ೬೮೦ ॥

೧೮೫೮

ಭಕ್ತನಾದ ಬಳಿಕ ಭಕ್ತಿಪಿಡಿದಾಚರಿಸುವುದೆಂತಯ್ಯಾ?
ಭಕ್ತ ತಾನಾದ ಬಳಿಕ ಭಕ್ತಿಯ ಹೊಲಬನರಿಯಬೇಕು.
ಭಕ್ತ ತಾನಾದ ಬಳಿಕ ಜ್ಞಾನಕ್ರಿಯಾಪಿವರವ ವಿಚಾರಿಸಿ
ನೋಡಬೇಕು.
ಭಕ್ತ ತಾನಾದ ಬಳಿಕ ಅರುಹಿನ ಕುರುಹುಪಿಡಿದಾಚರಿಸಬೇಕು.
ಭಕ್ತ ತಾನಾದ ಬಳಿಕ ತಾಪತ್ರಯಕ್ಕೊಳಗಾಗದೆ,
ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ ಐಕ್ಯ ಹೊಂದಲೇಬೇಕು.
॥ ೬೮೧ ॥

೧೮೫೯

ಕುರಿಯ ಹೆಸರು ಒಂದೆ, ಅಗ್ನಿಯ ಹೆಸರು ಒಂದೆ ಆದಲ್ಲಿ,
ಅಗ್ನಿಯ ಸಾಮರ್ಥ್ಯ ಕುರಿಗೆ ಬಂದೀತೇನಯ್ಯಾ?
ಕಪ್ಪೆಯ ಹೆಸರು ಹಾವಿನ ಹೆಸರು ಒಂದೆ ಆದಲ್ಲಿ,
ಹಾವಿನ ಸಾಮರ್ಥ್ಯ ಕಪ್ಪೆಗೆ ಬಂದೀತೇನಯ್ಯಾ?
ನನ್ನ ಹೆಸರು, ನಮ್ಮ ಶಿವಶರಣರ ಹೆಸರು ಒಂದೆ ಆದಲ್ಲಿ,
ಅವರ ಸಾಮರ್ಥ್ಯ ಎನಗೆ ಬಂದೀತೇನಯ್ಯಾ?
ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ. ॥ ೬೮೨ ॥

೧೮೬೦

ಪರ್ವತದ ಮಹಿಮೆಯದು ಘನವೆಂದಡೆ,
ಪರ್ವತದಲ್ಲಲ್ಲದೆ ವೇಶ್ಯಾಕೋಶಕ್ಕೆ ಹರಿದು
ಹರನೆಂದೆನಿಸದಿರಯ್ಯಾ.
ಶರಣರ ಮಹಿಮೆಯದು ಘನವೆಂದಡೆ,
ಶಿವಶರಣನಲ್ಲಲ್ಲದೆ ಕಿಂಚಿಜ್ಞ ಮಾನವನಲ್ಲಿ ಹರಿಯದು
ನೋಡಯ್ಯ,
ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ. ॥ ೬೮೩ ॥

೧೮೬೧

ಶಿವನಿರ್ಮಿತ ಮಂತ್ರಂಗಳು ಕೋಟಾನುಕೋಟಿ.
ಶಿವನಿರ್ಮಿತ ಯಂತ್ರಂಗಳು ಕೋಟಾನುಕೋಟಿ.
ಶಿವನಿರ್ಮಿತ ಮಹಾಮೂಲಿಕೆಗಳು ಕೋಟಾನುಕೋಟಿ.
ಶಿವನಿರ್ಮಿತ ವಿದ್ಯಾದಿಗಳು ಕೋಟಾನುಕೋಟಿ.
ಇವರಂದವನರಿಯಬೇಕೆಂಬವರು ಕೋಟಾನುಕೋಟಿ.
ಸಿದ್ಧಿಯ ಹೊಂದಿ ಪ್ರಸಿದ್ಧಿಗೆ ಬಂದವರು,
ಕೋಟಾನುಕೋಟಿಯೊಳಗೆ ಕೋಟಿಯಿಲ್ಲ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಲಿಂಗವೆ. ॥ ೬೮೪ ॥

೧೮೬೨

ಮಂತ್ರ ಮೂರರಲ್ಲಿ ಮಂತ್ರವೆ ಮಂತ್ರ ನೋಡಾ.
ಶಕ್ತಿಯ ಮಂತ್ರದಲ್ಲಿ ಮಂತ್ರವೆ ಮಂತ್ರ ನೋಡಾ,
ಶಿವನ ಮಂತ್ರ ಮೂರರಲ್ಲಿ ಮಂತ್ರವೆ ಮಂತ್ರ ನೋಡಾ.
ನವಲಿಂಗದ ಮಂತ್ರ ಮೂರರಲ್ಲಿ ಮಂತ್ರವೆಂಬುದು
ತ್ರಿಲೋಕದಲ್ಲಿಲ್ಲ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೬೮೫ ॥

೧೮೬೩

ಬಂದೊಮ್ಮೆ ಜಪಿಸುವುದಾಗದಿರೆ,
ನಿಂದೊಮ್ಮೆ ನೆನೆಯಬೇಕು ನೋಡಾ, ಮಂತ್ರ ಮೂರನು.
ಬಂದೊಮ್ಮೆ ಜಪಿಸುವುದಾಗದಿರೆ,
ನಿಂದೊಮ್ಮೆ ನೋಡಬೇಕು ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಲಿಂಗವ. ॥ ೬೮೬ ॥

೧೮೬೪

ಆ ಶರಣನ ರೂಪು ಈ ಶರಣನ ಹಸ್ತಕಮಲದಲ್ಲಿ ತೋರುತ್ತಿದೆ;
ಈ ಶರಣನ ರೂಪು ಆ ಶರಣನ ಪಾದದಲ್ಲಿ ತೋರುತ್ತಿದೆ.
ಆ ಶರಣನ ಪಾದ ಈ ಶರಣನ ಮಹಾಹೃದಯಲ್ಲಿ ಮಹಾಲಿಂಗ,
ನೇತ್ರದಲ್ಲಿ ಶಿವಲಿಂಗವಾಗಿ, ತೋರಿದ ಜಗತ್ತಿಗೆ
ವಿಶ್ವೋದರಿಯಾಗಿ
ತೋರಿತ್ತು ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೬೮೭ ॥

೧೮೬೫

ನೋಡುವ ನರರಿಗೆ ನಿನ್ನ ರೂಹು ತೋರದಯ್ಯಾ.
ನುಡಿಸುವ ನರರಿಗೆ ನೀ ನುಡಿಮುದು ಮಾಡುವುದಲ್ಲಯ್ಯಾ.
ಹಾಡುವ ನರರಿಗೆ ನೀ ಮನವನೀಡುಮಾಡುವನಲ್ಲಯ್ಯಾ.
ತೋರುವ ತೋರ್ಪ, ನುಡಿವ ನುಡಿಸುವ ಪ್ರಮಥರ
ಏಕೆ ಒಳಕೊಂಡೆ ಹೇಳಾ, ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ.
॥ ೬೮೮ ॥

೧೮೬೬

ಒಲಿಯುವ ಮೂರ್ತಿ: ಒಲಿಸಿಕೊಟ್ಟ ನಮ್ಮ ಚೆನ್ನಬಸವ.
ಉಲಿಯುವ ಮೂರ್ತಿ: ಬಲಿಯ ಹಾಕಿಕೊಟ್ಟ ನಮ್ಮ ಚೆನ್ನಬಸವ.
ಕಲಿಯುಗ ಕಲಿಯಹ ಕಾಲಾಧರಧರ ಗುರುವೈಕ್ಯವನರಿಮು,
ಇನ್ನರುಹಿನ ಮನೆಯಲ್ಲಿರಲಾರೆ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನದೇವಾ. ॥ ೬೮೯ ॥

೧೮೬೭

ಲಿಂಗಪೂಜೆಯಿಂದೊಬ್ಬ ಜೀವನ್ಮುಕ್ತ,
ಜಲಪ್ರಭಾವದಿಂದೊಬ್ಬ ಜೀವನ್ಮುಕ್ತ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೬೯೦ ॥

೧೮೬೮

ಆರಿಗೆ ನಿಲುಕದ ಬ್ರಹ್ಮವ,
ನೀನಾರಿಸಿ ನೋಡಿದಡೆ ಹುರುಳಿಲ್ಲ ನೋಡಾ, ಮರುಳು ಮಾನವಾ.
ಅರಿಗೆಂಬಲ್ಲಿ ಜೀವಭಾವ ಆರಿಸಿದೆನೆಂಬಲ್ಲಿ ಅಹಂಭಾವ.
ಆರಿಗೆಂಬುದು, ಆರಿಸಿದೆನೆಂಬುದು ಅಳಿದಡೆ,
ಅದೇ ಪರಬ್ರಹ್ಮ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೬೯೧ ॥

೧೮೬೯

ಯೋಗಿಯ ಮೇಲಬು ಯೋಗಿಯಾದವಂಗಲ್ಲದೆ,
ಇತರ ನರಂಗೆ ಸಾಧಿಸಬಾರದು ಕೇಳಯ್ಯಾ.

ಧಾತುವಾದವದು ರಸವಾದಿಯಾದವಂಗಲ್ಲದೆ,
ಇತರ ನರಂಗದು ಸಾಧಿಸಬಾರದು ಕೇಳಯ್ಯಾ.
ನೋಡಿ ಮಾಡುವುದಾದಡೆ ಭವವೆಲ್ಲಿಹುದು,
ದರಿದ್ರವೆಲ್ಲಿಹುದು ಹೇಳಯ್ಯಾ, ಕಪಿಲಸಿದ್ಧಯ್ಯಾ. ॥ ೬೯೨ ॥

೧೮೭೦

ಯೋಗವ ಸಾಧಿಸಿದವನೊಬ್ಬ ನಿಜಗುಣ;
ಯೋಗವ ಸಾಧಿಸಿದವನೊಬ್ಬ ವೃಷಭಯೋಗೀಶ್ವರ;
ಯೋಗವ ಸಾಧಿಸಿದವನೊಬ್ಬ ಶಿವನಾಗಮಯ್ಯ;
ಯೋಗವ ಸಾಧಿಸಿದೆ ನಾನೊಬ್ಬ
ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ ಕೂಡುವ ಯೋಗವ.॥ ೬೯೩ ॥

೧೮೭೧

ಮೂರು ಗುಂಡಿನ ಒಲೆಯಲ್ಲಿ,
ಮಾರಾರಿ ಮೂರುತಿಯ ಪಾಕವ ಮಾಡುತ್ತಾನೆ ನೋಡಾ.
ಆ ಪಾಕ ಪಕ್ವವಾಗದು.
ಈ ವಿಚಿತ್ರವ ನೋಡಿ ನಿಬ್ಬೆರಗಾದೆ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೬೯೪ ॥

೧೮೭೨

ಅಯ್ಯಗಳು ರುದ್ರಾಕ್ಷಿಯ ಕೊಟ್ಟಲ್ಲಿ ಫಲವಲ್ಲದೆ,
ಸುಮ್ಮನೆ ಧರಿಸಿದಲ್ಲಿ ಫಲವಿಲ್ಲ ನೋಡಾ.
ಭಕ್ತನು ಪದಾರ್ಥ ನೀಡಿದಲ್ಲಿ ಫಲವಲ್ಲದೆ,
ಬೇಡಿ ರುಚಿಸಿದಲ್ಲಿ ಫಲವಿಲ್ಲ ನೋಡಾ.
ನಿನ್ನರಿವ ನಾನರಿತಲ್ಲಿ ಫಲವಲ್ಲದೆ,
ಅರುಹಿಸಿದಲ್ಲಿ ಫಲವಿಲ್ಲ.
ಅಹುದೆಂಬುದು ನೀತಿ, ಬಲ್ಲೆ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೬೯೫ ॥

೧೮೭೩

ಇದ್ದೊಂದು ಕಲ್ಲೊಳು ಪ್ರಸಿದ್ಧವಾಗಿಹ ಮುಗ್ಧನ ಕಂಡೆ.
ಆ ಮುಗ್ಧ ಮಾತಾಡನು, ಮಾತಾಡದೆ ಸುಮ್ಮನಿರನು.

ಆತನ ಸೊಮ್ಮು ಅರಿಯದು;
ಅರಿಯಬೇಕೆಂದಡೆ ಕರಣಂಗಳ ಒಡನಾಟ ಆಗಬಾರದು,
ನೋಡೈ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೬೯೬ ॥

೧೮೭೪

ಕಲ್ಲುದೇವರಲ್ಲಿ ವಲ್ಲಭನಿದ್ದಾನೆಂದು ಲಲ್ಲೆಗರೆಯಬೇಡ,
ಖುಲ್ಲತನದಿಂದ.
ಒಮ್ಮೆ ಅರಿಯಬಲ್ಲಡೆ, ಕಪಿಲಸಿದ್ಧಮಲ್ಲಿಕಾರ್ಜುನನ ಶರಣರ
ಪಾದದಲ್ಲಿ ತಲ್ಲೀಯವಾಗಾ, ಕಲ್ಲಯ್ಯಾ. ॥ ೬೯೭ ॥

೧೮೭೫

ಮಣಿ ಮೂರರಲ್ಲಿ ಗುಣತ್ರಯಾತೀತನ ಕಂಡೆ.
ಗುಣತ್ರಯಾತೀತನಲ್ಲಿ ಹವಣಿಸಬಾರದ ಆನಂದಯೋಗವ ಕಂಡೆ.
ಆ ಆನಂದಯೋಗವ ಸಾಧಿಸಬಾರದು, ಸಾಧಿಸಬಾರದು,
ಮತ್ತೆ ಭವಭವದ ದಾವಾನಲ, ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೬೯೮ ॥

೧೮೭೬

ಮೂರು ಗುಣ ಮುರಿಮುರಿದು ಮೂರಕ್ಕೆ
ತಂದು ಮುರಿದಿಟ್ಟಿತ್ತು ನೋಡಾ,
ಮಾರಹರ ಪಾದಪದ್ಮಭ್ರಮರ.
ಮೂರು ಗುಣದಂತಾಚರಿಸಬಾರದು;
ಮೂರು ಗುಣ ಬಿಡಬಾರದು ನೋಡಾ.
ಮೂರರಿಂದಾರು ಲಿಂಗವ ದಾಂಟಿ, ಮೂರರಲ್ಲಿ ಐಕ್ಯವ ನೋಡೆ
ಪುರಾರಿ ಪರಮಾತ್ಮ ಕಪಿಲಸಿದ್ಧಮಲ್ಲಿಕಾರ್ಜುನ
ತಾನೆ ನೋಡಾ, ಮಾರಯ್ಯಾ. ॥ ೬೯೯ ॥

೧೮೭೭

ಮಂಚವೊಂದರಲ್ಲಿ ಕಂಚುಕಿ ಸಹ ಮೂರ್ತವ ಮಾಡಿದ್ದಾನೆ.
ಆ ಮೂರ್ತಿಯ ಹಂಚುಹಂಚಿನಲ್ಲಿ ಕಂಚುಕಿಯಾಗಿದ್ದಾನೆ.
ಆ ಮಂಚ, ಈ ಹಂಚು ಕಂಚುಕಿಯ[ರ]ರಿಯಬಲ್ಲಡೆ,

ಸಂಚಿತತ್ರಯ ಒಡಕ ಹಂಚು ನೋಡಾ,
ಪ್ರಪಂಚಹರ ಪಂಚಮುಖ ಕಪಿಲಸಿದ್ಧಮಲ್ಲಿಕಾರ್ಜುನಾ.॥ ೭೦೦ ॥

೧೮೭೮

ಕುಂಬಾರನ ಆವಿಗೆಯಲ್ಲಿ ಕುಂಬಾರನಿಲ್ಲ;
ಕಂಬಾರನ ಕಲಶಂಗಳಲ್ಲಿ ಕಂಬಾರನಿಲ್ಲ.
ಆವಿಗೆ ಕಲಶಂಗಳಲ್ಲಿ ಅಸ್ತಿತ್ವ ಉಂಟಾಗಿಹ
ಕುಂಬಾರ ಕಂಬಾರನಂತಿಪ್ಪ ನೋಡಾ,
ಈ ಪ್ರಪಂಚದಲ್ಲಿ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೭೦೧ ॥

೧೮೭೯

ಬೀಜವೊಂದರಲ್ಲಿ ಸೋಜಿಗದ ಮೂರುತಿ
ಮಾಡುವ ಬುದ್ಧಿಯೊಳೈದಾನೆ ನೋಡವ್ವಾ.
ಬೀಜವ ನೋಡಿದಡೆ ತಾನು ಬೀಜ.
ಅದರಲ್ಲಿಯ ಸೋಜಿಗನು ತಾನು ಮಾಜುವ ಬುದ್ಧಿ
ತಾ ಎನಬಾರದು, ಮಾಯೆ ಎನಬಾರದು.
ಇವರಿರ್ವರಲ್ಲಿ ಜೂಜು ಇಟ್ಟು ಚಲಿಸುತ್ತದೆ ನೋಡವ್ವಾ,
ಕಪಿಲಸಿದ್ಧಮಲ್ಲಿಕಾರ್ಜುನನೆಂಬೆ ಮಹಾವಸ್ತುವವ್ವಾ. ॥ ೭೦೨ ॥

೧೮೮೦

ಸಾಧಿಸಲಸಾಧ್ಯ ನೋಡಾ, ಸಾಧಿಸಬಾರದ ವಸ್ತುವ.
ಸಾಧಿಸಲಸಾಧ್ಯ ನೋಡಾ, ಸಾಧಿಸಬಾರದ ಮಹಾಜ್ಞಾನವ
ಸಾಧಿಸಲಸಾಧ್ಯ ನೋಡಾ,
ಸಾಧಿಸಬಾರದ ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ ನಿರ್ವಂಚಕತ್ವವ.
॥ ೭೦೩ ॥

೧೮೮೧

ಅವಸ್ಥಾತ್ರಯ ಜೀವಂಗಾದ ಬಳಿಕ, ಜೀವವೆಂಬುದು ಪರಮಾತ್ಮ.
ಪರಮಾತ್ಮಂಗವಸ್ಥಾತ್ರಯವೆಂದ ಬಳಿಕ,
ಜನನಮರಣಕ್ಕೊಳಗಾಯಿತ್ತು.

ಜೀವಂಗಲ್ಲ, ಪರಮಾತ್ಮಂಗಲ್ಲ, ಅಂತರಾತ್ಮಂಗಲ್ಲ,
ಆಗುವ ಅವಸ್ಥೆ ಮಾಯಾಶಕ್ತಿಗೆ, ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೭೦೪ ॥

೧೮೮೨

ಪಂಚವರ್ಣದ ಗಿಳಿಯೊಂದು ಪ್ರಪಂಚರಚನೆಗೆ ಬಂದು.
'ಭವ ಬ್ರಹ್ಮ, ಭವ ಬ್ರಹ್ಮ' ಎಂಬುತ್ತಿದೆ,
ಆ ಗಿಳಿಯು ಮೂರು ಮನೆಯ ಪಂಜರದಲ್ಲಿ ಕೂತು,
'ಕುರುಷ್ವ ಲಿಂಗಪೂಜಾಂ, ಲಿಂಗಪೂಜಾಂ' ಎಂಬುತ್ತಿದೆ.
ಆ ಗಿಳಿಯ ವಚನವ ಕೇಳಿದಾತಂಗೆ ಸುಖ, ಗಿಳಿಗೆ ಸುಖ;
ಕೇಳದವಂಗೆ ಸುಖವಿಲ್ಲ, ಹೇಳಿದವಂಗೆಯು ಸುಖವಿಲ್ಲ
ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೭೦೫ ॥

೧೮೮೩

ಒಣಗಿದ ಮರವದು ಭೂಮಿಯಲ್ಲೇ ಲೀನ ನೋಡಾ,
ಒಣಗದ ಮರವದು ಭೂಮಿಯಲ್ಲೇ ಲೀನ ನೋಡಾ,
ತಿಳಿದ ಯೋಗಿಯ ಲಯವಿಲ್ಲೆ!
ಸ್ವರ್ಗಕ್ಕೆ ಹೋದೆಹೆನೆಂಬುದು ಗೊಡ್ಡು-ಹುಸಿ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೭೦೬ ॥

೧೮೮೪

ಮನದಲ್ಲಿಲ್ಲದ ಮಹಾಂತರು ಮನದಲ್ಲಿ ಘನಗೊಳಿಸಬಾರದ
ಅಂಗನೆಯರಲ್ಲಿ!
ಮನದಲ್ಲಿಲ್ಲದ ಕಾಯದಲ್ಲಿಲ್ಲದ ಮಹಾಂತರ ಕಂಡಡೆ,
ಎನ್ನ ಮನ ಮನೋಹರವಾಯಿತ್ತಯ್ಯಾ,
ಮಹಾದೇವ ಮದನಮರ್ದನ ಮಹಾಂತ ಮಹಿಮಾಶಾಲಿ
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೭೦೭ ॥

೧೮೮೫

ತಾನೊಮ್ಮೆ ಸ್ಥೂಲಕ್ಕೆ ಬಂದ ಬಳಿಕ,
ಆತನ ನಾನು ಒಮ್ಮೆ ಸೊಮ್ಮಗೊಳಿಸಬೇಕು.

ತಾನೊಮ್ಮೆ ಸಿದ್ಧನಾಗಿ ನಿಂದ ಬಳಿಕ,
ಕಪಿಲಸಿದ್ಧಮಲ್ಲಿಕಾರ್ಜುನನ ಕೀಲ ತಿಳಿಸಬೇಕು, ಕೇದಾರಯ್ಯಾ.
॥ ೭೦೮ ॥

೧೮೮೬

ಆವ ಜ್ಞಾನಿಯಾದಡೇನು
ದೇಹಾವಸಾನದಲ್ಲಿಯ ಭಾವದಂತೆ ತಪ್ಪಲರಿಯದು ನೋಡಾ.
ಆವ ಜ್ಞಾನಿಯಾದಡೇನು
ಭಾವವೆಂಬುದು ಜನ್ಮಕ್ಕೆ ಈಡು, ನಿರ್ಭಾವವೆಂಬುದು
ಜನ್ಮಕ್ಕೆ ಕಾಡುಗಿಚ್ಚು ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೭೦೯ ॥

೧೮೮೭

'ಯಥಾ ಭಾವಸ್ತಥಾ ದೇವಃ' ಎಂದ ಬಳಿಕ,
ದೇವರ ಬಯಲ ಭಾವ ತನ್ನಲ್ಲಿ ಇಂಬುಗೊಂಡಡೆ ಮುಕ್ತಿ.
ದೇವ ರೀತಿಯೊಂದು ತನ್ನ ರೀತಿಯೊಂದಾದ ಬಳಿಕ,
ಘಟಿಸದು ಕಪಿಲಸಿದ್ಧಮಲ್ಲಿಕಾರ್ಜುನನ ಐಕ್ಯವು. ॥ ೭೧೦ ॥

೧೮೮೮

ಆಕಾರವಿಲ್ಲದ ಮೂರ್ತಿಯ ಆಕಾರಕ್ಕೆ ತಂದು
ಪೂಜಿಸಿದೆ ನೋಡಾ, ಮನವೆ.
ಆಕಾರದ ಮೂರ್ತಿಯ ನಿರಾಕಾರಕ್ಕೆ ತಂದು
ಪೂಜಿಸಲರಿಯೆ ನೋಡಾ, ಮನವೆ.
'ಯದ್ದೃಷ್ಟಂ ತನ್ನಷ್ಟಂ' ಎಂದ ಬಳಿಕ,
ನಿರಾಕಾರ ನಿಜನಿರ್ವಯಲವೆ ಸ್ಥಿರವೆಂದು ನಂಬು ಮನವೆ,
ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ. ॥ ೭೧೧ ॥

೧೮೮೯

ಆಚಾರವಿಲ್ಲದವನ ಗುರು ಕಂಡಡೆ,
ವಿಚಾರಿಸಿ ನೋಡನು ಜ್ಞಾನಾಜ್ಞಾನವಲ್ಲಿ.

ಆಚಾರವಿಲ್ಲದ ಗುರು, ಆಚಾರವಿಲ್ಲದ ಶಿಷ್ಯ
ಇವರೀರ್ವರು ಚರಿಸಿ ಬೆಡಗಿನ ಭವಕ್ಕೆ ಗುರಿಯಾದರು ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಲಿಂಗವೆ. ॥ ೭೧೨ ॥

೧೮೯೦

ಲಿಂಗವಂತರು ತಾವಾದ ಬಳಿಕ,
ಅಂಗನೆಯರ ನಡೆನುಡಿಗೊಮ್ಮೆ
ಲಿಂಗದ ರಾಣಿಯರೆಂದು ಭಾವಿಸಬೇಕು.
ಲಿಂಗವಂತರು ತಾವಾದ ಬಳಿಕ,
ಅನುಭವ ವಚನಗಳ ಹಾಡಿ
ಸುಖದುಃಖಗಳಿಗಭೇದ್ಯವಾಗಿರಬೇಕು.
ಲಿಂಗವಂತರು ತಾವಾದ ಬಳಿಕ,
ಜಂಗಮವ ಪೂಜಿಸಿ ಸದಾ ಲಿಂಗೈಕ್ಯಸುಖಿಗಳಾಗಿರಬೇಕು
ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೭೧೩ ॥

೧೮೯೧

ಸರ್ವರು ಲಿಂಗವಂತರೆಂದು ಮನದಲ್ಲಿ ಭಾವಿಸಿ
ನಡೆಯಬೇಕಲ್ಲದೆ,
ನಡೆನುಡಿಯಲ್ಲಿ ಭಾವಿಸಿ ನಡೆಯಬಾರದು ನೋಡಯ್ಯಾ.
ಸರ್ವರು ಲಿಂಗವಂತರೆಂದು ಭಾವಿಸಿದಲ್ಲಿ ಪೂರೈಸಿಕೊಳ್ಳಬೇಕಲ್ಲದೆ,
ಪುರಹರ ಕಪಿಲಸಿದ್ಧಮಲ್ಲಿಕಾರ್ಜುನನ ಮಂದಿರವಾಸಿಗಳೆಂದು
ಬಾವಿಸಬಾರದು ನೋಡಯ್ಯಾ. ॥ ೭೧೪ ॥

೧೮೯೨

ಶ್ರೀಶೈಲದ ಮಹಿಮೆಯದು ಕರ್ಣಾಭರಣ.
ಶ್ರೀಶೈಲದ ಮಹಿಮೆಯದು ಸಾಧಿಸುವಡೆ ಬಯಲೈವರ್ಣ್ಯ,
ಶ್ರೀಶೈಲದ ಮಹಿಮೆಯದು ಶ್ರೀಶೈಲದಲ್ಲಿ.
ನಿಮ್ಮ ಮಹಿಮೆ ಮೂಲೋಕವೆಲ್ಲ ಇಂಬುಗೊಂಡಿತ್ತು ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೭೧೫ ॥

೧೮೯೩

ಎಲ್ಲರು ತಪವ ಮಾಡಿದರು;
ನಮ್ಮ ಶ್ರೀಶೈಲನ ತಪದಂತೆ ತಪದ-ಒರ್ವರನು ಕಾಣೆ.
ಎಲ್ಲರು ಲಿಂಗವ ಪೂಜಿಸಿದರು;
ನಮ್ಮಮ್ಮನವರ ಪೂಜೆಯಂತೆ [ಪೂಜೆಯ] ಒರ್ವರನು ಕಾಣೆ.
ಎಲ್ಲರು ಮಹಿಮೆಯ ಮಾಡಿದರು;
ನಮ್ಮ ಶ್ರೀಶೈಲವಲ್ಲಭ ಕಪಿಲಸಿದ್ಧಮಲ್ಲನಂತೆ ಒರ್ವರನು ಕಾಣೆ,
ಬೊಮ್ಮಣ್ಣಾ. ॥ ೭೧೬ ॥

೧೮೯೪

ಜನ್ಮವನೊಮ್ಮೆ ಧರಿಸಿದ ಬಳಿಕ,
ಜನನವಿನಾಶ ವಿಗ್ರಹ ಮೂರ್ತಿಯ ಪೂಜಿಸಲೆ ಬೇಕು.
ಜನ್ಮವನೊಮ್ಮೆ ಧರಿಸಿದ ಬಳಿಕ,
ಶ್ರೀಶೈಲ ಮಹಿಮೆಯ ಸಾಧಿಸಿ ನೋಡಲೆಬೇಕು ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೭೧೭ ॥

೧೮೯೫

ಭಕ್ತಿಯೆ ಲಿಂಗಪೂಜೆಯಾಗಿ ಅಳವಡಿಸಿಕೊಂಡ ಬಸವೇಶ.
ಜ್ಞಾನಕ್ರೀಯೆ ಲಿಂಗಪೂಜೆಯಾಗಿ ಅಳವಡಿಸಿಕೊಂಡ
ಚೆನ್ನಬಸವೇಶ.
ವೈರಾಗ್ಯವೆ ಲಿಂಗಪೂಜೆಯಾಗಿ ಅಳವಡಿಸಿಕೊಂಡ ಅಲ್ಲಮೇಶ.
ಅನುಭಾವವೆ ಲಿಂಗಪೂಜೆಯಾಗಿ ಅಳವಡಿಸಿಕೊಂಡ ನಿಮ್ಮ
ಬಾಲಕೇಶ,
ಕಪಿಲಸಿದ್ಧಮಲ್ಲೇಶ, ವ್ಯೋಮಕೇಶ, ನಾಶಪಾಶಾ. ॥ ೭೧೮ ॥

೧೮೯೬

'ಭವ ಭರ್ಗ ಭೀಮ ನೀಲಲೋಹಿತ ವಿರೂಪಾಕ್ಷ' ಎನ್ನು
ಮನವೆ.
'ನೀಲಕಂಠ ಉಮಾಪತಿ ದಯಾಳು ದಯಾಸಾಗರ' ಎನ್ನು
ಮನವೆ.

'ಉಗ್ರ ಕಪರ್ದಿ ಕೈಲಾಸವಾಸಿ ಸಿತಕಂಠ ಭಾಳಲೋಚನ' ಎನ್ನು
ಮನವೆ.
'ಕಾಲಾರಿ ಕಾಮಾರಿ ತ್ರಿಪುರಾರಿ ಪಾಪಾರಿ
ಕಪಿಲಸಿದ್ಧಮಲ್ಲಿಕಾರ್ಜುನ' ಎನ್ನು ಮನವೆ. ॥ ೭೧೯ ॥

೧೪೯೭

ವೇದ ವೇದಂಗಳೆಲ್ಲ ಶಿವನ ಹೊಗಳಿ ನಿರ್ಮಲವಾದವು
ನೋಡಾ.
'ಓಂ ನಮಃ ಸೋಮಾಯ ಚ ರುದ್ರಾಯ ಚ' ಎಂದು
ವೇದವಾಕ್ಯ ನೋಡಾ.
'ನಮಸ್ತಾಮ್ರಾಯ ಚಾರುಣಾಯ ಚ' ಎಂದು
ಪಂಡಿತಮುಖಪ್ರಸಿದ್ಧ ನೋಡಾ.
'ನಮಃ ಶೃಂಗಾಯ ಚ ಪಶುಪತಯೇ ಚ' ಎಂದು
ವೇದಾಧ್ಯಾಯಿಗಳರಿಕೆ ನೋಡಾ.
'ನಮಃ ಶಿವಾಯ ಚ ಶಿವತರಾಯ ಚ' ಎಂದು
ಕಪಿಲಸಿದ್ಧಮಲ್ಲಿಕಾರ್ಜುನನ ಪಂಚಮುಖದಲ್ಲಿ
ನಿತ್ಯ ನಿತ್ಯ ಘೋಷ ನೋಡಾ, ಕೇದಾರಯ್ಯಾ. ॥ ೭೨೦ ॥

೧೪೯೮

ನೀಲಲೋಹಿತ ಗಣೇಶ್ವರಾಯ, ಕಾಲಲೋಹಿತ ಗಣೇಶ್ವರಾಯ.
ಕಪಾಲ ಮೂಲಾಧಾರ ಗಣೇಶ್ವರಾಯ, ಮಾರಹರ
ಗಣೇಶ್ವರಾಯ.
ವೃಷಾಂಕವಾಹನ ಗಣೇಶ್ವರಾಯ, ಜಗದಂಬಾಸ್ವರೂಪ
ಗಣೇಶ್ವರಾಯ.
ಕಾಲಕಂಠ ಗಣೇಶ್ವರಾಯ, ಪಾರ್ವತೀಧ್ಯಾನಾಸಕ್ತ ಗಣೇಶ್ವರಾಯ.
ಸೋಮವಿಭೂಷಣ ಗಣೇಶ್ವರಾಯ, ಕುಮಾರಪಿತ ಗಣೇಶ್ವರಾಯ.
ವೀರಭದ್ರ ಗಣೇಶ್ವರಾಯ, ವ್ಯಾಲಭೂಷಣ ಗಣೇಶ್ವರಾಯ.
ಶಾಂಭವಮುನೀಶ್ವರ ಗಣೇಶ್ವರಾಯ, ವೃಷಭಯೋಗೀಶ್ವರ
ಗಣೇಶ್ವರಾಯ.
ನಮೋ ನಮಃ ಶಂಕರ ಗಣೇಶ್ವರಾಯ,
ನಮೋ ನಮಃ ಕಪಿಲಸಿದ್ಧಮಲ್ಲಿಕಾರ್ಜುನಾಯ,
ಮಹಾದೇವಾಯ ನಮೋ ನಮಃ. ॥ ೭೨೧ ॥

೧೮೯೯

ಎಲ್ಲರು ಶಿವಮಂತ್ರವ ಜಪಿಸುವುದಕ್ಕಿಂತ,
ಎಮ್ಮಮ್ಮನವರ ಮಂತ್ರವ ಜಪಿಸಿ ಸೇವೆಯಲ್ಲಿರಲಾರರು
ನೋಡಾ, ಮನುಮುನೀಶ್ವರರು.
ಎಲ್ಲರು ಶಿವಮಂತ್ರವ ಜಪಿಸುವುದಕ್ಕಿಂತ ಎಮ್ಮಮ್ಮನವರ ಮಂತ್ರ
'ಸರ್ವಮಂಗಳಾಯೈ ಶಿವಾಯೈ ಜಗದಂಬಾಯೈ
ಜಗದ್ವಂದ್ಯಜಗದಾಧಾರಾಯೈ ನಮೋ ನಮಃ!' ಎನ್ನರು ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ, ಮಹಾಪ್ರಮಥರು. ॥ ೭೨೨ ॥

೧೯೦೦

ಐದಕ್ಕರವವು ಎಮ್ಮಮ್ಮನವರು.
ಮುಂದಣ ಅಕ್ಕರವದು ಜಗಜ್ಜನಕನದು.
ಮುಂದೊಂದು ತಾರೆ,ಮುಂದೊಂದು ತಾರೆ
ಇಡಲದು ತೋರುವಳು ಈ ಸ್ಥಾನಮೀಸಂಪದ್ವೈಭವ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೭೨೩ ॥

೧೯೦೧

ಎನ್ನ ರೋಮಂಗಳೆಲ್ಲವು ನಯನಂಗಳಾದಡೆ ಸಾಲ್ವವು ನೋಡಾ,
ಜಗದಂಬೆಯ ಪಾದಪಂಕಜದರ್ಶನಕ್ಕೆ.
ಎನ್ನ ನಯನಂಗಳೆಲ್ಲ ಜ್ಞಾನಚಕ್ಷುಗಳಾದಡೆ ಸಾಲ್ವವು ನೋಡಾ,
ಜಗದಂಬೆಯ ಪಾದಪಂಕಜಧ್ಯಾನಕ್ಕೆ.
ಎನ್ನ ಜ್ಞಾನಚಕ್ಷುಗಳೆಲ್ಲ 'ಅಖಂಡಾದ್ವಯ ಏಕೋನೇತ್ರ'ವಾದಡೆ
ಕೂಡುವುದು ನೋಡಾ, ಜಗದಂಬೆಯ ಪಾದಪಂಕಜದಲ್ಲಿ
ಭಾವವು,
ಭವಹರೆ ಪುರಹರ ಕಪಿಲಸಿದ್ಧಮಲ್ಲೇಂದ್ರಾ. ॥ ೭೨೪ ॥

೧೯೦೨

ತಾನು ಧನವಂತನಾಗಬೇಕೆಂಬಾಶೆಯುಳ್ಳಡೆ,
ಜಪಿಸಿ ನೋಡಾ ಶ್ರೀಮಂತ್ರವ.
ತಾನುಪೇಂದ್ರನಾಗಬೇಕೆಂಬಾಶೆಯುಳ್ಳಡೆ,
ಜಪಿಸಿ ನೋಡಾ ಶಕ್ತಿಮಂತ್ರವ.

ತಾನು ಬ್ರಹ್ಮನಾಗಬೇಕೆಂಬಿಚ್ಛೆಯುಳ್ಳಡೆ,
ಜಪಿಸಿ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನ-ಮಹಾದೇವಿಯ ಮಹಾಮಂತ್ರವ.
॥ ೭೨೫ ॥

೧೯೦೩

ಭೋ ಜಗದಂಬಾ, ಭೋ ಜಗದಂಬಾ, 'ಮಮಾಂಬಾ'
ಎಂದು ನಂಬಿದೆ.
ಭೋ ಸರ್ವಮಂಗಳಾ, 'ಸರ್ವಮಂಗಳಾ' ಎಂದು ನಂಬಿದೆ.
ಭೋ ಅಂಬಾ, 'ಮಮಾಂಬಾ' ಎಂದು ನಂಬಿದೆ.
ಭೋ ಕಪಿಲಸಿದ್ಧಮಲ್ಲಿಕಾರ್ಜುನಾ, ಭೋ,
ನಿಮ್ಮ ಶಕ್ತಿ ನಿಮಗಾಧಾರವೆಂದು ನಂಬಿದೆ. ॥ ೭೨೬ ॥

೧೯೦೪

"ಯಥಾ ಷಡಕ್ಷರಂ ಮಂತ್ರಂ ದೇವ್ಯೈ ದೇವಸಮೀರಿತಂ" ಎಂದ
ಬಳಿಕ
ಷಡಕ್ಷರವೆಂಬುದು ಶಿವಮಂತ್ರ; ಪಂಚಾಕ್ಷರವು ಶಕ್ತಿಮಂತ್ರ.
ಇದರಂತುವನರಿಯಬಲ್ಲಡೆ ಗುರುವಿನಿಂದಲ್ಲದೆ
ಪರ ನರರಿಂದಾಗದು ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೭೨೭ ॥

೧೯೦೫

ಪಂಚಾಕ್ಷರವೆಂಬುದದು ಪಂಚಮುಖಪ್ರಸಾದ
ನೋಡಾ, ಬಸವಂಗೆ.
ಪಂಚಾಕ್ಷರಮಂತ್ರವೆಂಬುದು ಮಹಾದೇವಿಯ ಪ್ರಸನ್ನತೆ
ನೋಡಾ, ಚೆನ್ನಬಸವಂಗೆ.
ಪಂಚಾಕ್ಷರಮಂತ್ರವೆಂಬುದು ಪಂಚಾವಸ್ಥಾತೀತ
ಪರವಸ್ತುವಿನಲ್ಲಿ ಮೇಳನ ನೋಡಾ, ಪ್ರಭುದೇವಂಗೆ.
ಪಂಚಾಕ್ಷರವೆಂಬುದು ಪಂಚವರ್ಷದ ಕುಮಾರಾವಸ್ಥೆ
ನೋಡಾ, ಸನತ್ಕುಮಾರಂಗೆ, ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೭೨೮ ॥

೧೯೦೬

ಕೋಟಿ ಕೋಟಿ ಜನ್ಮವ ತಾಳಿ ಕೋಟಲೆಗೊಳುವುದೇಕಯ್ಯಾ?
ಕೋಟಿಯೊಳಗರ್ಧ, ಅರ್ಧದೊಳಗರ್ಧ ನಾಟಿಸಿದೆ.
'ನಮಃಶಿವಾಯ' ಎಂದಡೆ, ಕೋಟಿ ಕೊಟಿ ನರಕಂಗಳನೀಡಾಡಿ,
ಮಹಾದೇವಿಯರ ಮಂದಿರದ ಕೋಟೆಯನೇರಿಸಿತ್ತು
ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೭೨೯ ॥

೧೯೦೭

ಎಂಟು ಮಣೆಯ ಮನೆಯಲ್ಲಿ ಕಂಟಕವಿಲ್ಲದ ಮೂರ್ತಿ
ತಾ ನಾಟ್ಯವ ಮಾಡುತ್ತಿದೆ ನೋಡಾ.
ಆ ಎಂಟು ಮಣೆಯಲ್ಲಿ ತನ್ನಂಟು ಇಲ್ಲದೆ,
ತಾ ಸ್ವತಂತ್ರ ನಾಟ್ಯನಾಗಿ ಆಡುತ್ತಿಹ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನ ಮೂರ್ತಿಯು. ॥ ೭೩೦ ॥

೧೯೦೮

ಜಾಗ್ರದಲ್ಲಿಹ ಮನುಷ್ಯಂಗೆ
ಸ್ವಪ್ನ ಸುಷುಪ್ತಿ ಮಿಥ್ಯವೆಂಬುದು ಪ್ರಸಿದ್ಧ.
ಸ್ವಪ್ನದಲ್ಲಿಹ ಮನುಷ್ಯಂಗೆ [ಜಾಗ್ರ] ಸುಷಪ್ತಿ
ಎಂಬುದು ತೋರಬಾರದು,
ಸುಷುಪ್ತಿಯಲ್ಲಿ ಜಾಗ್ರ ಸ್ವಪ್ನವೆಂಬುದು ತಿಲಮಾತ್ರ
ತಿಳಿಯಬಾರದು,
ನೋಡಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ. ॥ ೭೩೧ ॥

೧೯೦೯

ಪಂಚೀಕರಣ ಕ್ರಿಯದಿಂದಲ್ಲದೆ ದೇಹದಿಂದರಿಯಬಾರದು.
ಪಂಚೇಂದ್ರಿಯ ಪಂಚಮುಖದಿಂದಲ್ಲದೆ ಸ್ವತಂತ್ರ
ತಿಳಿಯಬಾರದು ನೋಡಾ, ಕಲ್ಲಯ್ಯಾ.* ॥ ೭೩೨ ॥

* ಅಂಕಿತವಿಲ್ಲದ ಸಿದ್ಧರಾಮನ ವಚನ,

೧೯೧೦

ಮೀರಿದ ಮಹಾಮಂತ್ರವಿದೆಂದು ಕೂಗುವ
ಅಷ್ಟಾದಶ ಪುರಾಣ ನೋಡಿ ನೀ ಕೂಗದಿರು ಮರುಳೆ!
ಕಡೆಯಕ್ಷರದ ಅರ್ಥವದು ಕಾರಣಾತೀತ ವಸ್ತು ನೋಡಾ
ಮರುಳೆ!
ಆ ವಸ್ತುವಿಗೆ ನೀನಾಗಬೇಕೆಂಬುವುದಕ್ಕೆ 'ನಮಃ' ಎನ್ನು ಮರುಳೆ!
ಕಪಿಲಸಿದ್ಧಮಲ್ಲಿಕಾರ್ಜುನ ಮಹಾಲಿಂಗದಲ್ಲಿ. ॥ ೭೩೩ ॥

೧೯೧೧

ಮನನ ಮಾಡಿದ ಮಂತ್ರ ಮಹಾಪದವಿಯ ಕೊಟ್ಟಿತ್ತಯ್ಯಾ.
ಮನನವರಿಯದ ಮಂತ್ರ ಮಂತ್ರದಲ್ಲಿಯ ವಸ್ತುವ ಕೊಟ್ಟಿತ್ತಯ್ಯಾ.
ಮಂತ್ರವೇನು ಮನವೆ? ಕಪಿಲಸಿದ್ಧಮಲ್ಲಿಕಾರ್ಜುನನ ಫಲವೇನು?
ವಿಚಾರದಿಂದ, ವಿಶ್ವಾಸದಿಂದಗಣಿತ ಫಲವ ಕೊಟ್ಟಿತ್ತಯ್ಯಾ.
॥ ೭೩೪ ॥

೧೯೧೨

ಜಪವೇನು, ತಪವೇನು,
ಸಾಧಿಸುವಾತಂಗದು ದುರ್ಲಭವಲ್ಲವೆ, ಮನವೆ?
ನೇಮವೇನು, ನಿತ್ಯವೇನು,
ಸಾಧಿಸುವಾತಂಗದು ದುರ್ಲಭ ದೇವಾ.
ಪೂಜೆಯ ಸೋಜಿಗತನದ ಮಹಾಮಹತ್ವವೇನು?
ಸಾಧಿಸುವಾತಂಗದು ದುರ್ಲಭವಲ್ಲವೆ?
ಹೇ ದೇವಾ, ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೭೩೫ ॥

೧೯೧೩

ತಾ ಜಿತೇಂದ್ರಿಯನಾಗಿ ಹಲಕೆಲವು ತಪಸ್ವಿನಾಸೆ ತನಗೇಕಯ್ಯಾ?
ತಾ ಪರುಷರಾಗಿ ಅನ್ಯ ರಜತ ತಾಮ್ರ ಚಿನ್ನದಾಸೆ ತನಗೇಕಯ್ಯಾ?
ತಾ ಜೀವನ್ಮುಕ್ತನಾಗಿ ಭವದ ನಿಬಿಡವಾಸೆ ತನಗೇಕಯ್ಯಾ?

ತಾ ಕಪಿಲಸಿದ್ಧಮಲ್ಲಿಕಾರ್ಜುನನಾಗಿ
ಮೂಲೋಕದ ಸುದ್ದಿಯಾಸೆ ತನಗೇಕಯ್ಯಾ, ಕೇದಾರಯ್ಯಾ?
॥ ೭೩೬ ॥

೧೯೧೪

ಲಿಂಗದ ಅಂಗವದು ಅಳವಡಿದಿರೆ
ಸಂಗವ ಮಾಡು ಪುರಾತರ, ಮನವೆ.
ಕಂಗಳವರಿಯದಿರೆ ತಿಂಗಳಧರನ ಪೂಜಿಸು ಮನವೆ.
ಲಿಂಗಾಂಗ ಸಮರಸವಾಗದಿರೆ
ಗಂಗಾಧರ ಕಪಿಲಸಿದ್ಧಮಲ್ಲಿಕಾರ್ಜುನ ಎನ್ನು, ಮನವೆ. ॥ ೭೩೭ ॥

೧೯೧೫

ಹುಣಚೆಯ ಮರದಲ್ಲೊಂದು ಹಣಚೆಯ ಬೇರಳಿಟ್ಟು ಹೋದಲ್ಲಿ,
ಆ ಹುಣಚೆಯ ಮರ ಹಣಚೆಯ ಮರವಾಗಿ ತಾ ಕಣಚೆ
ಹೋದುದ ಕಂಡೆ.
ಈ ಹುಣಚೆಯ ಹಣಚೆಯ ಹವಣವ ತಿಳಿದು ಅರಿಯಬಲ್ಲಡೆ,
ಹಣೆಯ ಕಣ್ಣಿನ ಶರಣನೆಂಬೆ ನೋಡಾ,
ತ್ರಿಣಯನ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೭೩೮ ॥

೧೯೧೬

ಕಾದುವರೆ ಕೈಯೆರಡುಂಟೆ?
ಬೇಡುವರೆ ಬಾಯಿ ಹರಿಯದುಂಟೆ?
ಕಾದಬಾರದು ಬೇಡಬಾರದು,
ಕೂಡುವ ಕಾಲಕ್ಕೆ ಕೂಡಲಿಡಬಾರದು ಕಾಣಾ,
ಗುರು ಚೆನ್ನಬಸವಣ್ಣನಲ್ಲಿ ಕಪಿಲಸಿದ್ಧಮಲ್ಲಿಕಾರ್ಜುನಾ.॥ ೭೩೯ ॥

೧೯೧೭

ವ್ಯಾಕರಣವನೋದಿದಲ್ಲಿ ಶಬ್ದಶುದ್ಧಿಯಲ್ಲದೆ,
ಮನ ಶುದ್ಧವಾಗಿ ಜ್ಞಾನಶುದ್ಧಿಯಾಗದು.
ಛಂದಸ್ಸು ಸಾಧಿಸಿದಲ್ಲಿ ಕವಿತಾಶುದ್ಧಿಯಲ್ಲದೆ,
ಕವಿತೆಯ ಸಾಧಿಸಿ, ವ್ಯಾಸನಂತೆ ಚಿರಂಜೀವಿಯಾಗನು.

ಅಷ್ಟಾದಶಪುರಾಣವ ಸಾಧಿಸಿದಲ್ಲಿ ವಾಕ್‌ಶುದ್ಧಿಯಲ್ಲದೆ,
ಕಪಿಲಸಿದ್ಧಮಲ್ಲಿಕಾರ್ಜುನ ಮಹಾದೇವಾ,
ದೇಹಸ್ವಭಾವ ಶುದ್ಧಿಯಾಗದು ನೋಡಾ,
ಮಡಿವಾಳ ಮಾಚಯ್ಯಾ. ॥ ೭೪೦ ॥

೧೯೧೮

ರೇಖೆ ರೇಖೆ ಕೂಡಿದಲ್ಲಿ ಅಕ್ಷರವಾದುವು;
ಅಕ್ಷರಾಕ್ಷರ ಕೂಡಿದಲ್ಲಿ ಶಬ್ದವಾಯಿತ್ತು;
ಶಬ್ದ ಶಬ್ದ ಕೂಡಿದಲ್ಲಿ ಗ್ರಂಥಾನ್ವಯವಾಯಿತ್ತು.
ಅಕ್ಷರದಲ್ಲಿಲ್ಲ, ಶಬ್ದದಲ್ಲಿಲ್ಲ, ಗ್ರಂಥಾನ್ವಯದಲ್ಲಿಲ್ಲ;
ಏನೆಂಬುದಿಲ್ಲ, ಮೊದಲೆ ಇಲ್ಲ.
ಇಲ್ಲೆಂಬುವ ಅಹುದೆಂಬುವ ಉಭಯ ಶಬ್ದಕ್ಕೆ ಲೋಪವಿಲ್ಲ
ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನ ಮಹಾಮಹಿಮನು.
॥ ೭೪೧ ॥

೧೯೧೯

ದೀಪದಂತಿಹ ಜನ್ಮ
ಬಂದುದು ತಿಳಿಯಬಾರದು, ಹೋಹುದು ತಿಳಿಯಬಾರದು.
ಮೇಘದಂತಿಹ ಜನ್ಮ
ಬಂದುದು ತಿಳಿಯಬಾರದು, ಹೋಹುದು ತಿಳಿಯಬಾರದು.
ಶಿಶುವಿನಂತಹ ಜನ್ಮ
ಬದುಕುವುದು ತಿಳಿಯದು, ಬದುಕಿ ಬಾಳಿತೆಂಬುದು
ತಿಳಿಯಬಾರದು ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೭೪೨ ॥

೧೯೨೦

ಸ್ವಪ್ನದಲ್ಲಿ ಪಾಶಬದ್ಧತ್ವಕ್ಕೆ
ಸ್ವಪ್ನದಲ್ಲಿ ಬೇರ್ಪಡಿಸು ಕಂಡಾ ಗುರುವೆ,
ಕಪಿಲಸಿದ್ಧಮಲ್ಲಿಕಾರ್ಜುನ ಗುರುವೆ. ॥ ೭೪೩ ॥

೧೯೨೧

ದಿನ ಒಂದರಲ್ಲಿ ವಾರ ಏಳು ನೋಡಾ.
ಆ ಏಳು ವಾರಗಳೆಂಬುವುದು ಕಲ್ಪಿತವಲ್ಲದೆ
ದೃಷ್ಟಿಯನ್ನಿಟ್ಟು ನೋಡಬಾರದು ನೋಡಾ.
ದೇವರೆಂಬುವುದೊಂದು ನೋಡಾ.
ಆ ದೇವರೆಂಬುವುದೊಂದರಲ್ಲಿ,
ಬ್ರಹ್ಮ ವಿಷ್ಣು ರುದ್ರ ಈಶ್ವರ ಸದಾಶಿವ ವಿರಾಟ್ಪುರುಷರೆಂಬುವುದು;
ನೋಡಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ. ॥ ೭೪೪ ॥

೧೯೨೨

ಚೌಕೋಣೆಯ ಮಂಟಪದಲ್ಲಿ ಪಂಚಕೋಣೆಯ ದೇವ,
ತ್ರಿಕೋಣೆಯಲ್ಲಿ ನಿಂತು ಸುಳಿಯುತ್ತಿರ್ಪ.
ಆ ತ್ರಿಕೋಣೆಗಳಿದ್ದಂತಿರ್ಪವೆಂಬುದ ಅರಿಯಬಾರದು.
ಹೊತ್ತಿಗೊಮ್ಮೆ ಪರಿಪರಿಯಾಗಿ ಕೇಡುಗೊಂಡುವು ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ. ॥ ೭೪೫ ॥

೧೯೨೩

ತಾನು ಮಾನವಂತನಾದಡೆ,
ಅಹಂಕಾರದ ನಾಶದಲ್ಲಿ ಮರೆಯ ಮಾಡಿಕೊಂಡಿರ್ಪುದು
ಬಹುಕರ ಲೇಸಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ. ॥ ೭೪೬ ॥

೧೯೨೪

ಘಟವೆಂಬುದು ದಿಟವಲ್ಲ ನೋಡಾ, ಕೇದಾರಯ್ಯಾ.
ಪಟವೆಂಬುದು ದಿಟವಲ್ಲ ನೋಡಾ, ಕಲ್ಲಯ್ಯಾ.
ಮಾಡಿದ ಘಟ, ನೆಯ್ದ ವಸ್ತ್ರಪಟ ಕಡೆ ಕಾಣಬಲ್ಲಡೆ,
ಲಯವೆಂಬುದೆಲ್ಲಿಹುದು ಹೇಳಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನನ ಸಾನ್ನಿಧ್ಯದಲ್ಲಿ? ॥ ೭೪೭ ॥

೧೯೨೫

ಜೀವಾತ್ಮವೆಂಬುದು ಪಂಚಭೂತಮಯ
ದೇಹವನಾಶ್ರಯಿಸಿತ್ತು ನೋಡಾ.

ಪರಮಾತ್ಮವೆಂಬುದು ಅಜಾಂಡ ನೂರಾರನೊಳಗುಮಾಡಿ,
'ಅತ್ಯತಿಷ್ಠದ್ದಶಾಂಗುಲಂ' ಎನಿಸಿತ್ತು ನೋಡಾ.
ಅಂತರಾತ್ಮವೆಂಬುದು ಜೀವಾತ್ಮವನಳಿದು
ಪರಮಾತ್ಮನಲ್ಲಿ ಕೂಡುವ ಕೂಟವೆನಿಸಿತ್ತು.
ಈ ಆತ್ಮತ್ರಯ ಕಡೆಗೆ ಕಪಿಲಸಿದ್ಧಮಲ್ಲಿಕಾರ್ಜುನನ ರೂಪು
ಪ್ರಸಿದ್ಧ ನೋಡಾ, ಕೇದಾರಯ್ಯಾ. ॥ ೭೪೮ ॥

೧೯೨೬

"ಶಿವಾ ಭವಾನೀ ರುದ್ರಾಣೀ ಶಿವೋ ಮಹೇಶ್ವರಃ ಶಂಭುಃ"
ಎಂಬಲ್ಲಿ,
ನಮ್ಮಮ್ಮನ ಶಿವನ ನಾಮ ಒಂದೆ ನೋಡಾ.
ವಿವೇಕದೃಷ್ಟಿಯಿಂದ ನೋಡಿದಡೆ,
ಅದು ಶಿವನ ಶಕ್ತಿಮಂತ್ರವಾಗಿ ಅರಿಯಬಂದಿತ್ತು ನೋಡಾ.
'ಓಂ ನಮಃ ಶಿವಾಯ, ನಮಃ ಶಿವಾಯ್ಯೆ'
ಎಂಬುಭಯ ಮಂತ್ರ ಒಂದೆ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೭೪೯ ॥

೧೯೨೭

ಪಂಚಾಕ್ಷರವೆಂಬುದು ಶಿವನ ಪಂಚಾವಸ್ಥೆ ನೋಡಾ.
ಪಂಚಾಕ್ಷರವೆಂಬುದು ಪಂಚಾಚಾರಫಲದಾಯಕ ನೋಡಾ.
ಪಂಚಾಕ್ಷರವೆಂಬುದು ಪಂಚಮುಖ ಪಂಚಮುಖಿ ಮಹಾದೇವಿ
ಕಪಿಲಸಿದ್ಧಮಲ್ಲಿಕಾರ್ಜುನನ ಪ್ರಸನ್ನತೆ ನೋಡಾ,
ಎಂದು ತಿಳುಹಿದ ಚೆನ್ನಬಸವಣ್ಣನ ಪಾದಕ್ಕೆ ನಮೋ ನಮೋ
ಎಂಬೆ,
ನೋಡಾ,ಮಡಿವಾಳ ಮಾಚಯ್ಯಾ. ॥ ೭೫೦ ॥

೧೯೨೮

ಕಾಯ್ದ ಕರ್ಬುನ ನೀರನೊಳಕೊಂಬಂತೆ,
ಬಿದ್ದ ಬಿಂದುವ ಭೂಮಿಯೊಳಕೊಂಬಂತೆ,
ನವನೀತ ಘೃತವನೊಳಕೊಂಬಂತೆ,
ವೀಳ್ಯ ರಸವೊಳಕೊಂಬಂತೆ-
ಎನ್ನ ಕಾಯುವ ತನ್ನ ಕಾಯದಲ್ಲಿ ಒಳಕೊಂಡು ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನ ಮಹಾಶರಣನ. ॥ ೭೫೧ ॥

೧೯೨೯

ಕಾಲು ಮೇಲು ಮಾಡಿ, ಕೋಲು ಕೆಳಯಿಕೆ ಊರಿ,
ಕಾಲಕಾಲ ತಪಶ್ಚರ್ಯ ಮಾಡಿದಡೆ ಕಾಲಾಂತಕ ನೋಡಾ.
ದೇಶಕಾಲವಸ್ತುತ್ರಯವನರಿದಲ್ಲಿ,
ಕಾಲಾರಿ ಕಾಲಕಾಲದಲ್ಲಿ ಕಾಲ್ತೊಡಕಾಗಿರುವ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೭೫೨ ॥

೧೯೩೦

ವೇದವನೋದಿ ವೇದಾಧ್ಯಯನವ ಮಾಡಿದಡೇನು,
ಬ್ರಾಹ್ಮಣನಾಗಬಲ್ಲನೆ?
ಬ್ರಹ್ಮವೇತ್ತುಗಳ ಶುಕ್ಲಶೋಣಿತದಿಂದ ಜನಿಸಿದಡೇನು,
ಬ್ರಾಹ್ಮಣನಾಗಬಲ್ಲನೆ?
ಯಜನಾ[ದಿ ಇ]ಷ್ಟ ಷಟ್ಕರ್ಮಂಗಳ ಬಿಡದೆ ಮಾಡಿದಡೇನು,
ಬ್ರಾಹ್ಮಣನಾಗಬಲ್ಲನೆ?
'ಬ್ರಹ್ಮ ಜಾನಾತಿ ಇತಿ ಬ್ರಾಹ್ಮಣಃ' ಎಂಬ ವೇದವಾಕ್ಯವನರಿದು,
ಬ್ರಹ್ಮಭೂತನಾದಾತನೆ ಬ್ರಾಹ್ಮಣ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೭೫೩ ॥

೧೯೩೧

ಗುಣದಿಂದ ಹಾರುವನಲ್ಲದೆ, ಅಗಣಿತ ವಿದ್ಯಾಭ್ಯಾಸದಿಂದ
ಹಾರುವನಲ್ಲ.
ಹಾರುಬೇಕು ಮಲತ್ರಯಂಗಳ; ಹಾರಬೇಕು ಸೃಷ್ಟಿ-ಸ್ಥಿತಿ ಲಯವ;
ಹಾರಬೇಕು, ಸರ್ಪಹಾರ ಕಪಿಲಸಿದ್ಧಮಲ್ಲಿರ್ಜುನನ ಆ
ಹಾರದಲ್ಲಿ. ॥ ೭೫೪ ॥

೧೯೩೨

ಶಿಷ್ಯನೆಂಬ ವನಕ್ಕೆ ವಸಂತ ನೋಡಾ ಗುರು.
ಶಿಷ್ಯನೆಂಬ ತಿಮಿರಕ್ಕೆ ಜ್ಯೋತಿ ನೋಡಾ ಗುರು.
ಶಿಷ್ಯನೆಂಬ ರಾತ್ರಿಗೆ ಸೂರ್ಯ ನೋಡಾ ಗುರು.
ಶಿಷ್ಯನೆಂಬ ನನಗೆ ಪ್ರಕೃಷ್ಟ ಪ್ರಮಥ ಚಿಂತಾಮಣಿ
ಚೆನ್ನಬಸವ ಗುರು, ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೭೫೫ ॥

೧೯೩೩

ಕುಲದಿಂದಧಿಕವೆಂದು ಹೋರಾಡುವ ಅಣ್ಣಗಳಿರಾ, ಕೇಳಿರಯ್ಯಾ:
ಬ್ರಾಹ್ಮಣನವ ಮಧುವಯ್ಯ, ಚಂಡಾಲನವ ಹರಳಯ್ಯ,
ದೂರ್ವಾಸನವ ಮಚ್ಚಿಗ, ಊರ್ವಶಿಯಾಕೆ ದೇವಾಂಗನೆ,
ಚಂಡಾಲನವ ಪರಾಶರ, ಕುಸುಮಗಂಧಿಯಾಕೆ ಕಬ್ಬಿಲಗಿತ್ತಿ.
'ಜಪತಸ್ತಪತೋಃ ಗುಣತಃ' ಕಪಿಲಸಿದ್ಧಮಲ್ಲಿಕಾರ್ಜುನಾ ಕೇಳಾ,
ಕೇದಾರಯ್ಯ. ॥ ೭೫೬ ॥

೧೯೩೪

ಜೀವಾತ್ಮಕ ಜೀವನಲ್ಲ, ಜೀವಾತ್ಮಕ ಶಿವನಲ್ಲ.
ಶಿವನಂತುವನರಿಯದೆ ಹೋದವು ವೇದಗಳು,
ಜೀವನಂತುವನರಿಯದೆ ಹೋದರು ಮಹಾಮುನಿಗಳು.
ಶಿವಜೀವಕ್ಕೆ ಭೇದವಿಲ್ಲೆಂಬುವರ ನಾ ನೋಡಲಾರೆನು,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೭೫೭ ॥

೧೯೩೫

ಈ ರಚನೆಯೆಂಬುದು
ಇಮ್ಮಡಿ ಮುಮ್ಮಡಿಯಿಂದಲ್ಲದೆ ಒಮ್ಮಡಿಯಿಂದಾಗದು.
ಆದಿಯಲ್ಲಿ ಬ್ರಹ್ಮ, ಅನಾದಿಯಲ್ಲಿ ಏನೆಂಬುದಿಲ್ಲ.
ಇತ್ತಲಿದು ಮಾಯಾಶಕ್ತಿಯಿಂ ಮಾಧವನ ಉತ್ಪತ್ತಿ ;
ಮಾಧವನ ಉತ್ಪತ್ತಿಯಿಂ ಮೂಲೋಕ ನಿಮಿರಿತ್ತು ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೭೫೮ ॥

೧೯೩೬

ಕಾಜಿನ ಮಣಿ ಪಚ್ಚದಂದವಿರೆ, ಕಾಜಿನ ಮಣಿಯೆ ಪ್ರಸಿದ್ಧ.
ಲೋಕದ ಮಾನವ ಯೋಗಿಯಂತಿರೆ, ಲೋಕದ ಮಾನವನೆ ಪ್ರಸಿದ್ಧ.
ಬಾಹ್ಯವರ್ಣ ಜನಪ್ರಸಿದ್ಧವಲ್ಲದೆ,
ಕಪಿಲಸಿದ್ಧಮಲ್ಲಿಕಾರ್ಜುನನ ಚಿತ್ತಕ್ಕೆ ಪ್ರಸಿದ್ಧವಲ್ಲ. ॥ ೭೫೯ ॥

೧೯೩೭

ಆಂದೋಲನದಲ್ಲಿಹ ರಾಜಶಿಶುವಿನಂತಿರಬಲ್ಲಡೆ,
ಅದು ಯೋಗಿಗೆ ಭೂಷಣ.
ಸಂಧ್ಯಾಕಾಲದಲ್ಲಿಹ ಪ್ರಕಾಶದಂತೆ ವಿಷಯಸುಖವಿರಬಲ್ಲಡೆ,
ಅದು ಯೋಗಿಗೆ ಭೂಷಣ.
ವಾರಾಂಗನೆಯಲ್ಲಿಹ ಪ್ರೀತಿಯಂತಿರಬಲ್ಲಡೆ,
ಅದು ಯೋಗಿಗೆ ಭೂಷಣ.
ಪತಿವ್ರತೆಯಲ್ಲಿಹ ಭಕ್ತಿಯಂತಿರಬಲ್ಲಡೆ
ಅದು ಯೋಗಿಗೆ ಭೂಷಣ.
ಕಪಿಲಸಿದ್ಧಮಲ್ಲಿಕಾರ್ಜುನಂಗದು ಬಹು ತೋಷಣ ಕೇಳಾ,
ಮನವೆ. ॥ ೭೬೦ ॥

೧೯೩೮

ಸಂಯೋಗವೆಂಬುದು ಪರಮೇಶ್ವರನ ಲೀಲೆಯದು
ಅಲ್ಲ ಅಲ್ಲವೆಂದಡೆ, ಆ ಸಂಯೋಗದಿಂದವೆ ಜಗದುತ್ಪನ್ನ.
ಉತ್ಪತ್ತಿನಾಶನಕ್ಕೆಯೂ ಸಂಯೋಗವೇ ಬೇಕು.
ಆ ಸಂಯೋಗ ಸರಿಯೆ ಪ್ರಾರಬ್ಧವಳಿಯಿತ್ತೆಂಬರು ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೭೬೧ ॥

೧೯೩೯

ದೇಶವ ತಿರುಗಿದಡೇನು, ಕಾಶೀ ರಾಮೇಶ್ವರ
ಯಾತ್ರೆಯ ಮಾಡಿದಡೇನು,
ಕೋಶತ್ರಯವನರಿದು ದಾಂಟದನ್ನಕ್ಕ?
ದೇಶವ ತಿರುಗಿದಲ್ಲಿ ಲಕ್ಷಣಾಲಕ್ಷಣಾವಲೋಕನವೆ ಪ್ರಾಪ್ತಿ ;
ಯಾತ್ರೆಯ ಮಾಡಿದಲ್ಲಿ ಮೂಢಜನಕ್ಕೆ ಸಾಧುದೃಷ್ಟತ್ವವೆ ಪ್ರಾಪ್ತಿ.
ಕೋಶತ್ರಯವ ದಾಂಟಿದಲ್ಲಿ ಕಪಿಲಸಿದ್ಧಮಲ್ಲಿಕಾರ್ಜುನನ
ಸ್ವಭಾವವೆ ಪ್ರಾಪ್ತಿ ನೋಡಾ, ಕೇದಾರಯ್ಯಾ. ॥ ೭೬೨ ॥

೧೯೪೦

ಏಕಪಙ್ತಿಯಲ್ಲಿ ತಾ ಭೋಜನಭೇದ ಮಾಡಬಾರದು.
ಭೋಜನಭೇದ ಮಾಡಿದಡೆಯು ತಾನೆಣಿಸಬಾರದು.
ತಾನೆಣಿಸಿದಲ್ಲಿಯೂ ಅನ್ಯರಿಗೆ ತಿಳಿಯಬಾರದು.

ಅನ್ಯರಿಗೆ ತಿಳಿದಡೆಯು ಮನೆ ಬೇರಾಗಬಾರದು.
ಮನೆ ಬೇರಾದಡೆಯು ಮನ ಬೇರಾಗಬಾರದು
ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೭೬೩ ॥

೧೯೪೧

ಗುರುಸಾಹಿತ್ಯ ಚೆನ್ನಬಸವಂಗಾಯಿತ್ತು ;
ಲಿಂಗಸಾಹಿತ್ಯ ಬಸವಂಗಾಯಿತ್ತು ;
ಜಂಗಮಸಾಹಿತ್ಯ ಅಲ್ಲಮದೇವಂಗಾಯಿತ್ತು ;
ಪ್ರಸಾದಸಾಹಿತ್ಯ ಬಿಬ್ಬಿಬಾಚರಸಂಗಾಯಿತ್ತು ;
ಪಾದೋದಕಸಾಹಿತ್ಯ ಹೊಡೆಹುಲ್ಲ ಬಂಕಯ್ಯಂಗಾಯಿತ್ತು ;
ಭಸ್ಮಸಾಹಿತ್ಯ ಅಕ್ಕನಾಗಮ್ಮಂಗಾಯಿತ್ತು ;
ರುದ್ರಾಕ್ಷಿಸಾಹಿತ್ಯ ಸರ್ವಪ್ರಮಥರಿಗಾಯಿತ್ತು.
ಮಂತ್ರಸಾಹಿತ್ಯದವರ ಕಂಡಡೆ,
ಕಪಿಲಸಿದ್ಧಮಲ್ಲಿಕಾರ್ಜುನಯ್ಯನಿವರೆ ಎಂದು
ಎನ್ನ ಮನ ನಂಬಿತ್ತು ನೋಡಾ, ಮಡಿವಾಳ ಮಾಚಯ್ಯ.
॥ ೭೬೪ ॥

೧೯೪೨

ಸರ್ವರು ಜ್ಞಾನದಿಂದಲ್ಲದೆ,
ಗೋತ್ರಾಭಿಮಾನದಿಂದ ಮೋಕ್ಷವಂತರಲ್ಲ ಕೇಳಾ.
"ತಪಸಾ ಬ್ರಾಹ್ಮಣೋ ಜಾತೋ ವಿಶ್ವಾಮಿತ್ರೋ ಮಹಾಮುನಿಃ।
ತಪಸಾ ಬ್ರಾಹ್ಮಣೋ ಜಾತೋ ನಾರದೋ ಹಿ ಮಹಾಮುನಿಃ॥
ತಪಸಾ ಬ್ರಾಹ್ಮಣೋ ಜಾತಿಶ್ಚಾಗಸ್ತ್ಯೋ ಮುನಿಪುಂಗವಃ।
ತಪಸಾ ಬ್ರಾಹ್ಮಣೋ ಜಾತಃ ಪರಶರಮಹಾಮುನಿಃ॥
ತಪಸಾ ಬ್ರಾಹ್ಮಣೋ ಜಾತೋ ದೂರ್ವಾಸಸ್ತು ಮಹಾಮುನಿಃ।
ತಪಸಾ ಬ್ರಾಹ್ಮಣೋ ಜಾತೋ ಭೃಗುರ್ವ್ಯಾಸಶ್ಚ ಮಾಂಡವಃ॥"
ಎಂಬುದು ಹುಸಿಯಲ್ಲ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೭೬೫ ॥

೧೯೪೩

ಕುಲದಲ್ಲಿಯೂ ಅಧಿಕ ಜ್ಞಾನದಲ್ಲಿಯೂ ಅಧಿಕನಾಗಲಾಗಿ,
ಆ ಕುಲೀನ ಜ್ಞಾನವಂತನಲ್ಲಿ ಸಮರಸ ಸಲ್ಲದು ನೋಡಾ,
ಗುರುವೆ.

ಶಿವಶಕ್ತಿಯೆ ಸತ್ಕುಲ, ಶಿವಧ್ಯಾನವೆ ಸತ್ಕುಲ,
ಶಿವಪೂಜೆಯ ಸತ್ಕುಲ ನೋಡಾ ಗುರುವೆ.
ಶಿವಕಥಾವರ್ಣನವೆ ಸತ್ಕುಲ, ಶಿವಗೋಷ್ಠಿಯೆ ಸತ್ಕುಲ ನೋಡಾ ಗುರುವೆ,
ಕಪಿಲಸಿದ್ಧಮಲ್ಲಿಕಾರ್ಜುನ ಗುರುವೆ. ॥ ೭೬೬ ॥

೧೯೪೪

ಆಕಾರದ ಮೂರ್ತಿ ವರ್ಣಿಸಿಹೆನೆಂದಡೆ ತೀರದು.
ನಿರಾಕಾರದ ಮೂರ್ತಿ ವರ್ಣಿಸಿಹೆನೆಂದಡೆ ಮೊದಲಿಗೆ ತೀರದು.
ತೀರದು ಎಂದು ಶಬ್ದಮುಗ್ಧವಾಗಿರಬಾರದು, ಬಾರದು;
ಕಪಿಲಸಿದ್ಧಮಲ್ಲಿಕಾರ್ಜುನ ಎನ್ನಬಹುದು ಎನ್ನಬಹುದು ಮನವೆ.
॥ ೭೬೭ ॥

೧೯೪೫

ಅಕ್ಷರತ್ರಯದ ಗುಂಡಿನಲ್ಲಿ
ಸಕಲಾಕ್ಷರ ಮೂರ್ತಿ ಮನೆಯ ಮಾಡಿಕೊಂಡಿದೆ.
ಅಕ್ಷರವರಿಯಬಾರದು;
ಅರಿದ ಬಳಿಕ ಜನನ ಮರೆಯಬಾರದು;
ಮರೆದ ಬಳಿಕ ಅಕ್ಷರದ ಧ್ಯಾನ ನೆಲೆಗೊಳಿಸಬಾರದು ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೭೬೮ ॥

೧೯೪೬

ಸಾಂಬನಾಗಲಿ, ಶಿವನೆ ತಾನಾಗಲಿ,
ಪಂಚಭೌತಿಕಕ್ಕೆ ಬಂದ ಬಳಿಕ ಕೇಡೆಂಬುದು ನಿಶ್ಚಯ.
ಭೌತಿಕದಲ್ಲಿ ಕೇಡು ನಿಶ್ಚಯವಲ್ಲದೆ, ಮಹಾ ಅರುಹಿನಲ್ಲಿ ಕೇಡಿಲ್ಲ.
'ತತ್ತ್ವಾತ್ಮಕಂ ವಪುರ್ದೇವಿ ನಾಶಾರ್ಥಂ ಕಾರಣಂ ದೃಢಂ'
ಎಂಬುದು ಪುಸಿಯಲ್ಲ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೭೬೯ ॥

೧೯೪೭

ಅಲಿಂಗಿಗಳ ಸಂಗ ಸಲ್ಲದೆಂದಡೆ,
ಉದರದಲ್ಲಿಹ ಲಿಂಗ ಲಿಂಗವಲ್ಲವೆ, ಲಿಂಗಯ್ಯಾ?

ಅಲಿಂಗಿಗಳ ಭೋಜನ ಸಲ್ಲದೆಂದಡೆ,
ಪಶು ಪೃಥ್ವಿಗಳು ಅಂಗವಲ್ಲವೆ, ಲಿಂಗಯ್ಯಾ?
'ಲಿಂಗಮಧ್ಯೇ ಜಗತ್ ಸರ್ವಂ' ಎಂದ ಬಳಿಕ ಲಿಂಗವಲ್ಲವೆ,
ಕಪಿಲಸಿದ್ಧಮಲ್ಲಿಕಾರ್ಜುನ ಲಿಂಗಯ್ಯಾ? ॥ ೭೭೦ ॥

೧೯೪೮

ಮೇಲುಮಾಡಿದ ನುಡಿಯಂತೆ ನಡೆಯಬೇಹಡೆ,
ಮೃಡಭಾವವಡಗಿರಬೇಕು.
ಪ್ರಾಣದಲ್ಲಿ ಅಡಗಿದ ಭಾವ[ವ] ನಡಹಿಕೊಳಬೇಕಾದಡೆ,
ದೃಢಲಿಂಗಮೂರ್ತಿಯ ಧರಿಸಬಹುದೆ ದೇಹದಲ್ಲಿ?
ಅರಿದು ಧರಿಸದೆ, ಧರಿಸಿ ಅರಿಯದೆ ಇದ್ದವನ ಭಾವ
ಬಯಲಲ್ಲಿಹ ದೀಪದಂತೆ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೭೭೧ ॥

೧೯೪೯

ವಸ್ತು ನಿರಾಕಾರವೆಂದಡೆ ಆಕಾರಕ್ಕೆ ಬರುವುದೆ?
ವಸ್ತು ನಿರ್ವಿಕಾರವೆಂದಡೆ ವಿಕಾರಕ್ಕೆ ಬರುವುದೆ?
ವಸ್ತು ಉಭಯವೆಂದಡೆ ಉಭಯ ಸಂದೇಹತ್ವದಿಂಬಳಿವುದೆ?
ವಸ್ತುವಿನ ವ್ಯವಹಾರ ಆರಿಗೂ ಅರಿಯಬಾರದು.
ಕಪಿಲಸಿದ್ಧಮಲ್ಲಿಕಾರ್ಜುನಲಿಂಗ ಉಭಯಾತೀತ ನೋಡಾ,
ಪ್ರಭುವೆ.॥ ೭೭೨ ॥

೧೯೫೦

ತೋರುವ ಜಗತ್ತು ಬ್ರಹ್ಮವೆಂದೊಮ್ಮೆ ವಾದಿಸುವೆ.
ತೋರುವ ಜಗತ್ತು ಮಾಯೆಯೆಂದೊಮ್ಮೆ ವಾದಿಸುವೆ.
ತೋರಿಯಡಗಿದಲ್ಲಿ ಮಾಯೆ ಎನಿಸಿತ್ತು;
ತೋರಿ ತೋರಿದಲ್ಲಿ ಬ್ರಹ್ಮವೆನಿಸಿತ್ತು.
ತೋರಿದಲ್ಲಿ ತೋರಿ ಕೆಡದಲ್ಲಿ ಏನೆಂದೆನಿಸದು ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೭೭೩ ॥

೧೯೫೧

ನಿರ್ಗುಣ ಮಹಾದೇವನೆಂದ ಬಳಿಕ ಗುಣಹೀನನಲ್ಲವೆ?
ಸಗುಣನವನು ತನ್ನರಿವಿಗೆ;

ನಿರ್ಗುಣನವನು ಜಗಜ್ಜೀವಿಗಳಿಗೆ.
ಅರಿದಡೆ ನಿರ್ಗುಣನಲ್ಲ, ಸಗುಣ ಗುಣಾಗ್ರಗಣ್ಯ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೭೭೪ ॥

೧೯೫೨

ಕನಕ ಒಂದರಲ್ಲಿ ಕಡಗ ಕಂಠಿಯಾದಂತೆ,
ಶಕುನವೊಂದರಲ್ಲಿ ಶಕುನ ಬೇರಾದಂತೆ,
ಘನಕೆ ಘನವಾದ ಪರವಸ್ತುವಿನಲ್ಲಿ ಜನನವಾಯಿತ್ತು
ಮೂಲೋಕದ, ಮಹಾಲಿಂಗ ಕಪಿಲಸಿದ್ಧಮಲ್ಲಿಕಾರ್ಜುನಾ.
॥ ೭೭೫ ॥

೧೬೫೩

ಮೃತ್ತಿಕೆಯೊಂದರಲ್ಲಿ ಮಡಕೆಗಳು ನೂರಾರು.
ಮನವೊಂದರಲ್ಲಿ ಕ್ರಿಯಾದಿಗಳು ನೂರಾರು.
ಜನಕನೊಬ್ಬನಲ್ಲಿ ಸಂತತಿಗಳು ನೂರಾರು.
ಘನಕ್ಕೆ ಘನವಾದ ಚಿನ್ಮಯ ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ
ಜಗತ್ತುಗಳು ನೂರಾರು. ॥ ೭೭೬ ॥

೧೯೫೪

‘ಸರ್ವಂ ಖಲ್ವಿದಂ ಬ್ರಹ್ಮ’ ಎಂಬುದ ಅರಿದ ಬಳಿಕ,
ಲಿಂಗದಲ್ಲಿ ಶಿಲೆಯ ಭಾವವನರಸಲುಂಟೆ?
‘ಸರ್ವಂ ಖಲ್ವಿದಂ ಬ್ರಹ್ಮ’ ಎಂದರಿದ ಬಳಿಕ,
ಗುರುವಿನಲ್ಲಿ ನರನ ಭಾವವನರಸಲುಂಟೆ?
‘ಸರ್ವಂ ಖಲ್ವಿದಂ ಬ್ರಹ್ಮ’ ಎಂದರಿದ ಬಳಿಕ
ಮಾಯಾಮಯ ಸಂಸಾರವೆಂದರಸಲುಂಟೆ?
‘ಸರ್ವಂ ಖಲ್ವಿದಂ ಬ್ರಹ್ಮ’ ಎಂದರಿದ ಬಳಿಕ,
ನಾನು ಜೀವಿ, ನಾನು ಜಡ, ನಾನು ಬದ್ಧನೆಂದರಸಲುಂಟೆ?
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೭೭೭ ॥

೧೯೫೫

ಅರಿದಾಚರಿಸುವವನಾಚರಣೆ ಬ್ರಹ್ಮಮಯ.
ಅರಿಯದವನಾಚರಣೆ ಮಾಯಾಮಯ.

ಅರಿಯಬೇಕು, ಅರಿಯಬೇಕು ಗುರುಮುಖದಿಂದ.
ಆರು ಪರಶಿವನೆಂಬುದನರಿಯದವನರಿವು,
ಸ್ವಪ್ನದಲ್ಲಿಯ ರತಿಯಂತೆ, ರತಿಯಲ್ಲಿಯ ರಾಜಸುತನಂತೆ
ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೭೭೮ ॥

೧೯೫೬

ಲೋಕದಲ್ಲಿಹ ನೂರಾರು ಗುರುಗಳ ನೋಡಿ ನೋಡಿ
ನಾನು ಬೇಸರುಗೊಂಡೆನಯ್ಯಾ.
ವಿತ್ತಾಪಹಾರಿ ಗುರುಗಳು ನೂರಾರು;
ಶಾಸ್ತ್ರಾರ್ಥ ಹೇಳುವ ಗುರುಗಳು ನೂರಾರು;
ಮಂತ್ರತಂತ್ರದಿಂದುಭಯ ಲೋಕದಲ್ಲಿ
ಸುಖದುಃಖವೀವ ಗುರುಗಳು ನೂರಾರು;
ಸತ್ಕರ್ಮೋಪದೇಶವನರುಹಿ
ಸ್ವರ್ಗಮರ್ತ್ಯದಲ್ಲಿ ಸುಖವೀವ ಗುರುಗಳು ನೂರಾರು;
ವಿಚಾರಮುಖದಿಂದ ಷಟ್ಸಾಧನೆಯನರುಹುವ ಗುರುಗಳು
ನೂರಾರು.
ವಿಷಯಂಗಳೆಲ್ಲ ಮಿಥ್ಯಂಗಳೆಂದರುಹಿ
ಆತ್ಮಾನುರಾಗತ್ವವನೀವ ಗುರುಗಳು ನೂರಾರು;
ಶಿವಜೀವರ ಏಕತ್ವವನರುಹಿ
ನಿರ್ಮಲಜ್ಞಾನವೀವ ಗುರುಗಳು ಪ್ರಮಥರು.
ಸಂಶಯಾಳಿಗಳನೆಲ್ಲ ಜ್ಞಾನಾಗ್ನಿಯಿಂದ ದಹಿಸಿ
ಮುಕ್ತಿಯ ಹಂಗೆಂಬುದ ಅರುಹಿನ ಬಂಧದಲ್ಲಿರಿಸಿದ ಗುರು
ಚೆನ್ನಬಸವಣ್ಣನಲ್ಲದೆ ಮತ್ತೊರ್ವನ ಕಾಣೆ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೭೭೯ ॥

೧೯೫೭

ನಿರಾಕಾರ ಪರವಸ್ತು ತಾನೆಂದರಿದಡೆಯು
ಕಿರಿದಾಗಿ ನುಡಿಯಲೆಬೇಕು, ಗುರುದೇವಾ.
ಜಡದೇಹಿ ನಾನೆಂಬರುಹು ಉಳ್ಳವಂಗಾದಡೆಯು ಅರುಹಿಕೊಡಲೆ
ಬೇಕು,

ಸಜ್ಜನರವರು ಗುರುದೇವಾ,
ಮಹಾಮಹಿಮ ಕಪಿಲಸಿದ್ಧಮಲ್ಲಿಕಾರ್ಜುನದೇವಾ. ॥ ೭೮೦ ॥

೧೯೫೮

ಆನು ಆರೆಂಬುವುದಕ್ಕೆ ಅಷ್ಟ ಪ್ರಮಾಣಂಗಳಂತಿರಲಿ, ದೇವಾ.
ಆರು ಆರೆಂಬುವುದಕ್ಕೆ ಪ್ರತ್ಯಕ್ಷ ಪ್ರಮಾಣದಿಂದರಿಯಬೇಹುದು ದೇವಾ.
ಅವಸ್ಥೆ ಮೂರರ ತೂರ್ಯ ತಿಳಿಯಿತ್ತು;
ತೂರ್ಯವೆರಡರ ಚಿನ್ಮಯಮೂರ್ತಿ ಅರಿಯಿತ್ತು, ದೇವಾ.
ಆನು ಆರೆಂದೆನಲುಬಾರದು ಘನಗುರು ಚೆನ್ನಬಸವನರುಹಿದ ಬಳಿಕ,
ಕಪಿಲಸಿದ್ಧಮಲ್ಲಿಕಾರ್ಜುನದೇವಾ. ॥ ೭೮೧ ॥

೧೯೫೯

ಮಾಡುವ ಕ್ರಿಯಾಕ್ರಿಯೆಗಳು ಸುಖದುಃಖಗಳಿಗಲ್ಲದೆ,
ಭವವೀಡಾಡವು; ಮೃಡನ ಪದ ದೊರೆಯದು ನೋಡಾ.
ಮಾಡುವ ಕ್ರಿಯೆ ಮನೋಧರ್ಮ, ಮಾಡದ ಕ್ರಿಯೆ ಚಿತ್ತಿನ ಧೈರ್ಯ,
ತಾನರಿದ ಮನೋತೀತ ಮಾಡುವನಲ್ಲ,
ಇದ್ದು ಬಿಡುವನಲ್ಲ, ಬಿಟ್ಟು ಭವಭಾರಿಯಲ್ಲ,
ಕಪಿಲಸಿದ್ಧಮಲ್ಲಿಕಾರ್ಜುನ ಗುರುವೆ. ॥ ೭೮೨ ॥

೧೯೬೦

ಆಗದಯ್ಯಾ, ಆಗದಯ್ಯಾ ಇಲ್ಲದವಂಗೆ;
ಆಗದಯ್ಯಾ ಅಲ್ಲದವಂಗೆ;
ಆಗದಯ್ಯಾ ಇಲ್ಲದವಂಗೆ,
ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ. ॥ ೭೮೩ ॥

೧೯೬೧

ಆಗದು ಆಗದು, ಕಾಯದ ಗುಣವಳಿಯದವಂಗೆ ಜೀವನ್ಮುಕ್ತಿ.
ಆಗಬೇಕು ಇದಿರಿಟ್ಟು, ಆಗಬೇಕು ಪಶ್ಚಾತ್ತಾಪ.

ಆಗದೆ ಆದೆನೆಂಬ ಮನುಜನ ಅರಿವು
ಶ್ವಾನನರಿವು ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.॥ ೭೮೪ ॥

೧೯೬೨

ಇಲ್ಲದ ಮಾಯೆಯ ಇಲ್ಲೆನಿಸುವುದದೆ ಅಲ್ಲನ ಅರುಹು
ಕಂಡಯ್ಯಾ.
ಇಲ್ಲದ ಮಾಯೆ ಅಹುದೊ ಅಲ್ಲವೊ ಎಂಬುಭಯ ಭಾವ
ಜಲ್ಲರಿಯ ಕಳಂಕು ಕಂಡಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ. ॥ ೭೮೫ ॥

೧೯೬೩

ಅರುಹಿನ ಆಚರಣೆಯಿಂದು ಕುರುಹಿನ ಕರುಮಾಡ ನೋಡಾ,
ಲಿಂಗಯ್ಯಾ.
'ಕ್ರಿಯಾಽಪಿ ಜ್ಞಾನೇನ ವರ್ತತೇ' ಎಂದ ಬಳಿಕ,
ಅರುಹು ಬೇಕು ಆಚರಣೆಯಲ್ಲಿ, ಮರಹು ಬೇಕು
ವಿಷಯಂಗಳಲ್ಲಿ.
ಈ ಅರುಹಿನ ಮರವೆಯ ಶರಣನ ಕಂಡು ಕಣ್ದೆರಹುವ
ಕಪಿಲಸಿದ್ಧಮಲ್ಲಿಕಾರ್ಜುನನು. ॥ ೭೮೬ ॥

೧೯೬೪

ತಾನು ಪ್ರಪಂಚಿಕನಾಗಿ ಪರಮಾರ್ಥವ
ಪಡೆಯಬೇಕೆಂಬಾಶೆಯುಳ್ಳಡೆ,
ಪರಧನ ಪರಸ್ತ್ರೀಯರ ಪಿವರ್ಜಿಸಿ ಪೂಜಿಸುವ ಪರಶಿವನ.
ತಾನು ಪ್ರಪಂಚಿಯಾಗಿ ಕೀರ್ತಿಯ ಪಡೆಯಬೇಕೆಂಬಾಶೆಯುಳ್ಳಡೆ,
ಜೀವದಯಾಪರತ್ವ, ಮೃಷಾಭಾಷಾನಿರಾಕರಣತ್ವ,
ಯಾಚಕರೊಳ್ತಾತೃತ್ವವ ಮಾಡಿ [ಪೂಜಿಸುವ] ನೋಡಾ
ಪರಶಿವನ.
ಇದೆ ಅಂತರಂಗದ ಪಿಚಾರ, ಇದೆ ಬಹಿರಂಗದಲ್ಲಿ ಭೂಷಣ.
ಇದೆ ಕಪಿಲಸಿದ್ಧಮಲ್ಲಿಕಾರ್ಜುನನೆಂಬ ಮಹಾಬೊಮ್ಮ ತಾನು,
ಕಂಡೆಯಾ ಬೊಮ್ಮಯ್ಯಾ. ॥ ೭೮೭ ॥

೧೯೬೫

ಕರದಲ್ಲಿಯ ಅರುಹು ಕರಕರಿಸಿ ಬೆರಸಿದಂತಾದಡೆ,
ಕರಕಂಜದ ಪರವಸ್ತು ತಾನೆ ನೋಡಾ.
ಕರದಲ್ಲಿಯ ಅರುಹು ಕರದಂತಾಗಬಾರದಯ್ಯಾ.
'ಕರಾಭ್ಯಾಂ ರಹಿತಸ್ಯ ಕುತಃ ಕರ್ಮ ಕುತ ಆನಂದಃ।'
ಎಂಬುದು ಪ್ರಸಿದ್ಧ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.
|| ೭೮೮ ||

೧೯೬೬

ಹರಿ ನಾನೆಂದಲ್ಲಿ ಭವಮದಗಜಕ್ಕೆ ಹರಿಯಲ್ಲದೆ,
ದಶಾವತಾರದ ಹರಿಯಲ್ಲ ನೋಡಾ.
ಹರ ನಾನೆಂದಲ್ಲಿ ಸರ್ವಭಾವನಾವಿರಹಿತ ನಾನಲ್ಲದೆ,
ಪಂಚಕೃತ್ಯಾಧಿಕಾರಿ ಹರನಲ್ಲ ನೋಡಾ.
ನರ ನಾನೆಂದಲ್ಲಿ ಉತ್ಪತ್ತಿವಿರಹಿತ ನಾನಲ್ಲದೆ,
ಉತ್ಪತ್ತ್ಯಧಿಕಾರಿ ನರ ನಾನಲ್ಲ ನೋಡಾ.
ತೋರುವ ಸಚರಾಚರ ನಾನೆಂದಲ್ಲಿ ಜಡಾಜಡ ನಾನಲ್ಲದೆ,
ಜನನ ಮರಣ ಪೊದ್ದಿದ ಸಚರಾಚರ ನಾನಲ್ಲ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. || ೭೮೯ ||

೧೯೬೭

ಸ್ವರ್ಗವೆಂದಡೆ ಸುಖಕ್ಕೆ ನಾಮ, ನರಕವೆಂದಡೆ ಬಾಧೆಗೆ ನಾಮ.
ಸುಖವೆಂದಡೆ ಪುಣ್ಯ ನೋವೆಂದಡೆ ದುಃಖ.
ಸುಖವಿಯೋಗವಾದಲ್ಲಿ ದುಃಖವೆನಿಸಿತ್ತು,
ದುಃಖವಿಯೋಗವಾದಲ್ಲಿ ಸುಖವೆನಿಸಿತ್ತು.
ಸುಖಾಸುಖವೆಂದರಿಯಬಾರದು,
ಮೊದಲ ಹಿಡಿದ ಸಂಗತಿಯಿಂದ;
ಸುಖಸಂಗದಿಂದ ದುಃಖ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. || ೭೯೦ ||

೧೯೬೮

ಸುಖಕ್ಕೆ ದೈವವೆಂದು, ಸುಖಕ್ಕೆ ವಿಧಿಲಿಪಿಯೆಂದು,
ಸುಖಕ್ಕೆ ಪುಣ್ಯವೆಂದು, ಸುಖಕ್ಕೆ ಪ್ರಾರಬ್ಧವೆಂದು,
ನುಡಿವರಯ್ಯಾ ಸಿದ್ಧಾಂತಿಗಳು.
ಸುಖವೆ ದೈವವೆನಲಾಗಿ ಮಾಡುವ ಕ್ರಿಯೆಯಲ್ಲರಿಯಬಂದಿತ್ತು.
ಸುಖವು ದೈವವಲ್ಲ;
ದೈವವದು ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ ಕೂಡುವ ಕೂಟವು.
॥ ೭೯೧ ॥

೧೯೬೯

ಹುಟ್ಟಿದ ಮಗನ ರಚನೆ ಹುಟ್ಟಲಿಕ್ಕೆ ಯೋಗ್ಯವಾದಂತೆ
ಹುಟ್ಟಿದ ಮಾಯೆ ಬೆಟ್ಟಜನ ಅರಿವ ಪರಿಯಂತೆ
ನೀನಿಪ್ಪೆ ಜೀವಭಾವದಲ್ಲಿ, ಕಪಿಲಸಿದ್ಧಮಲ್ಲಿಕಾರ್ಜುನಾ.॥ ೭೯೨ ॥

೧೯೭೦

ಬಸವನವ ಎರಡನೆಯ ಶಂಭುವೆನ್ನುವರು.
ನಾವು ಮೂರನೆಯ ಶಂಭುವೇನಯ್ಯಾ?
ತನ್ನ ತಾ ತಿಳಿದಲ್ಲಿ ಎರಡನೆಯ ಶಂಭುವೆನಿಸಿದ:
ತನ್ನ ತಾ ಮರೆದಲ್ಲಿ ಮಹೀತಳದ ಮಾನವನೆನಿಸಿದ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೭೯೩ ॥

೧೯೭೧

ತಿಳಿದೆ ನಾ ತಿಳಿದೆ ನಾ ಎಂದು ಹಲಬರು ಹೋದರು
ಅಹಂಕಾರದಲ್ಲಿ.
[ತಿಳಿಯೆ ನಾ] ತಿಳಿಯೆ ನಾ ಎಂದು ಹಲಬರು ಹೋದರು
ಮರವೆಯಲ್ಲಿ.
ತಿಳಿದೆನೆಂಬುದು ತಿಳಿಯೆನೆಂಬುದು ಜ್ಞಾನದ ಮೈದೊಡಕು.
ತಿಳಿಯೆ ಅರಿವು ಮರವೆಯೆಂಬುಭಯವ ತಿಳಿದು ತಿಳಿಯದಂತಿರೆ,
ತಿಳಿನೀರ ನಳಿನಾಕ್ಷನುತ ಕಪಿಲಸಿದ್ಧಮಲ್ಲಿಕಾರ್ಜುನ ತಾನೆ.
॥ ೭೯೪ ॥

೧೯೭೨

ಚರಿಸುವ ಚರನಿಗೆ ಚರ್ಚೆಯೆ ಭೂಷಣ.
ಸುಂದರ ನಾರಿಗೆ ಗಂಭೀರ ಪುರುಷನೆ ಭೂಷಣ.
ಕೊಳನಲ್ಲಿಯ ನೀರಿಗೆ ಕಲಹಂಸೆಯೆ ಭೂಷಣ.
ವನದಲ್ಲಿಯ ವಸಂತಕ್ಕೆ ಕೋಕಿಲನಾದವೆ ಭೂಷಣ.
ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನ ಶರಣರಿಗೆ
ನಿರ್ಮಲ ನಿಜಾನಂದವೆ ಭೂಷಣ. ॥ ೭೯೫ ॥

೧೯೭೩

ಕಲ್ಲಿನಲ್ಲಿ ವಲ್ಲಭನಿದ್ದಾನೆಂದು ಅಲ್ಲಾಡುತ್ತಾರೆ ನೋಡಾ,
ಅಲ್ಲಯ್ಯಾ, ಈ ಖುಲ್ಲಮನುಜರು.
ಕಲ್ಲಿನಲ್ಲಿ ವಲ್ಲಭನ ಕಂಡೆವೆಂದು ಬಡಿದಾಡುತ್ತಾರೆ ನೋಡಾ,
ಅಲ್ಲಯ್ಯಾ, ಈ ಹೊಲ್ಲಮನುಜರು.
ಕಲ್ಲಿನಲ್ಲುಂಟು, ಮಣ್ಣಿನಲ್ಲಿಲ್ಲವೆಂದೆಂಬಡೆ,
ಅಂತರ್ಯಾಮಿ ಪರಿಪೂರ್ಣತ್ವ ಭಂಗವಹುದಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ. ॥ ೭೯೬ ॥

೧೯೭೪

ಚರಿಸುವ ಜನರೆಲ್ಲ ದೇವರಲ್ಲ;
ಚರಿಸಿ ಚರಿಸಿ ಭ್ರಮೆಗೊಂಡರು ಮತ್ತೆ ದೇವರು ದೇವರು
ಎಂದು, ನೋಡಾ.
ಚರಿಸುವ ಜನರು ದೇವರು, ಚರಿಸದ ವಸ್ತು ದೇವರು,
ನಾ ನೀನೆಂಬುಭಯ ದೇವರು,
ಕಪಿಲಸಿದ್ಧಮಲ್ಲಿಕಾರ್ಜುನದೇವರು ದೇವರು. ॥ ೭೯೭ ॥

೧೯೭೫

ಆಗದಾಗದು ಮಾಡದವಂಗೆ ಬ್ರಹ್ಮಪದವಿ.
ಆಗದಾಗದು ಮಾಡದವಂಗೆ ವಿಷ್ಣುಪದವಿ.
ಆಗದಾಗದು ಮಾಡದವಂಗೆ ಶಿವಪದವಿ.
ಆಗದು ಮಾಡದವಂಗೆ ತೂರ್ಯಾತೀತ ನಿರ್ಮಲ ನಿಜಾನಂದ,
ಕಪಿಲಸಿದ್ಧಮಲ್ಲಿಕಾರ್ಜುನನ ಅರಿವು. ॥ ೭೯೮ ॥

೧೯೭೬

ಮಾಡಬೇಕು, ಮಾಡಬೇಕು, ಮಹಾನುಭಾವರ ಸಂಗವ
ನೋಡಬೇಕು ನೋಡಬೇಕು, ಸಿದ್ಧಾಂತವೇದಾಂತಂಗಳ.
ಹಾಡಬೇಕು ಹಾಡಬೇಕು, ಪರಶಿವಲಿಂಗವ.
ಕೂಡಬೇಕು ಕೂಡಬೇಕು, ಕಪಿಲಸಿದ್ಧಮಲ್ಲಿಕಾರ್ಜುನ ಲಿಂಗವ.
॥ ೭೯೯ ॥

೧೯೭೭

ನನ್ನಿಚ್ಛೆ ತನ್ನ ತಂದೀತೆಂದರಿಯೆ;
ಆತನಿಚ್ಛೆಯಿಂದ ನಾ ಬಂದೆನೆಂಬುದ ಅರಿಯೆ.
ನನ್ನಿಚ್ಛೆಯಾಗಲಿ, ಶಿವನಿಚ್ಛೆಯಾಗಲಿ, ಬಂದುದು ನೀ ನಾನೆಂದೆ.
ಇದಕ್ಕೆ ಇನ್ನು ಬರಬಾರದ ಚೆನ್ನ ಮಾರ್ಗ ತೋರಾ,
ಚೆನ್ನಬಸವ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೮೦೦ ॥

೧೯೭೮

ಪರತರವ ಸಾಧಿಸುವಡೆ ಪ್ರಪಂಚದ ವಿಷಯ ಅಳಿದಿರಬೇಕು.
ರಾಜ್ಯವ ಸಾಧಿಸುವಡೆ ಪ್ರಾಣದಾಸೆಯ ಮರೆದಿರಬೇಕು.
ವಿದ್ಯೆಯ ಸಾಧಿಸುವಡೆ ಅನ್ಯ ಆಸೆಯ ಮರೆದಿರಬೇಕು.
ಕಪಿಲಸಿದ್ಧಮಲ್ಲಿಕಾರ್ಜುನನ ಕೂಡುವಡೆ
ಸಂಶಯವಳಿದು ನಿಶ್ಚಿಂತನಾಗಬೇಕು. ॥ ೮೦೧ ॥

೧೯೭೯

ಬಡವರ ಭೋಜನ ಭೋಗಿಸಿದವ ಭವಾನೀಪುತ್ರ ನೋಡಯ್ಯಾ.
ಕಡವರನ ಎಡೆಗೊಂಡವ ವಿಷ್ಣುವಿನ ವಂಶವವ ನೋಡಯ್ಯಾ.
ಬಡವರ ಭೋಜನ ಅಮೃತ ಸೇವನೆ;
ಕಡವರನಮೃತ ಸುರಾಪಾನ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೮೦೨ ॥

೧೯೮೦

ಅಂತರ್ಲಿಂಗ ಬಾಯಿ ತೆರೆದ ಬಳಿಕ
ಬಹಿರ್ಲಿಂಗದ ಪೂಜೆ ತೋಟದ ಮಾಳಿಯಂತೆ.

ಅಂತರ್ಲಿಂಗ ಬಹಿರ್ಲಿಂಗ ಬೇರಾದ ಬಳಿಕ
ಕಪಿಲಸಿದ್ಧಮಲ್ಲಿಕಾರ್ಜುನ ಒಲಿಯನಂತೆ! ॥ ೮೦೩ ॥

೧೯೮೧

ಹಸಿವುದೋರದ ಮುನ್ನ, ತೃಷೆದೋರದ ಮುನ್ನ,
ವ್ಯಾಧಿವಿಪತ್ತುಗಳು ಬಂದಡಸದ ಮುನ್ನ,
ಕಪಿಲಸಿದ್ಧಮಲ್ಲಿಕಾರ್ಜುನಲಿಂಗವ ಪೂಜಿಸೋ ಮುನ್ನ ಮುನ್ನ!
॥ ೮೦೪ ॥

೧೯೮೨

ತನ್ನವರೆನ್ನಬಾರದು, ತನ್ನ ಬಂಧುಗಳೆನ್ನಬಾರದು;
ತನಗನ್ಯರೆನ್ನಬಾರದು.
ತಮ್ಮ ತಮ್ಮ ಮನಕ್ಕೆ ಮನವೆ ಸಾಕ್ಷಿ;
ಮನಕ್ಕೆ ಮಹಾದೇವ ಕಪಿಲಸಿದ್ಧಮಲ್ಲಿಕಾರ್ಜುನನೆ ಸಾಕ್ಷಿ,
ಬಿಲ್ಲೇಶಯ್ಯಾ. ॥ ೮೦೫ ॥

೧೯೮೩

ನ್ಯಾಯಿ ತಾನಾದಡೆ ಅನ್ಯಾಯ ಮಾಡಬಾರದು;
ಲಿಂಗ ತಾನಾದಡೆ ಅಂಗಿ ತಾನಾಗಬಾರದು;
ಭೋಗಿ ತಾನಾದಡೆ ತಾ ಯೋಗಿಯಾಗಬಾರದು,
ಕಪಿಲಸಿದ್ಧಮಲ್ಲಿರ್ಜುನಾ. ॥ ೮೦೬ ॥

೧೯೮೪

ಮಾಡದವನ ಹೆಸರು ಮಣ್ಣಿನಲ್ಲಿ;
ಮಣ್ಣು ಮಾಡಿದವನ ಹೆಸರು ಮೂಲೋಕದಲ್ಲಿ.
ಮಾಡಿದನೆಂಬುದು ಮನದ ಗುಣ;
ಮಾಡಿದವನವನೆಂಬುದು, ಮಹಾದೇವ
ಕಪಿಲಸಿದ್ಧಮಲ್ಲಿಕಾರ್ಜುನನ ಕೂಡುವ ಗುಣ,
ಮಡಿವಾಳಯ್ಯ ಸಾಕ್ಷಿಯಾಗಿ. ॥ ೮೦೭ ॥

೧೯೮೫

ಎನ್ನ ಮಸ್ತಕದಲ್ಲಿ ಹಕಾರವಾಗಿದ್ದಾತ ಪ್ರಭುದೇವ.
ಎನ್ನ ಲಲಾಟದಲ್ಲಿ ಓಂಕಾರವಾಗಿದ್ದಾತ ಚೆನ್ನಬಸವ.
ಎನ್ನ ಘ್ರಾಣದಲ್ಲಿ ನಕಾರವಾಗಿದ್ದಾತ ಮಡಿವಾಳಯ್ಯ.
ಎನ್ನ ಬಾಯಿಯಲ್ಲಿ ಮಕಾರವಾಗಿದ್ದಾತ ಮರುಳು ಶಂಕರಯ್ಯ.
ಎನ್ನ ನೇತ್ರದಲ್ಲಿ ಶಿಕಾರವಾಗಿದ್ದಾತ ಬಸವ.
ಎನ್ನ ಕಪೋಲದಲ್ಲಿ ವಕಾರವಾಗಿದ್ದಾತ ಪಡಿಹಾರಿ ಬಸವಯ್ಯ.
ಎನ್ನ ಶ್ರೋತ್ರದಲ್ಲಿ ಯಕಾರವಾಗಿದ್ದಾತ ಹಡಪದಪ್ಪಣ್ಣ.
ಎನ್ನ ಜಿಹ್ವೆಯಲ್ಲಿ ಹ್ರೀಂಕಾರವಾಗಿದ್ದಾಕೆ ಅಕ್ಕನಾಗಮ್ಮ.
ಎನ್ನ ಸರ್ವಾಂಗದಲ್ಲಿ ಸಕಲ ಪ್ರಣವರೂಪಾಗಿದ್ದಾತ
ಗುರುವಿನ ಗುರು ಚೆನ್ನಬಸವನ ಪಾದಕ್ಕೆ ನಮೋ ನಮೋ
ಎಂಬೆನಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ. ॥ ೮೦೮ ॥

೧೯೮೬

ಎಲ್ಲರ ಮರೆಯಬಹುದು;
ಎನ್ನ ವಲ್ಲಭ ಗುರುಮೂರ್ತಿಯ ಮರೆಯಬಾರದು.
ಎಲ್ಲರ ಕೀರ್ತಿಸಬಹುದು;
ಎನ್ನ ಗುರುಮೂರ್ತಿಯ ಕೀರ್ತಿಸಬಾರದು.
ಎಲ್ಲರು ಹೋಗಲಾಡಿದರೆಂದು ಎನ್ನ ನಲ್ಲನು ಹೋಗಲಾಡನು,
ನೀ ಹೋಗಲಾಡೆನೆ, ಕಪಿಲಸಿದ್ಧಮಲ್ಲಿಕಾರ್ಜುನಾ,
ನಿಮ್ಮ ಪಾದಸಾಕ್ಷಿಯಾಗಿ. ॥ ೮೦೯ ॥

೧೯೮೭

ಅಂತರಂಗದಲ್ಲಿಹ ಲಿಂಗ ಬಹಿರಂಗದಲ್ಲಿ
ಲಿಂಗವಾಯಿತ್ತೆಂಬುದರಿಯೆ.
ಬಹಿರಂಗದಲ್ಲಿಯ ಲಿಂಗ ಅಂತರಂಗದಲ್ಲಿ
ಲೀಯವಾಗುವ ಕಾರಣವರಿಯೆ.
ಅಂತರಂಗ ಬಹಿರಂಗವೆಂಬೆರಡರ ಸಂಗ
ಕಪಿಲಸಿದ್ಧಮಲ್ಲಿಕಾರ್ಜುನಯ್ಯನೆಂಬುದರಿಯೆ; ಏನೆಂದರಿಯೆ.
॥ ೮೧೦ ॥

೧೯೮೮

ಆಕಾಶದಲ್ಲಿಯ ಮಿಂಚಿನಂತೆ, ಯೋಗಿಲ್ಲಿಯ ಕೋಪದಂತೆ
ವೇಶಿಯಲ್ಲಿಯ ಅನುರಾಗದಂತೆ, ಗಾಳಿಯಲ್ಲಿಯ ದೀಪದಂತೆ,
ಓಗರದಲ್ಲಿಯ ಪ್ರಸಾದದಂತೆ, ಗುರುಮೂರ್ತಿಯಲ್ಲಿಯ
ಪಾದೋದಕದಂತೆ,
ಕಪಿಲಸಿದ್ಧಮಲ್ಲಿಕಾರ್ಜುನನ ಲೀಲೆಯಂತೆ ಎನ್ನ ಪ್ರಾಣಲಿಂಗದ
ಐಕ್ಯ.

ಅದರಂತೆ ಶಬ್ದಮುಗ್ಧವಾಯಿತ್ತಯ್ಯಾ,
ಶಿವಶಿವಾ, ಶಿವಶಿವಾ, ಶಿವಶಿವಾ, ಶಿವಶಿವಾ, ಶಿವಶಿವಾ.
॥ ೮೧೧ ॥

## ಅನುಬಂಧ

### ಹೆಚ್ಚಿಗೆ ದೊರೆತ ವಚನಗಳು *

೧೯೮೯

ತಾಮಸದಿಂದ ನಿನ್ನ ನೆನವರಿಗೆ
ತಾಮಸದ ಪದವನೀವಿರಯ್ಯ
ಆರೈದು ನಿನ್ನುವನು ಓರಂತೆ ನೆನವರಿಗೆ
ಕಾರುಣ್ಯದಪದವನೀವೆಯಯ್ಯ.
ಅನಾದಿ ಮೂರುತಿ ಕಪಿಲಸಿದ್ಧಮಲ್ಲಿನಾಥಯ್ಯಾ,
ಆರೇನ ಮಾಡಿದುದನಂತೀವೆ. ॥ ೮೧೨ ॥

೧೯೯೦

ದೇಶ ಪರಿಭಾಷೆಯಲ್ಲಿ ಅಸುರದ ಲಾಂಛನ
ದೂಸೆಯಪ್ಪವರೆಲ್ಲರರಿಯಲಹುದೆ?

---

* ಅಕ್ಷರಾಂಕ ಹೆಸರಿನ ತಾಡವೋಲೆ ಪ್ರತಿ ೩೧೦ / ೨ ಚಿತ್ರದುರ್ಗದ ಬೃಹನ್ಮಠದ ಸಂಗ್ರಹದಲ್ಲಿ ದೊರೆತದ್ದು. ಮೇಲಿನ ಆರು ವಚನಗಳನ್ನು ಮೊದಲಿಗೆ ಗುರುತಿಸಿದವರು ಮಿತ್ರರಾದ ಶ್ರೀ ಎಸ್. ಶಿವಣ್ಣನವರು. ಇತ್ತೀಚೆಗೆ ದೊರೆತ ಈ ಅಪ್ರಕಟಿತ ವಚನಗಳನ್ನು ಈ ಸಂಪುಟದಲ್ಲಿ ಬಳಸಿಕೊಳ್ಳಲು ಅನುಮತಿಸಿದ್ದಕ್ಕಾಗಿ ಅವರಿಗೆ ನಮ್ಮ ಧನ್ಯವಾದಗಳು.

ಸರ್ವೇಶ ಕಪಿಲಸಿದ್ಧಮಲ್ಲಿಕಾರ್ಜುನನ ಭಕ್ತಿ
ಭಾಷೆಯಾದಂಗಲ್ಲದರಿಯಲಿಲ್ಲ. || ೮೧೩ ||

೧೬೯೧

ದೀಕ್ಷಾತ್ರಯದಲ್ಲಿ ಸಂಪನ್ನರಾಗಿ,
ಪ್ರಸಾದದಲ್ಲಿ ಲೋಲುಪ್ತರಾಗಿ,
ಜಂಗಮವೆ ಲಿಂಗವೆಂಬವರ ಸಂಗದೊಳಿರಿಸೆನ್ನ
ಕಪಿಲಸಿದ್ಧಮಲ್ಲಿಕಾರ್ಜುನಲಿಂಗ ನಿಮ್ಮ ಧರ್ಮ. || ೮೧೪ ||

೧೬೯೨

ಮಲತ್ರಯವ ‘ತಿಗಳೆದು ಮದಪಿದಾರಣರಪ್ಪವರ ಎನಗೆ ತೋರಾ;
ಶುದ್ಧದಲ್ಲಿ ಪ್ರವೇಶಿಸಿ, ಸಿದ್ಧದಲ್ಲಿ ಪ್ರಕಟಿಸಿ,
ಶುದ್ಧ ಸಿದ್ಧಪ್ರಸಿದ್ಧದಲ್ಲಿ ಪರಿಣಾಮದವರ ಎನಗೆ ತೋರಾ;
ನೆನಹೆ ಮನೆಯಾಗಿ, ಆ ಮನೆಯೆ ತಮಗೆ ಮಾತೆಯಾಗಿ
ಆ ಮಾತೆಯೆ ಮಹಾಬೆಳಗಿನ ಕೂಟವಾಗಿ ಇಪ್ಪವರ ಎನಗೆ
ತೋರಾ.
ಆನಂದಪಿದಾರಣ ಕಪಿಲಸಿದ್ಧಮಲ್ಲಿಕಾರ್ಜುನಾ. || ೮೧೫ ||

# ಕಠಿಣ ಪದಕೋಶ

## ಅ

ಅಂಕುಶ (೧) ಈಟಿ

ಅಂಗ (೬) ಶರೀರ

ಅಂಗಜ (೯೬೮) ಮನ್ಮಥ

ಅಂಗವಿಸು೨;೧೦)ಅಳವಡಿಸು, ಹೊಂದಿಸು, ಬಯಸು, ಇಚ್ಛಿಸು

ಅಂಘ್ರಿ(೧೧) ಪಾದ

ಅಂಘ್ರಿಸಲಿಲ(೧೬೪೬) ಪಾದೋದಕ

ಅಂಜನಗಾರ (೧೪) ಅಂಜನ ಮಾಡುವವ

ಅಂತಕ(೧೬೪೨)ಯಮ

ಅಂತರ್ಯಾಮಿ (೧೬೨೧) ಒಳಗೆ ಸಂಚರಿಸುವವ, ಪರಮಾತ್ಮ

ಅಂತುಸ(೧೭) ರುದ್ರಾಕ್ಷಿಸರ

ಅಂಬಲಿ (೧೨೮೪) ಗಂಜಿ

ಅಂಬು (೧೭೬೨) ನೀರು

ಅಕ್ಷರತ್ರಯ (೨)ತತ್ ತ್ವಂ ಅಸಿ, ತತ್ವಮಸಿ

ಅಕ್ಕುಲಜ (೪೬೬) ಕುಲಜರಲ್ಲದವರು

ಅಕ್ಕೆ (೧೩೫೮) ಸ್ಥಿತಿ

ಅಗಳುವ (೧೬೩೨) ಕೆರೆಯ ಮಣ್ಣನ್ನು ಎತ್ತುವ, ಅಗೆಯುವ

ಅಘವಿಧ್ವಂಸನ (೨೯) ಪಾಪವಿನಾಶನ

ಅಚ್ಚಿಗಬಡು (೨೪೫) ಆಶ್ಚರ್ಯಪಡು

ಅಜಲೋಕ (೩೪) ಬ್ರಹ್ಮಲೋಕ

ಅಜಾಂಡ (೫೬೦) ಬ್ರಹ್ಮಾಂಡ

ಅಜಾತ (೩೪) ಹುಟ್ಟೇ ಇಲ್ಲದವ, ಶಿವ

ಅಟ್ಟು (೪೬) ಬೇಯಿಸು

ಅಟ್ಟುಂಬುದು (೧೫೯೯) ಅಡಿಗೆ ಮಾಡಿ ಊಟಮಾಡುವುದು

ಅಣಲು (೧೦೫೧) ದವಡೆ

ಅತಿಗಳೆ (೨೦೨; ೪೬೦) ಮೀರು; ನಿರಾಕರಿಸು

ಅರ್ಥಿಸು (೬೬೫) ಗಳಿಸು, ಸಂಪಾದಿಸು

ಅನಂಗಹರ (೯) ಮನ್ಮಥನನ್ನು ದಹಿಸಿದವನು, ಶಿವ

ಅನಿಲ (೪೮) ವಾಯು

ಅನು (೨೨) ಕ್ರಮ

ಅಪಥ್ಯ (೯೫೭) ಇಷ್ಟವಾಗದುದು, ಅಹಿತ, ರೋಗಿಗೆ ಹಿತವಾಗದ ಆಹಾರ

ಅಭಿದಾನ (೧೯೩೦) ಹೆಸರು

ಅಯ್ಯ (೧೬) ಹಿರಿಯ, ಗುರು

ಅರತು (೨) ಬತ್ತು, ಒಣಗು

ಅರವಟ್ಟಿಗೆ (೨೮) ಪ್ರಯಾಣಿಕರಿಗೆ ನೀರು ಕೊಡುವ ಕಟ್ಟೆ, ಪ್ರಪಾಶಾಲೆ

ಅರಲು (೧೧೭) ಬತ್ತು, ಒಣಗು

ಅರಳು (೧) ಹೂವು

ಅರಿವು (೨೨) ತಿಳುವಳಿಕೆ, ಜ್ಞಾನ

ಅರುವೆ (೧೬೪೩) ವಸ್ತ್ರ

ಅರುವು (೭೨೯) ತಿಳಿಸು

ಅರುಹು (೧೫೮೪) ಜ್ಞಾನ

ಅವಗ್ರಹಿಸು (೧೭೯) ಆವರಿಸು, ಹಿಡಿ, ಹೊಂದು

ಅವಧಾರು (೩೨೩) ಕೇಳು, ಲಕ್ಷ್ಯಕೊಡು, ಸೈರಿಸು

ಅಶನ (೧೭೭೧) ಅನ್ನ, ಆಹಾರ

ಅಷ್ಟಮಹಾಸಿದ್ಧಿ (೧೪೧೫) ಅಣಿಮಾ, ಗರಿಮಾ, ಲಘಿಮಾ, ಮಹಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ, ವಶಿತ್ವ, ಅಂಜನಾಸಿದ್ಧಿ, ಘಟಿಕಾಸಿದ್ಧಿ, ಶರೀರಸಿದ್ಧಿ, ಪರಕಾಯ ಪ್ರವೇಶ, ತ್ರಿಕಾಲಜ್ಞಾನ, ದೂರಶ್ರವಣ, ದೂರದೃಷ್ಟಿ

ಅಳಹು (೫೦೦) ಉಚ್ಚರಿಸು, ಹೇಳು

ಆಗ್ರವನೆತ್ತಿಸು (೪೭೩) ಅಗ್ರಹಾರಗಳನ್ನು ಹುಟ್ಟುಹಾಕು

ಆದ್ಯರು (೧೫೪) ಪ್ರಮಥರು, ಬಸವಾದಿ ಶಿವಶರಣರು

ಆಧಿಕ್ಯ (೧೦೩) ಹೆಚ್ಚಳ

ಆಬೆ (೪೦೭) ಆಕೆ (?)

ಆಯತ (೨೨)ಮೂಲಸ್ಥಿತಿ, ವಿಸ್ತಾರ

ಆರಯ್ (೧೧೫) ರಕ್ಷಿಸು, ವಿಚಾರಿಸು

ಆರೂಢ (೨೦೮) ಅದ್ವೈತ ಜ್ಞಾನಿ

ಇಕ್ಷು (೧೬೨೬) ಕಬ್ಬು

ಇಚ್ಛೈಸು (೨೮೬) ಬಯಸು, ಅಪೇಕ್ಷಿಸು

ಇಡು (೨೨೫) ಹೊಡೆ

ಇದ್ದೆಸೆ (೧೮೩) ಇರ್+ ದೆಸೆ, ಎರಡು ದಿಕ್ಕು

ಇಹತ್ರ (೨೬೪) ಇಹಲೋಕ

ಈಡು (೭೩೩) ಗುರಿ

ಈಸು (೭೧೮) ಇಷ್ಟು

ಉಗುಮಿಗೆ (೧೧೭೭) ಹೆಚ್ಚಳ, ಆಧಿಕ್ಯ

ಉಡುಗಿ (೧೨೦) ನಂದು

ಉಪಾಧಿ (೧೬೦೯) ಮಾಯೆ

ಉರ (೮) ಎದೆ

ಉರವಣಿಸು (೧೧೩೮) ತ್ವರೆಮಾಡು, ಉತ್ಸಾಹ ತೋರು

ಉರಸು (೧೧೭೧) ಸಹಿಸು

ಉರುತರ (೧೧) ಶ್ರೇಷ್ಠ

ಊಡು (೨೩೩) ಉಣಿಸು

ಎಜ್ಜ (೧೨೩೨) ರಂಧ್ರ, ತೂತು

ಎಬ್ಬಟ್ಟು (೫೬) ಓಡಿಸು, ಎಬ್ಬಿಸಿ ಅಟ್ಟು

ಎರಳೆ (೭೬) ಜಿಂಕೆ

ಎರುಗೆ (೨೨೩) ಬಡಿಸು

ಎರೆಯ (೧೬೩೨) ಒಡೆಯ

ಎಸು (೨೮೪) ಬಾಣ ಪ್ರಯೋಗಿಸು

ಏಡಿಸು (೯,೭೩೭) ಅಣಕಿಸು; ಹಾಸ್ಯಮಾಡು

ಐದಲ್ಕೆ (೨೦೨) ಹೊಂದಲು, ಸಮೀಪಿಸಲು

ಐದು ಬಾಣವನುಳ್ಳವ (೬೮೯) ಮನ್ಮಥ

ಐಸೆ (೪೬೭) ಅಷ್ಟೆ

ಒಕ್ಕಲು ಹೋಗು (೧೪೦೦) ನೆಲೆಸಲು ಹೋಗು

ಒಚ್ಚತಗೊಡು (೩೨) ಅರ್ಪಿಸು, ಕೊಡು

ಒಬ್ಬಿ (೧೯೩೩) ಒಬ್ಬಟ್ಟು (?)

ಓರಂತೆ (೩೮೯) ಒಂದೇ ರೀತಿಯಾಗಿ

ಓಹಿಯ (೧೭) ಓಹಿಲನೆಂಬ ಶಿವಭಕ್ತ

ಕಂಜ (೩೯೨) ಕಮಲ

ಕಂಜಕರ್ಣಿಕೆ (೩೯೨) ಕಮಲದ ಬೀಜಕೋಶ

ಕಂಥೆ (೧೭೬೩) ಚಿಂದಿಬಟ್ಟೆ

ಕಣಜ (೧೬೨೩) ಧಾನ್ಯವನ್ನು ಶೇಖರಿಸಿಡುವ ವ್ಯವಸ್ಥೆ

ಕರ್ಣಾಟ (೧೫೮೧) ಕನ್ನಡ

ಕರ್ತ (೭೦೬) ಒಡೆಯ

ಕಬ್ಬಿಲ (೧೬೩೩) ಬೇಡ

ಕರ (೧೨೬)ಕೈ

ಕರಡಿಗೆ (೧೮೧೬) ಇಷ್ಟಲಿಂಗವನ್ನು ಇಡುವ ಪುಟ್ಟ ಪೆಟ್ಟಿಗೆ

ಕರತಳಾಮಳಕ (೧೨೯೧) ಅಂಗೈ ಮೇಲಣ ನೆಲ್ಲಿಕಾಯಿ

ಕರಂಗಳು (೩೪) ದುಂಬಿ

ಕಲ್ಮುಡಿಗ (೧೫೭೪) ಕಲ್ಲುಕುಟಿಗ

ಕಪಿಲೆ (೪೭)< ಕಪಿಲೆ, ಕಂದುಬಣ್ಣದ ಹಸು

ಕಷ್ಟ (೩೬) ನೀಚ

ಕಾಂಕ್ಷೆ (೫೪೭) ಬಯಕೆ

ಕಾಂಸ್ಯ (೧೦೨೫) ಕಂಚು

ಕಾಕುತನ (೮೩) ವಕ್ರತನ, ಹೀನತನ, ಒರಟುತನ

ಕಾನನ (೨೭) ಕಾಡು

ಕಾರ್ಬೊನ್ (೧೧೮೩) ಕಬ್ಬಿಣ

ಕಾಬ (೭೧೯) ಕಾಣುವ

ಕಾಷ್ಠ (೯೭೮) ಕಟ್ಟಿಗೆ, ಮರ

ಕಾಸಾರ (೧೮೦೦) ಕೊಳ

ಕಾಳಿಗೆವಟ್ಟೆ (೮) ಕಪ್ಪು ವಸ್ತ್ರ

ಕಿಲ್ಬಿಷ (೪೯೨) ಕುಂದು, ದೋಷ, ಪಾಪ, ಮೈಲಿಗೆ

ಕೀಡಿ (೧೫೦೧) ಕೀಟ

ಕೀಳ್ (೧೫೫೯) ಆಕಳ ಕರು, ಬಗ್ಗಿ ಕುಳಿತ

ಕೀಲ (೫೧೫) ರಹಸ್ಯ

ಕೀಳಿಲ (೮೯) ಪಾದರಕ್ಷೆ (?)

ಕ್ರೀ (೪೯೯) ಕ್ರಿಯೆ, ಕಾರ್ಯ

ಕುಂಡಲಿ (೧೫೦೧) ಕಡಜೇರಿಗೆ ಹುಳ

ಕ್ಷುಧೆ (೯೭೨) ಹಸಿವು

ಕುಲ್ಯ (೧೭೨೮) ಹಳ್ಳ

ಕೂಕಂಬಿ (೧೦೭) ಹಡಗಿನ ಧ್ವಜಸ್ತಂಭ

ಕೂರ್ (೨೫೯) ಬಯಸು, ಇಚ್ಛೆಪಡು

ಕೂರಸಿ [illegible]೮) ಹರಿತವಾದ ಕತ್ತಿ

ಕೃಷೀವ[illegible] (೧೫೪) ರೈತ, ಬೇಸಾಯಗಾರ,

ಕೃಸರ (೧೫೭೬) ಒಂದು ಪಾಕ ವಿಶೇಷ

ಕೈಯಾನು (೧೦೨) ಬೇಡು

ಕೈವಲ್ಯ (೧೬೨೫) ಮೋಕ್ಷ, ಮುಕ್ತಿ, ಪರಮಪದ

ಖಂಡೇಂದು ಶೇಖರ (೩೯೯) ಚಂದ್ರಶೇಖರ, ಶಿವ

ಖುಲ್ಲ (೧೫೫೬) ದುಷ್ಟ

ಖೇಚರ (೧೨೩೧) ಆಕಾಶದಲ್ಲಿ ನಡೆಯುವ-ವರು

ಗಡಣ (೪೨೪) ಮೊತ್ತ

ಗಣಾಚಾರ (೩೯) ಪಂಚಾಚಾರಗಳಲ್ಲಿ ಒಂದು, ಶಿವಾಚಾರದ ನಿಂದೆಯನ್ನು

ಕೇಳದಿರುವುದು

ಗಾಡಿಗ (೯೬೫) ಸುಂದರ

ಗಾರಾಗು (೧೧೪) ಘಾಸಿಯಾಗು

ಗೊಂದಿ (೧೫೬೩) ಚಿಂತೆ, ಸುದ್ದಿ

ಗೌಳೆಯರ (೮೧) ದೊಡ್ಡದನಿಯಲ್ಲಿ ಮಾತನಾಡುವವರ(?)

ಘನ (೨೯೨) ಪರಾತ್ಪರ ವಸ್ತು, ಚೈತನ್ಯಾತ್ಮಕ ಲಿಂಗ, ಪರಶಿವ

ಚರ್ಯಾತೀತ (೧೫೭೬) ಚರ್ಯೆಗೆ ಅತೀತನಾದವನು, ಶಿವ

ಚಾಂಡಾಲ (೧೭೦೦) ಅತಿ ನಿಕೃಷ್ಟನಾದವನು

ಜಂಗುಳಿ (೭) ಸಮೂಹ

ಜರಿ (೨೦) ನಿಂದಿಸು

ಜಲಗು (೭೦೫) ಮರಳಲ್ಲಿ ಶೋಧಿಸಿ ತೆಗೆದ ಬಂಗಾರದ ಕಣ

ಜಸ (೪೨೩) < ಯಶ, ಗೆಲವು

ಜಾಗ್ರತಿ (೧೭೧೮) ಎಚ್ಚರ

ಡಿಂಗರಿಗ (೧೦೮೮) ಸೇವಕ

ಡೊಂಕು (೧೫೭೯) ಕೊರತೆ

ತಕ್ರ (೧೨೩೩) ಮಜ್ಜಿಗೆ

ತಡೆಗಡಿ (೩೯) ಅಡ್ಡಗಟ್ಟು

ತತ್ವಮಸಿ (೨೫೪) ತತ್ ತ್ವಂ ಅಸಿ, ತತ್ ಎನಲು ಆರುಲಿಂಗ, ತ್ವಂ ಎನಲು ಆರು ಅಂಗ, ಅಸಿ ಎನಲು ಆರು ಭಕುತಿ. ಈ ಮೂರು ಒಂದಾಗಲು ಅದೆ ಪರಶಿವಲಿಂಗವು

ತಥ್ಯ (೭೦೩) ನಿಶ್ಚಯ, ಸತ್ಯ

ತನುತ್ರಯ (೪೧೫) ಸ್ಥೂಲ, ಸೂಕ್ಷ್ಮ ಕಾರಣಗಳೆನ್ನುವ ಮೂರು ತನುಗಳು

ತಳಿ (೧೨) ಚಿಮುಕಿಸು

ತಾರ್ಕಿಕ (೭೩೩) ತರ್ಕಿಸುವವರು, ವಾದಿಗಳು

ತಾಮಸ (೫೪೯) ಅಜ್ಞಾನ, ಕತ್ತಲೆ

ತಾರೆ (೪೨) ನಕ್ಷತ್ರ

ತಾವು (೧೩೭೧) ಠಾವು, ಸ್ಥಳ

ತಿಂಗಳ ಸೂಡ (೧೫೮೫) ಚಂದ್ರನನ್ನು ಧರಿಸಿದವ -ಚಂದ್ರಶೇಖರ, ಶಿವ

ತಿಂಡಿ (೧೬೦೨) ನವೆ, ಕೆರೆತ

ತ್ರಿಪುರಾರಿ (೧೬೩೨) ಮೂರು ಪುರಗಳನ್ನು ಧ್ವಂಸ ಮಾಡಿದವನು -ಶಿವ

ತ್ರಿವಿಧಗುಣ (೨೮) ಅಗ್ನಿಸ್ತಂಭ, ಜಲಸ್ತಂಭ, ಖಡ್ಗಸ್ತಂಭ

ತ್ರಿವಿಧೋದಕ (೧೩) ಅಂಗೋದಕ, ಲಿಂಗೋದಕ, ಪ್ರಸಾದೋದಕ

ತೀರ್ಗಡೆ (೧೭೬೭) ತೀರುವಳಿ, ಮುಗಿತಾಯ

ತುರಿಯ (೨೩೭) ನಾಲ್ಕನೆಯ ಅವಸ್ಥೆ

ತೆರಹು (೧೦) ಅವಕಾಶ, ಎಡೆ, ಬಿಡುವು, ಸ್ಥಳ

ತೊಂಡರು (೨೯೩) ಸೇವಕರು

ತೊತ್ತು (೧) ಆಳು

ತೋಟಿ (೧೩೭೪) ಜಗಳ

ತೋಯ (೭೩೨) ನೀರು

ದಂದುಗ (೨೯೧, ೧೬೪೯) ಶ್ರಮದ ಕೆಲಸ, ಚಿಂತೆ, ಕಾರ್ಯ

ದಶವಿಧ ಪಾದೋದಕ (೭೧) ಗುರು,

ಲಿಂಗ, ಜಂಗಮ, ಸ್ಪರ್ಶನ, ಅವಧಾನ, ಆಪ್ಯಾಯನ, ಹಸ್ತ, ಪರಿಣಾಮ, ನಿರ್ನಾಮ, ಸತ್ಯಗಳೆನ್ನುವ ಹತ್ತು ಬಗೆಯ ಪಾದೋದಕಗಳು

ದಾತ (೮೧೩) ಒಡೆಯ

ದ್ವಾರಕಿಂಕರರು (೬೧) ದ್ವಾರಪಾಲಕರು, ಬಾಗಿಲು ಕಾಯುವವರು

ದ್ವಾರ ಒಂಬತ್ತು (೩೧೦) ನವನಾಳ

ಧಿತಿ (೪೩)< ಧೃತಿ, ಧೈರ್ಯ

ದೀಕ್ಷಾತ್ರಯ (೩೮೫) ವೇಧಾ, ಮಂತ್ರ, ಕ್ರಿಯಾ ಎಂಬ ಮೂರು ಬಗೆಯ ದೀಕ್ಷೆಗಳು

ದುರಿತಘರಟ್ಟ (೬೪೫) ಪಾಪನಾಶನ- ಶಿವ

ದೂರ (೫) ಅಪಾದನೆ, ನಿಂದೆ

ಧೇನು (೧೬೧೯) ಗೋವು

ನವನೀತ (೧೨೭೬) ಬೆಣ್ಣೆ

ನಾಥ (೮೧೩) ಗಂಡ, ದೊರೆ, ರಕ್ಷಕ, ಸ್ವಾಮಿ

ನಿಃಕರಿಸು (೪೦೧) ತಿರಸ್ಕರಿಸು, ನಿರಾಕರಿಸು

ನಿಧಾನ (೭೦೫) ಐಶ್ವರ್ಯ, ಗುಪ್ತನಿಧಿ

ನಿರ್ಭಾವಂಗೆ (೧೬೨೧) ವಿರಕ್ತನಿಗೆ, ಸನ್ಯಾಸಿಗೆ

ನಿರಂಜನ (೧೨೨೬) ಯಾವುದರ ಸೋಂಕೂ ಇಲ್ಲದವನು

ನಿರುಪಾಧಿ (೧೬೬೧) ನಿರ್ಮಾಯ

ನಿರ್ವಾಣ (೭೧೮) ಬತ್ತಲೆ

ನಿಶಿತ (೧೬೪೩) ಹರಿತವಾದ, ಚೂಪಾದ

ಪಂಕ (೩೪೧) ಕೆಸರು

ಪಂಚಕರಣ (೧೬೫೪) ಮನ, ಬುದ್ಧಿ, ಚಿತ್ತ, ಅಹಂಕಾರ, ಜ್ಞಾನ

ಪಂಚಮಸ್ವರ (೧೬೨೭) ಸಂಗೀತ ಪರಿಭಾಷೆಯ ಒಂದು ಪದ

ಪಂಚೈವರು (೧೦೭) ಕಾಮ, ಕ್ರೋಧ, ಲೋಭ, ಮೋಹ, ಮದ

ಪಚ್ಚಡಿಸು (೩೩೪) ಅಲಂಕರಿಸು, ಹೊದಿಸು, ಹಾಸು

ಪಟುತರ (೧೧೭೭) ಸಾಮರ್ಥ್ಯ, ಉತ್ಸಾಹ

ಪರತ್ರ (೨೬೪) ಪರಲೋಕ

ಪರಾತ್ಪರವಸ್ತು (೫೦೦) ಪರಮಾತ್ಮ, ಪರಶಿವ

ಪರಿವೇಷ್ಟಿಸು (೨೯) ಆವರಿಸು, ಸುತ್ತು, ಮುತ್ತು

ಪ್ರಮಥ (೧೨೩೨) ಭಕ್ತ

ಪ್ರಸಂಗ (೧೨೪೬) ಭಕ್ತಿ ಸಂಭಾಷಣೆ

ಪಾದೋದಕತ್ರಯ (೫೦೦) ಗುರು ಪಾದೋದಕ, ಕ್ರಿಯಾಪಾದೋದಕ, ಜ್ಞಾನಪಾದೋದಕ

ಪಾವೆ (೧೦೭) ನೌಕಾಪಟ

ಪಾಷಾಣ (೧೬೨೨) ಕಲ್ಲು

ಪಿಪೀಲಿಕ (೧೬೮೦) ಇರುವೆ

ಪಿಶಿತ (೩೦೨) ಮಾಂಸ

ಪುರಾತರು (೧೬೧೧) ಆದ್ಯರು, ಪುರಾತನರು

ಪೂಜೆ (೧೬೦೯) ಪೂಜ್ಯ, ಸೊನ್ನೆ

ಫಲ(೩) ಹಣ್ಣು

ಬಂಟರು (೧೨೪) ವೀರರು

ಬಂಡು (೩೪) ಮಕರಂದ

ಬಟ್ಟೆ (೩) ದಾರಿ, ಹಾದಿ

ಬಲ್ಲಹ (೩೨೨) ಜ್ಞಾನಿ

ಭಾವಕಿ (೧೬೨೧) ಸುಂದರಿ

ಬಾಳದಕ್ಷರ (೬೯೫) ಹಣೆಯ ಬರೆಹ

ಬಿಜಯಂಗೈ (೧)ದಯಮಾಡಿಸು, ಆಗಮಿಸು

ಬಿರ್ಚು (೨೧) ಬಿಚ್ಚು, ತೆಗೆ

ಬುದ್ಬುದ (೫೪೬) ನೊರೆ, ಗುಳ್ಳೆ

ಬೆಂಗುಂಡು (೧೦೭) ಲಂಗರು, ಹಡಗು ಚಲಿಸದಂತೆ ಕಟ್ಟಿದ ಗುಂಡು

ಬೆಟ್ಟಜೆ (೧೬೮೮) ಗಿರಿಜೆ

ಬೆನಕ (೫) ಗಣಪತಿ

ಬೆಳವಿಗೆ (೩೮೬) ಪ್ರಗತಿ, ಅಭಿವೃದ್ಧಿ

ಬೇಟ (೩೩) ಬಯಕೆ, ಅಪೇಕ್ಷೆ, ವಿರಹ

ಬೈಗೆ (೨೨೪) ನಿಂದಿಸು

ಬೈಸಣಿಗೆ (೮೯೦) ಬೀಸಣಿಗೆ (?)

ಬೊಪ್ಪ (೧೦೫೦) ತಂದೆ

ಬೊಮ್ಮ (೨೫೭) ಬ್ರಹ್ಮ

ಬೋಡಾಗು (೯೨) ಬರಿದಾಗು

ಬೋಸರಿಸು (೮೩) ಪ್ರೀತಿಸುವಂತೆ ನಟಿಸು, ಕಪಟ ಆದರವನ್ನು ತೋರಿಸು, ಪುಸಲಾಯಿಸು

ಭಂಡ (೧೦೭) ಸರಕು, ಸಾಮಾನು

ಭಂಡು (೨೩೫) ವ್ಯರ್ಥ ಮಾತು, ಅಪ್ರಯೋಜಕ ಮಾತು, ಸೋಗಿನಮಾತು

ಭಕ್ತಿ ಆರು (೨೫೭) ಷಡ್ವಿಧ ಭಕ್ತಿ

ಭವಿ (೧೭೦೯) ಇಷ್ಟಲಿಂಗವಿಲ್ಲದವ

ಭಾಂಡ (೪೨೦) ಪಾತ್ರೆ, ಸರಕು

ಭಾಜನ (೭೨೧) ತಟ್ಟೆ, ಗಂಗಾಳ

ಭಾನು (೪೨) ಸೂರ್ಯ

ಭೇರುಂಡ (೧೦೦೧) ಎರಡು ತಲೆಯುಳ್ಳ ಹಕ್ಕಿ

ಭೈತ್ರ (೧೦೭) ಹಡಗು

ಮಂಡೂಕ (೧೭೬೨) ಕಪ್ಪೆ

ಮಚ್ಚು (೬೯) ಬಯಸು, ಇಷ್ಟಪಡು

ಮತ್ಸ್ಯ (೫೪೫) ಮೀನು

ಮದವಳಿಗೆ (೫೬) ಮದುವಣಗಿತ್ತಿ

ಮದಹಸ್ತಿ (೮೭೦) ಮಧಿಸಿದ ಆನೆ

ಮಧುಕರ (೩೯೨) ದುಂಬಿ

ಮನಸಿಜ (೨೭) ಮನ್ಮಥ, ಕಾಮ

ಮರಕತ (೧೮೨೫) ಪಚ್ಚೆ

ಮರಹು (೧೫೮೪) ಅಜ್ಞಾನ

ಮರೀಚಿ (೧೩೯೦) ಕಿರಣ

ಮಲತ್ರಯ (೯೪) ಆಣವ,ಮಾಯಾ, ಕಾರ್ಮಿಕಗಳೆನ್ನುವ ಮೂರು ಮಲಗಳು

ಮಸುಳು (೮೩೦) ಮರೆಯಾಗು

ಮಶಕ (೮೯೩) ಸೊಳ್ಳೆ

ಮಹ (೫೪೬) ಪರವಸ್ತು

ಮಹಿಷ (೫೧೧) ಎಮ್ಮೆ

ಮಾಜು (೧೬೮೯) ಮರೆಮಾಡು

ಮಾತ್ರೆ (೧೭೫೦) ಅಕ್ಷರ

ಮಾದವು (೧೧೧) ಕಳೆದುವು, ಬಿಟ್ಟುವು

ಮಾನಸಗುರಿ (೨೭) ಮನುಷ್ಯರೆನ್ನುವ ಕುರಿಗಳು

ಮಾಯಿಕರು (೧೬೪೪) ಮಾಯೆಗೆ ಒಳಗಾದವರು

ಮಾಳ (೧೨೭೭) ಮಹಳ, ಶ್ರಾದ್ಧ

ಮಿಗ (೪೦೨) ಮರಿಜಿಂಕೆ

ಮಿಟ್ಟೆಯ ಭಂಡ (೨೩೫) ಹೊಲಸು, ಸೋಗಿನವ

ಮುಂಡ (೨೫೧) ಶಿರವಿಲ್ಲದ ದೇಹ

ಮುಕುರ (೫೫೭) ಕನ್ನಡಿ

ಮುಕುಳ (೨೬೯) ಮೊಗ್ಗು

ಮುಖಮುಗಿದು (೩೯೫) ಕಣ್ಣುಮುಚ್ಚಿ

ಮುಮ್ಮಲ (೨೦೭) ಮೂರು ಮಲ-ಆಣವ, ಮಾಯಾ, ಕಾರ್ಮಿಕ

ಮೊರಹು (೨೪೩) ಧ್ವನಿ

ಮೋಚಕ (೬೪) ಕಳೆಯುವವನು, ಪರಿಹರಿಸುವವನು

ಮೌಕ್ತಿಕ (೧೮೨೫) ಮುತ್ತು

ರಜ್ಜು (೧೬೭೦) ಹಗ್ಗ

ರವರವೆ (೪೭೬) ಫಳಕ್ಕನೆ ಕಾಣಿಸಿಕೊಳ್ಳುವ ಪ್ರಭೆ

ರಸವಾದ (೧೧೭೯) ಲೋಹವನ್ನು ಸುವರ್ಣವನ್ನಾಗಿ ಮಾಡುವ ವಿದ್ಯೆ

ಲಿಂಗತ್ರಯ (೫೦) ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ

ಲೀಢ (೧೫೪೦) ಲೇಪ

ಲೀಯ ಮಾಡು (೨೫) ಒಂದುಗೂಡಿಸು, ಏಕವಾಗಿಸು

ವಸುಧಿ (೧೫೩) ಲೋಕ

ವಾಕ್ಕು (೧೭೬೦) ಮಾತು

ವಾಮನೇತ್ರ (೧೫೭೭) ಎಡಗಣ್ಣು

ವಾಯ (೮೬) ಹುಸಿ, ಮೋಸ

ವಾರುಧಿ (೭೮) ಸಮುದ್ರ

ವಾಹಿ (೩೨೭) ವಾಹನ

ವಿಕಳತೆ (೫೮) ಅಗಲಿಕೆ, ವಿರಹ

ವಿದ್ರುಮ (೧೮೨೫) ಹವಳ

ವಿರಿಂಚಿ (೯೩) ವಿಷ್ಣು

ವಿಹಂಗ (೧೬೮೦) ಪಕ್ಷಿ

ವೈತಾಳಿಕ (೩೭೫) ಮಂಗಳ ಪಾಠಕ, ಸ್ತುತಿ ಪಾಠಕ

ವೈಶಿಕ (೩೭೫) ಕಪಟಕೃತ್ಯ, ಮೋಸ

ವೃಥಾಯ (೯೫೮) ವ್ಯರ್ಥವಾಗಿ, ನಿಷ್ಫಲ,

ಶಂಖಿ (೧೭೧೦) ತಮಿಳುನಾಡಿನ ಅರುವತ್ತುಮೂವರು ನಾಯನ್ಮಾರರಲ್ಲಿ ಒಬ್ಬ -ಶಂಕಿತೊಂಡಿ

ಶಮೆ (೧೦೦೨) ಮನಃಶಾಂತಿ

ಶೃಂಗ (೧೭೫೪) ಕೋಡು

ಶ್ವಾನ (೧೬೦೭)ನಾಯಿ

ಶುಕ (೧೫೮೧) ಗಿಳಿ

ಶ್ವೇತಶಿಲೆ (೧೮೨೫) ಅಮೃತಶಿಲೆ

ಷಡ್ವಿಧ ಅಂಗ (೩೦) ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ

ಷಡ್ವಿಧ ಲಿಂಗ (೩೦) ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಪ್ರಸಾದಲಿಂಗ, ಮಹಾಲಿಂಗ

ಷಡ್ವಿಧ ಪ್ರಸಾದ (೩೦) ಇಂದ್ರಿಯಾನಂದ, ಪ್ರಾಣಾನಂದ, ಜ್ಞಾನಾನಂದ, ಭಾವಾನಂದ, ತೂರ್ಯಾನಂದ, ಮಹದಾನಂದ

ಷೋಡಶೋಪಚಾರ (೧೨೨೮) ಅರ್ಘ್ಯ, ಪಾದ್ಯ, ಆಚಮನ, ಪತ್ರಪುಷ್ಪ ಗಂಧ, ಅಕ್ಷತೆ, ರುದ್ರಾಕ್ಷಮಾಲಾ, ಛತ್ರ, ಚಾಮರ, ವ್ಯಜನ, ಗೀತ, ವಾದ್ಯ, ನರ್ತನ, ಪ್ರದಕ್ಷಿಣ, ನಮಸ್ಕಾರ, ಸ್ತೋತ್ರ

ಸಂತವಿಡು (೨೮೬) ಸಮಾಧಾನಿಸು

ಸಜ್ಜಿಕ (೧೬೦೨) ಒಂದು ಸಿಹಿ ಪದಾರ್ಥ

ಸಟೆ (೭೦೯) ಸುಳ್ಳು

ಸಬುದ (೨೧) ಶಬ್ದ

ಸಮನಿಸದು (೧೦೭೧) ಹೊಂದದು

ಸಮನಿಸು (೪) ಉಂಟಾಗು, ಒದಗು

ಸರಹು (೨೭೯) ಶಬ್ದ

ಸರಳು (೧೭೧೦) ಬಾಣ

ಸರ್ವ (೪೫೧) < ಶರ್ವ, ಶಿವ

ಸವೆ (೨೭೮) ಒಪ್ಪಿಸು

ಸ್ಥಲ (೧೬೨೪) ಸ್ಥಳ, ಜಾಗ

ಸಾಮಜ (೧೪೩) ಆನೆ

ಸಿಂಪುಳಿಕ (೭೬) ಹನಿನೀರು

ಸಿಂಬಿ (೧೦೮೮) ರತಿ, ಶೃಂಗಾರವುಳ್ಳವಳು; ಸಿಂಹಿಣಿ, ಹೆಣ್ಣು ಸಿಂಹ

ಸೀ (೮೪) ಅಪೇಕ್ಷಿಸು

ಸೀಮೆ (೨೫೭) ಗಡಿ, ಎಲ್ಲೆ

ಸುಡೆಯರು (೨೮೨) ಸುಡುವವರು (?)

ಸೂತಕಶ್ರುತ (೩) ದೋಷಾರೋಪದ ಮಾತು

ಸುಯಿಧಾನಿ (೩೩೪) ಶಾಂತ ಸ್ಥಿತಿ, ಸಮಾಧಾನ ಸ್ಥಿತಿ

ಸೊಣಗ (೭೫೨) ನಾಯಿ

ಸೊಮ್ಮು (೯೭೦) ಸಂಪತ್ತು

ಸೋಪಾನ (೧೭೧೮) ಮೆಟ್ಟಿಲು

ಸೋವು (೪೦೨) ಮೃಗಗಳನ್ನು ಬೇಟೆಗೆ ಅಟ್ಟಿಸಿಕೊಂಡು ಬರುವುದು

ಹಕ್ಕೆ (೩೨೯) ರಕ್ಷೆ (?)

ಹದುಳ (೪೧೫) ಕ್ಷೇಮ

ಹಮ್ಮಯಿಸು (೧೦೯) ಮೈಮರೆ, ಪರವಶವಾಗು

ಹಮ್ಮು (೪೨೩) ಅಹಂಕಾರ

ಹರಹರಿಕೆ (೧೨೭) ಸ್ವೇಚ್ಛಾವೃತ್ತಿ

ಹರಿ (೪೨; ೧೩೭೧) ; ಚಲಿಸು; ಪರಿಹಾರಗೊಳ್ಳು, ನಿವಾರಣೆಯಾಗು

ಹಸನ (೯೭) ಶುದ್ಧ

ಹಳಚು (೧೨೬೫) ತಾಗು

ಹಾಯಿ (೧೦೮) ದೋಣಿಯ ಕಂಬಕ್ಕೆ ಕಟ್ಟಿದ ಬಟ್ಟೆ

ಹಾರು (೧೧೩) ಬಯಸು, ಅಪೇಕ್ಷಿಸು, ನಿರೀಕ್ಷಿಸು

ಹಾರೆ (೭೩೧) ಬಯಸೆ, ಇಚ್ಛಿಸೆನು

ಹಾಹೆ (೫೬೦) ಗೊಂಬೆ

ಹಿಂಗು (೨) ಬಿಡು

ಹಿತವೆ (೨೭೭) ಹಿತವನ್ನು ಬಯಸುವವಳು

ಹೃಷೀಕ (೧೭೬೩) ಇಂದ್ರಿಯ

ಹೆಡೆಗುಡಿ (೩೮) ಹೆಡಮುರಿಗೆ, ಕೈಗಳನ್ನು ಹಿಂದಕ್ಕೆ ಮಾಡಿ ಕಟ್ಟುವುದು

ಹೇರು (೧೬೨೩) ಒಂದು ಗಾಡಿಯಲ್ಲಿ ತುಂಬುವಷ್ಟು ಪ್ರಮಾಣದ ದವಸ

ಹೊದ್ದಿಸದಿರು (೩೬) ಸಮೀಪ ಸೇರಿಸದಿರು

ಹೊಮ್ಮಿಗ (೪೦೨) ಚಿನ್ನದ ಜಿಂಕೆ

ಹೊಯ್ಲು (೧೦೭) ಹೊಡೆತ

ಹೊಲಬು (೪೨೧) ಮಾರ್ಗ, ದಾರಿ

# ಸಿದ್ಧರಾಮೇಶ್ವರರ ಷಟ್‌ಸ್ಥಲ ವಚನಗಳ ಅಕಾರಾದಿ

ಆ

ದ



ನ

ಮ

ಯ



ರ

# ಆಕರ ಗ್ರಂಥಗಳು

"ಅಕ್ಷರಾಂಕ" ತಾಡವೋಲೆ
ಪ್ರತಿ ೩೧೦/ (ಅಪ್ರಕಟಿತ)
ಬೃಹನ್ಮಠ, ಚಿತ್ರದುರ್ಗ

ಅದ್ವೈತಾನಂದದ ವಚನಗಳು
ಸಂ. ಡಾ|| ಬಿ. ಆರ್. ಹಿರೇಮಠ
ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ,
ಗದಗ. ೧೯೮೩

ಅನುಭವಜ್ಞಾನಸಾರಾಮೃತ ಸಂಪಾದನಾ ಸ್ತೋತ್ರ
-ಸಂಪಾದನೆಯ ಪರ್ವತೇಶ್ವರ
ಸಂ. ಬಿ.ಆರ್. ಹೂಗಾರ
ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ,
ಗದಗ. ೧೯೮೯

ಅಷ್ಟಾವರಣದ ವಚನಗಳು
-ಎಳಮಲೆಯ ಗುರುಶಾಂತದೇವರು
ಸಂ. ಡಾ|| ವೀರಣ್ಣ ರಾಜೂರ
ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ,
ಗದಗ. ೯೮೩

ಆಚರಣೆಯ ಸಂಬಂಧದ ವಚನಗಳು
-ಸಂಪಾದನೆಯ ಹರತಾಳ ಚನ್ನನಂಜಯದೇವರು
ಸಂ.ಪಿ.ಎಂ.ಗಿರಿರಾಜು
ಗೌ||ಸಂ||'ಶರಣ ಸಂತಾನ' (ತ್ರೈಮಾಸಿಕ)
೪೪೭-ಸಂತೇಪೇಟೆ, ಮೈಸೂರು.೨೪ ೧೯೮೭

ಆಚರಣೆಯ ಸಂಬಂಧದ ವಚನಗಳು
ಸಿದ್ಧವೀರೇಶ್ವರದೇವರು
ಸಂ.ಪಿ.ಎಂ.ಗಿರಿರಾಜು
ಗೌ॥ಸಂ॥ 'ಶರಣ ಸಂತಾನ' (ತ್ರೈ ಮಾಸಿಕ)
೪೪೭-ಸಂತೇಪೇಟೆ, ಮೈಸೂರು-೨೪ ೧೯೮೦

ಎಲ್ಲ ಪುರಾತರ ವಚನ-ಕುಂತೂರು ಮಹತ್ತದೇವ
ಸಂ.ಜಿ.ಎ.ಶಿವಲಿಂಗಯ್ಯ
ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ,
ಗದಗ. ೧೧೯೦

ಏಕೋತ್ತರ ಶತಸ್ಥಲ ಮಹಾಲಿಂಗದೇವರು
ಸಂ. ಪ್ರೊ॥ಸಂ.ಶಿ.ಭೂಸನೂರಮಠ
ಶ್ರೀ ನಿ.ಪ್ರ.ಸ್ವ.ಶಿವಬಸವ ಮಹಾಸ್ವಾಮಿಗಳು
ರುದ್ರಾಕ್ಷಿಮಠ, ನಾಗನೂರು, ಬೆಳಗಾಂ ಜಿಲ್ಲೆ ೧೯೭೪

ಏಕೋತ್ತರ ಶತಸ್ಥಲ-ಸಿದ್ಧಲಿಂಗ
ಸಂ. ಫ.ಗು.ಹಳಕಟ್ಟಿ
ಶಿವಾನುಭವ ಗ್ರಂಥಮಾಲೆ, ವಿಜಾಪುರ

ಏಕೋತ್ತರ ಶತಸ್ಥಲ ಸಾರಾಮೃತ (ಅಪ್ರಕಟಿತ)
-ಕಟ್ಟಿಗೆಹಳ್ಳಿ ಸ್ವಾಮಿ

ಗಣಭಾಷ್ಯ ರತ್ನಮಾಲೆ-ಗುಬ್ಬಿಯ ಮಲ್ಲಣಾರ್ಯ
ಸಂ.ವೇ॥ ನಂಜುಂಡಶಾಸ್ತ್ರಿಗಳವರ ಶಿವಪ್ಪಶಾಸ್ತ್ರಿಗಳು
ಬಳ್ಳಾಪುರಪೇಟೆ, ಬೆಂಗಳೂರು ಸಿಟಿ ೧೯೦೯

ಚಿತ್ಕ್ರಿಯಾ ಸಂಗ್ರಹ- ಜಗುನಿ ಮರುಳದೇವರು
ಸಂ. ಡಾ॥ಎಸ್. ವಿದ್ಯಾಶಂಕರ
ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ. ೧೯೮೩

ಚಿದೈಶ್ವರ್ಯ ಚಿದಾಭರಣ-ಗುರುಸಿದ್ಧದೇವರು
ಸಂ.ಪಿ.ಎಂ.ಗಿರಿರಾಜು
ಗೌ॥ಸಂ॥ 'ಶರಣ ಸಂತಾನ' ತ್ರೈಮಾಸಿಕ
೪೪೭-ಸಂತೇಪೇಟೆ, ಮೈಸೂರು-೨೪ ೧೯೮೫

ಚೆನ್ನ ಬಸವೇಶ್ವರ ಸ್ತೋತ್ರದ ವಚನಗಳು
ಸಂಪಾದನೆಯ ಸಿದ್ಧವೀರಣಾರ್ಯ
ಸಂ.ಜಿ.ಎ.ಶಿವಲಿಂಗಯ್ಯ
ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ. ೧೯೯೧

ನಿರಸನದ ವಚನಗಳು (ವಚನ ಸಂಪುಟ-೧)
ಸಂ.ಡಾ॥ಬಿ.ಆರ್.ಹಿರೇಮಠ
ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗು ೧೯೯೦

ಜ್ಞಾನಷಟ್ಸ್ಥಲಸಾರ-ಗುರುಶಂಕರಸ್ವಾಮಿ
(ಅಪ್ರಕಟಿತ ಹಸ್ತಪ್ರತಿ)
ಕನ್ನಡ ಸಂಶೋಧನ ಸಂಸ್ಥೆ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಪರಮಮೂಲಜ್ಞಾನ ಷಟ್‌ಸ್ಥಲ-ಚಿಕ್ಕವೀರಣ್ಣೊಡೆಯ
ಸಂ.ಡಾ॥ ಎಂ.ಎಸ್. ಸುಂಕಾಪುರ
ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೧೯೭೭

ಪ್ರಭುದೇವರ ಸ್ತೋತ್ರದ ವಚನಗಳು
ಸಂಪಾದನೆಯ ಸಿದ್ಧವೀರಣಾರ್ಯ
ಸಂ. ಎಸ್. ಶಿವಣ್ಣ
ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ,
ಗದಗ. ೧೯೯೧

ಪ್ರಭುಲಿಂಗಲೀಲೆ-ಚಾಮರಸ
ಸಂ.ಪ್ರೊ.ಎಸ್.ಎಸ್.ಬಸವನಾಳ
ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ. ೧೯೫೬

ಪ್ರಭುಲಿಂಗನ ಕಂದ (ಕಾವ್ಯ)
ಸಂ.ಎಸ್. ಶಿವಣ್ಣ
ಬೃಹನ್ಮಠ, ಚಿತ್ರದುರ್ಗ. ೧೯೮೯

ಪ್ರಸಾದಿಸ್ಥಲದ ವಚನಗಳು
ಸಂ.ಡಾ|| ಎಂ.ಎಸ್. ಸುಂಕಾಪುರ
ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿದ್ಯಾಲಯ ಧಾರವಾಡ ೧೯೭೭

ಬಸವಸ್ತೋತ್ರದ ವಚನಗಳು-ಚೆನ್ನಂಜೆದೇವರು
ಸಂ.ಡಾ|| ಎಂ.ಎಂ. ಕಲಬುರ್ಗಿ
ಬಸವೇಶ್ವರಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೧೯೭೬

ಬಸವಸ್ತೋತ್ರದ ವಚನಗಳು
ಸಂಪಾದನೆಯ ಬೋಳಬಸವರಾಜದೇವರು
ಸಂ.ಡಾ|| ಎಂ.ಎಂ.ಕಲಬುರ್ಗಿ
ಬಸವೇಶ್ವರಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೧೯೭೬

ಬ್ರಹ್ಮಾದ್ವೈತ ಸಿದ್ಧಾಂತ ಷಟ್ಥಲಾಭರಣ
ಕರಸ್ಥಲದ ಮಲ್ಲಿಕಾರ್ಜುನ ಒಡೆಯರು
ಸಂ. ಡಾ|| ಆರ್.ಸಿ.ಹಿರೇಮಠ
ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೧೯೭೩

ಭಕ್ತ್ಯಾನಂದ ಸುಧಾರ್ಣವ
ಸಂ.ಡಾ||ವೀರಣ್ಣ ರಾಜೂರ
ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ,
ಗದಗ. ೧೯೮೫

ಮಿಶ್ರಸ್ತೋತ್ರದ ವಚನಗಳು- ಎಳಮಲೆಯ ಗುರುಶಾಂತದೇವರು
ಸಂ. ಡಾ|| ವೀರಣ್ಣ ರಾಜೂರ
ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ,
ಗದಗ. ೧೯೮೩

ಮಿಶ್ರಸ್ತೋತ್ರದ ವಚನಗಳು-ಸಂಪಾದನೆಯ ಚೆನ್ನಂಜೇದೇವರು
ಸಂ. ಹೊಸಹಳ್ಳಿಯ ಸಂಸ್ಥಾನ ಮಠದ ಶ್ರೀ ಪ್ರಭುಸ್ವಾಮಿಗಳು
ಹೊಸಹಳ್ಳಿ. ೧೯೫೨

ಮೋಕ್ಷದರ್ಶನ ಸಂಗ್ರಹ- ಪ್ರಭುದೇಶಿಕ (ಅಪ್ರಕಟಿತ)
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ
ಮೈಸೂರು-೬

ಲಿಂಗಚಿದಮೃತ ಬೋಧೆ-ಶಾಂತಬಸವೇಶ್ವರ
ಸಂ. ಡಾ|| ಎಂ.ಎಸ್. ಸುಂಕಾಪುರ
ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೧೯೭೫

ಲಿಂಗಲೀಲಾವಿಲಾಸ ಚಾರಿತ್ರ-ಕಲ್ಲುಮಠದ ಪ್ರಭುದೇವ
ಸಂ. ಪ್ರೊ|| ಸಂ. ಶಿ. ಭೂಸನೂರಮಠ
ಶ್ರೀ. ನಿ.ಪ್ರ.ಸ್ವ. ಮೃತ್ಯುಂಜಯ ಮಹಾಸ್ವಾಮಿಗಳು
ಮುರುಘಾಮಠ, ಧಾರವಾಡ. ೧೯೫೬

ಲಿಂಗವಿಕಳಾವಸ್ಥೆಯ ವಚನಗಳು-ಎಳಮಲೆಯ ಗುರುಶಾಂತದೇವ
ಸಂ. ಡಾ|| ವೀರಣ್ಣ ರಾಜೂರ
ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ,
ಗದಗ. ೧೯೮೩

ಲಿಂಗ ಸ್ತೋತ್ರದ ವಚನಗಳು
ಸಂಪಾದನೆಯ ಸಿದ್ಧವೀರಣ್ಣದೇವರು
ಸಂ. ವೀರಭದ್ರಪ್ಪ ಕೊಪ್ಪಳ
ಶ್ರೀ ಗುರುಬಸವ ಮಂಟಪ ಟ್ರಸ್ಟ್ ಕಮಿಟಿ, ಹುಬ್ಬಳ್ಳಿ. ೧೯೬೪

ವಚನಸಾರ
ಸಂ.ಡಾ||ವೀರಣ್ಣ ರಾಜೂರ
ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ,
ಗದಗ. ೧೯೮೯

ವಚನಾಮೃತಸಾರ
ಸಂ. ಕಾಶೀಪುಟ್ಟಸೋಮಾರಾಧ್ಯರು ಮತ್ತು
ಡಾ|| ವೀರಣ್ಣ ರಾಜೂರ
ಮಂಗಳ ಪ್ರಕಾಶನ, ಕಲ್ಯಾಣನಗರ, ಧಾರವಾಡ. ೧೯೭೯

ವಿರತಾಚಾರಣೆಯ ಶರಣ ಸಂಬಂಧದ ವಚನಗಳು-ಶಂಕರದೇವರು
ಸಂ.ಪಿ.ಎಂ.ಗಿರಿರಾಜು
ಗೌ||ಸಂ|| 'ಶರಣ ಸಂತಾನ' (ತ್ರೈ ಮಾಸಿಕ)
೪೪೭-ಸಂತೇಪೇಟೆ, ಮೈಸೂರು-೨೪ ೧೯೭೯

ವಿಶೇಷಾನುಭವ ಷಟ್‌ಸ್ಥಲ
ಸಂ. ಡಾ|| ಆರ್.ಸಿ.ಹಿರೇಮಠ
ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೧೯೭೧

ವೀರಶೈವ ಶಿಖಾರತ್ನ (ಶಾಸ್ತ್ರಕಾವ್ಯ) (ಹಸ್ತಪ್ರತಿ)
ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ.

ವೀರಶೈವಾಭರಣ (ಶಾಸ್ತ್ರಕಾವ್ಯ)-ಗೌರವಾಂಕ
(ಮೈಸೂರಿನ ಶ್ರೀ ಜಿ.ಎ.ಶಿವಲಿಂಗಯ್ಯನವರ ಹಸ್ತಪ್ರತಿ)

ಶರಣ ಚಾರಿತ್ರದ ವಚನಗಳು-ಸಂಪಾದನೆಯ ಸಣ್ಣಬರಹದ
ಗುರುಬಸವರಾಜದೇವರು
ಸಂ.ಡಾ||ಬಿ.ವಿ.ಶಿರೂರ
ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ,
ಗದಗ. ೧೯೮೪

ಶರಣಮುಖಮುಂಡನ
ಸಂ.ಡಾ||ಬಿ.ವಿ.ಶಿರೂರ ಮತ್ತು ಶ್ರೀ. ಬಿ..ಆರ್. ಹೂಗಾರ
ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ,
ಗದಗ. ೧೯೮೮

ಶರಣಸ್ತೋತ್ರದ ವಚನಗಳು-ಎಳಮಲೆಯ ಗುರುಶಾಂತದೇವ
ಸಂ.ಡಾ|| ವೀರಣ್ಣ ರಾಜೂರ
ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ,
ಗದಗ. ೧೯೮೩

ಶಿವನ ಬಿರುದಾವಳಿಸ್ತೋತ್ರದ ವಚನಗಳು
ಸಂಪಾದನೆಯ ಸಿದ್ಧವೀರಣಾರ್ಯ
ಸಂ.ಎಸ್.ಶಿವಣ್ಣ
ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ,
ಗದಗ. ೧೯೯೧

ಶಿಮಮಹಿಮಾ ಸ್ತೋತ್ರದ ವಚನಗಳು
ಸಂಪಾದನೆಯ ಸಿದ್ಧವೀರೇಶ್ವರದೇವರು [ವೀರಸಂಗಯ್ಯ]
ಸಂ.ಡಾ ॥ ವೀರಣ್ಣ ರಾಜೂರ
ಕರ್ನಾಟಕ ಭಾರತಿ (ತ್ರೈಮಾಸಿಕ) ಸಂ. ೧೯.ಸಂ.೨ ೧೯೮೯

ಶಿವಯೋಗಚಿಂತಾಮಣಿ
-ಜಾಳಿಗೆಕಂತೆ ಸಿದ್ಧಲಿಂಗ ಶಿವಯೋಗಿಗಳು
ಸಂ. ಡಾ॥ ಉಮಾದೇವಿ
ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ,
ಗದಗ. ೧೯೮೬

ಶೀಲಸಂಪಾದನೆ
ಸಂ.ಡಾ॥ ವೀರಣ್ಣ ರಾಜೂರ
ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ,
ಗದಗ.

ಶೂನ್ಯ ಸಂಪಾದನೆ-ಗುಮ್ಮಳಾಪುರದ ಸಿದ್ಧಲಿಂಗದೇವ
ಸಂ. ಡಾ॥ಆರ್. ಸಿ.ಹಿರೇಮಠ
ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೧೯೬೨

ಶೂನ್ಯ ಸಂಪಾದನೆ-ಗೂಳೂರು ಸಿದ್ಧ ವೀರಣ್ಣೊಡೆಯ
ಸಂ. ಪ್ರೊ॥ ಸಂ.ಶಿ. ಭೂಸನೂರಮಠ
ರಾವೂರ ಸಿದ್ಧಲಿಂಗೇಶ್ವರಮಠ ಮತ್ತು ಆದವಾನಿಯ
ಕಲ್ಲುಮಠದ ಅಧಿಪತಿಗಳು, ರಾವೂರು. ೧೯೫೮

ಶೂನ್ಯ ಸಂಪಾದನೆ-ಶಿವಗಣಪ್ರಸಾದಿ ಮಹಾದೇವಯ್ಯ
ಸಂ.ಡಾ॥ಆರ್. ಸಿ.ಹಿರೇಮಠ
ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೧೯೮೬

ಶೂನ್ಯ ಸಂಪಾದನೆ- ಹಲಗೆದೇವರು (ಅಪ್ರಕಟಿತ)
ಕೆ.ಎ.೧೧೦೫, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು-೬

ಷಟ್ಪ್ರಕಾರ ಸಂಗ್ರಹ-ಶಾಂತದೇವ
ಸಂ.ಜಿ.ಎ.ಶಿವಲಿಂಗಯ್ಯ
ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ,
ಗದಗ. ೧೯೮೭

ಷಟ್ಸ್ಥಲಬ್ರಹ್ಮಾನಂದ ವಿರಕ್ತ ಚಾರಿತ್ರ ಸಂಪಾದನೆಯ ವಚನಗಳು
-ಸಂಪಾದನೆಯ ಬೋಳಬಸವರಾಜದೇವರು
ಸಂ.ಪ್ರೊ|| ಎಸ್. ಉಮಾಪತಿ
ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ,
ಗದಗ. ೧೯೮೪

ಷಟ್ಸ್ಥಲ ಸ್ತೋತ್ರದ ವಚನಗಳು-ಎಳಮಲೆಯ ಗುರುಶಾಂತದೇವರು
ಸಂ. ಡಾ||ವೀರಣ್ಣ ರಾಜೂರ
ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ,
ಗದಗ. ೧೯೮೩

ಸಂಪಾದನೆಯ ಸಾರಾಮೃತ-ಕಟ್ಟಿಗೆಹಳ್ಳಿ ಸಿದ್ಧಲಿಂಗಸ್ವಾಮಿ
ಸಂ. ಡಾ||ಬಿ ಆರ್. ಹಿರೇಮಠ
ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ,
ಗದಗ. ೧೯೮೮

ಸಂಬಂಧಾಚರಣೆಯ ವಚನಗಳು
ಸಂ. ಪಿ.ಎಂ. ಗಿರಿರಾಜು
ಗೌ||ಸಂ.ಶರಣ ಸಂತಾನ' (ತ್ರೈ ಮಾಸಿಕ)
೪೪೭-ಸಂತೇಪೇಟೆ, ಮೈಸೂರು-೨೪ ೧೯೮೬

ಸಕಲ ಪುರಾತನರ ವಚನಗಳು ಸಂಪುಟ ೧
ಸಂ. ಡಾ|| ಆರ್. ಸಿ.ಹಿರೇಮಠ
ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೧೯೭೨

ಸಕಲ ಪುರಾತನರ ವಚನಗಳು ಸಂಪುಟ೩
ಸಂ. ಡಾ|| ಎಂ.ಎಸ್. ಸುಂಕಾಪುರ
ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೧೯೭೮

ತಾಡವೋಲೆ ಪ್ರತಿ ೧೨೦೬/೪ (ಅಪ್ರಕಟಿತ)
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು-೬

ಸಿದ್ಧರಾಮಯ್ಯದೇವರ ವಚನಗಳು
ಸಂ. ಡಾ|| ಎಂ.ಎಂ. ಕಲಬುರ್ಗಿ, ಡಾ|| ಸಾ.ಶಿ. ಮರುಳಯ್ಯ
ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ
ಬೆಂಗಳೂರು-೫೬೦೦೧೮ ೧೯೯೮

ಸಿದ್ಧರಾಮೇಶ್ವರ ವಚನಗಳು-ಸಿದ್ಧರಾಮ
ಸಂ. ಡಾ||ಆರ್.ಸಿ. ಹಿರೇಮಠ
ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೧೯೬೮

ಸಿದ್ಧರಾಮಯ್ಯನ ಶಿವಯೋಗ ಷಟ್ಸ್ಥಲಾನುಭಾವದ ವಚನ
-ಮುತ್ತಿನಪೆಂಡೆಯ ಓದುವ ಅನ್ನದಾನಿದೇವರು
ಸಂ.ಎಸ್. ಶಿವಣ್ಣ
ಬಸವ ಸಮಿತಿ, ಬಸವ ಭವನ
ಶ್ರೀ ಬಸವೇಶ್ವರ ವೃತ್ತ, ಬೆಂಗಳೂರು-೧ ೧೯೮೬

ಸಿದ್ಧರಾಮೇಶ್ವರ ದೇವರು ನಿರೂಪಿಸಿದ ಷಟ್‌ಸ್ಥಲದ ವಚನಗಳು
ಕಾಗದದ ಪ್ರತಿ ಸಂಖ್ಯೆ ೭೬೦
ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಸುಖಸಂಪಾದನೆಯ ವಚನಗಳು
ಸಂ.ಡಾ||ಬಿ. ಆರ್. ಹಿರೇಮಠ
ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ,
ಗದಗ. ೧೯೮೭

## ಸಮಗ್ರ ವಚನಸಾಹಿತ್ಯ ಪ್ರಕಟನ ಯೋಜನೆ

'ಸಮಗ್ರ ವಚನಸಾಹಿತ್ಯದ ಪ್ರಕಟನ ಯೋಜನೆ' ಕರ್ನಾಟಕ ಸರ್ಕಾರದ ಈವರೆಗಿನ ಸಾಹಿತ್ಯಕ ಸಾಧನೆಗಳಲ್ಲಿ ಒಂದು ಮಹತ್ವದ ದಾಖಲೆಯಾಗಿದೆ. ಇದು ಒಂದು ಸಾಹಿತ್ಯಕೃತಿಯ ಪ್ರಕಟನೆಯಲ್ಲ; ಒಂದು ಸಾಹಿತ್ಯ ಪ್ರಕಾರದ ಪ್ರಕಟನೆ.

ತತ್ವಕ್ಕೆ ತತ್ವ, ಸಾಹಿತ್ಯಕ್ಕೆ ಸಾಹಿತ್ಯವಾಗಿರುವ 'ವಚನ ವಾಙ್ಮಯ' ಏಕಕಾಲಕ್ಕೆ ಆತ್ಮಕಲ್ಯಾಣವನ್ನೂ ಸಮಾಜ ಕಲ್ಯಾಣವನ್ನೂ ಪ್ರತಿಪಾದಿಸುವ ಮೂಲಕ ಜಾಗತಿಕ ಮಹತ್ವ ಗಳಿಸಿದೆ. ಈ ಮೌಲಿಕ ಸಾಹಿತ್ಯವನ್ನು ಸುಲಭ ಬೆಲೆಯಲ್ಲಿ ಜನತೆಗೆ ಒದಗಿಸುವುದು ಈ ಯೋಜನೆಯ ಉದ್ದೇಶವಾಗಿದೆ.

ಇವತ್ತಿನ ಮಿತಿಗೆ ಸಿಗುವ ಬಸವಯುಗ ಮತ್ತು ಬಸವೋತ್ತರ ಯುಗಗಳ ಎಲ್ಲ ಶರಣರ ಎಲ್ಲ ವಚನಗಳನ್ನು ಸಂಗ್ರಹಿಸಿ, ಸಂಸ್ಕರಿಸಿ, ಪ್ರಕಟಿಸಿದ ಪ್ರಯತ್ನವಿದು. ಈ ಮೂಲಕ ಬಸವಯುಗದ ಹಲವು ಹೊಸ ವಚನಗಳು ಬೆಳಕಿಗೆ ಬರುವುದರೊಂದಿಗೆ, ಬಸವೋತ್ತರ ಯುಗದ ಸಮಗ್ರ ವಚನ ಸಂಪತ್ತು ಪ್ರಥಮಸಲ ಹೊರ ಬರುತ್ತಿರುವುದು ಈ ಯೋಜನೆಯ ವಿಶೇಷ ಸಾಧನೆಯಾಗಿದೆ.

೮೦೦ ವರ್ಷಗಳುದ್ದಕ್ಕೂ ಬೆಳೆದುಬಂದ ಈ ಸಾಹಿತ್ಯದ ವ್ಯಾಪ್ತಿಯನ್ನು ಪ್ರಥಮಬಾರಿ ಗುರುತಿಸಿಕೊಡುತ್ತಿರುವ ಈ ಸಾಹಸದ ಫಲವಾಗಿ, ೨೦ಸಾವಿರ ವಚನಗಳು ಸುಮಾರು ೧೦ಸಾವಿರ ಪುಟ ವ್ಯಾಪ್ತಿಯ ೧೫ ಸಂಪುಟಗಳಲ್ಲಿ (ವಚನ ಪರಿಭಾಷಾಕೋಶ ಸೇರಿ) ಬೆಳಕು ಕಾಣುತ್ತಿವೆ.

ISBN : 81-7713-098-6